# ಬಳ್ಳಾರಿ ಪರಿಸರದ ಕನ್ನಡ - ತೆಲುಗು ದ್ವಿಭಾಷಿಕತೆ

# : ಸಮಾಜೋಭಾಷಿಕ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ


ಸಂಶೋಧಕಿ

ಎಂ. ಭಾಗ್ಯಲಕ್ಷ್ಮಿ

ಮಾರ್ಗದರ್ಶಕರು

ಡಾ. ಕೆ.ವಿ.ನಾರಾಯಣ





ಭಾಷಾನಿಕಾಯ

ಕನ್ನಡ ಭಾಷಾಭಿವೃದ್ಧಿ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - 583 276

2002




# ಬಳ್ಳಾರಿ ಪರಿಸರದ ಕನ್ನಡ - ತೆಲುಗು ದ್ವಿಭಾಷಿಕತೆ : ಸಮಾಜೋಭಾಷಿಕ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಾದರಪಡಿಸಿದ

ಮಹಾಪ್ರಬಂಧ

ಸಂಶೋಧಕಿ

ಎಂ.ಭಾಗ್ಯಲಕ್ಷ್ಮಿ

ಕನ್ನಡ ಭಾಷಾಭಿವೃದ್ಧಿ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - 583 276

ಮಾರ್ಗದರ್ಶಕರು

ಡಾ. ಕೆ.ವಿ.ನಾರಾಯಣ

ಪ್ರಾಧ್ಯಾಪಕರು

ಕನ್ನಡ ಭಾಷಾಭಿವೃದ್ಧಿ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - 583276





ಭಾಷಾನಿಕಾಯ

ಕನ್ನಡ ಭಾಷಾಭಿವೃದ್ಧಿ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - 583276

2002

53

## ದೃಢೀಕರಣ ಪತ್ರ

ಶ್ರೀಮತಿ ಎಂ.ಭಾಗ್ಯಲಕ್ಷ್ಮಿ ಇವರು 'ಬಳ್ಳಾರಿ ಪರಿಸರದ ಕನ್ನಡ - ತೆಲುಗು ದ್ವಿಭಾಷಿಕತೆ: ಸಮಾಜೋಭಾಷಿಕ ಅಧ್ಯಯನ' ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಭಾಷಾ ನಿಕಾಯದ ಕನ್ನಡ ಭಾಷಾಭಿವೃದ್ಧಿ ವಿಭಾಗಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸುತ್ತಿರುವ ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಹೊಸಪೇಟೆ
೨೮.೦೨.೨೦೦೨

ಡಾ. ಕೆ.ವಿ.ನಾರಾಯಣ
ಮಾರ್ಗದರ್ಶಕರು
ಪ್ರಾಧ್ಯಾಪಕರು
ಕನ್ನಡ ಭಾಷಾಭಿವೃದ್ಧಿ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

## ಪ್ರಮಾಣ ಪತ್ರ

ಶ್ರೀಮತಿ ಎಂ.ಭಾಗ್ಯಲಕ್ಷ್ಮಿ ಆದ ನಾನು 'ಬಳ್ಳಾರಿ ಪರಿಸರದ ಕನ್ನಡ - ತೆಲುಗು ದ್ವಿಭಾಷಿಕತೆ : ಸಮಾಜೋಭಾಷಿಕ ಅಧ್ಯಯನ' ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಡಾ. ಕೆ.ವಿ.ನಾರಾಯಣ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಕನ್ನಡ ವಿಶ್ವವಿದ್ಯಾಲಯ ಹಂಪಿಯ ಭಾಷಾ ನಿಕಾಯದ ಕನ್ನಡ ಭಾಷಾಭಿವೃದ್ಧಿ ವಿಭಾಗಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸುತ್ತಿರುವ ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಹೊಸಪೇಟೆ
೨೮.೦೨.೨೦೦೨

M. Bh

ಎಂ. ಭಾಗ್ಯಲಕ್ಷ್ಮಿ
ಸಂಶೋಧಕಿ
ಕನ್ನಡ ಭಾಷಾಭಿವೃದ್ಧಿ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

# ಕೃತಜ್ಞತೆಗಳು

ಕೋಲಾರ ಜಿಲ್ಲೆಯ ದ್ವಿಭಾಷಾ ಪರಿಸರದಲ್ಲಿ ಹುಟ್ಟಿ ಬೆಳೆದ ನನಗೆ ಬಳ್ಳಾರಿ ಜಿಲ್ಲೆಯ ದ್ವಿಭಾಷಾ ಪರಿಸರದಲ್ಲಿ ಬದುಕುವ ಸಂದರ್ಭ ಬಂದಾಗ ಇಲ್ಲಿನ ಭಾಷಿಕರ ಭಾಷಾ ಬಳಕೆಯ ನೆಲೆಗಳು ಹಲವು ರೀತಿಯಲ್ಲಿ ಕುತೂಹಲವನ್ನು ಉಂಟುಮಾಡಿದವು. ಆದ್ದರಿಂದ ಈ ಜಿಲ್ಲೆಯ ಭಾಷಿಕ ಪರಿಸರದಲ್ಲೆ ಸಂಶೋಧನೆಯನ್ನು ಮಾಡಬೇಕೆಂಬ ನಿರ್ಧಾರವನ್ನು ಮಾಡಿಕೊಂಡೆ. ಆಗತಾನೆ ಕನ್ನಡ ಎಂ.ಎ. ಮುಗಿಸಿದ್ದರಿಂದ ಭಾಷಾಶಾಸ್ತ್ರದಲ್ಲಿ ಅದರಲ್ಲೂ ಸಾಮಾಜಿಕ ಭಾಷಾಶಾಸ್ತ್ರದಲ್ಲಿ ಅಧ್ಯಯನ ಮಾಡಬೇಕೆನ್ನುವ ಆಸಕ್ತಿ ಮತ್ತು ಹಟವಿತ್ತು. ಈ ಎರಡರಿಂದಾಗಿ ಅನೇಕ ಒತ್ತಡಗಳ ನಡುವೆಯೂ ಅಧ್ಯಯನ ಪೂರೈಸಲು ಸಾಧ್ಯವಾಯಿತು. ಇದರ ಜೊತೆಗೆ ಈ ಅಧ್ಯಯನದ ಹಿಂದೆ ಉತ್ತಮವಾದ ಮಾರ್ಗದರ್ಶನ, ಹತ್ತು ಹಲವು ಜನರ ಸಹಕಾರ, ಪ್ರೀತಿ ಇದೆ. ಅವರೆಲ್ಲರಿಗೂ ಈ ಸಂದರ್ಭದಲ್ಲಿ ಕೃತಜ್ಞತೆ ಸಲ್ಲಿಸುವುದು ನನ್ನ ಕರ್ತವ್ಯ ಎಂದು ಭಾವಿಸುತ್ತೇನೆ.

1998ನೇ ಸಾಲಿನಲ್ಲಿ ಪಿಎಚ್.ಡಿ. ಅಧ್ಯಯನಕ್ಕೆ ಆಂತರಿಕ ವಿದ್ಯಾರ್ಥಿನಿಯಾಗಿ ಆಯ್ಕೆ ಮಾಡಿ ಅವಕಾಶ ಕಲ್ಪಿಸಿಕೊಟ್ಟು, ನೆರವನ್ನು ನೀಡಿದ ಕನ್ನಡ ವಿಶ್ವವಿದ್ಯಾಲಯಕ್ಕೆ ಮೊದಲು ಹೃತ್ಪೂರ್ವಕ ಕೃತಜ್ಞತೆಗಳು. ಸಂಶೋಧನೆಗೆ ಸಹಕರಿಸಿದ ವಿಶ್ವವಿದ್ಯಾಲಯದ ಆಗಿನ ಕುಲಪತಿಗಳಾದ ಡಾ. ಎಂ.ಎಂ.ಕಲಬುರ್ಗಿ ಅವರಿಗೆ ಹಾಗೂ ಈಗಿನ ಕುಲಪತಿಗಳಾಗಿರುವ ಡಾ. ಎಚ್.ಜೆ.ಲಕ್ಕಪ್ಪಗೌಡ ಅವರಿಗೆ ಹೃತ್ಪೂರ್ವಕ ಕೃತಜ್ಞತೆಗಳು.

ಯಾವುದೇ ಕಾರಣಕ್ಕೂ ಸಂಶೋಧನ ಕಾರ್ಯವನ್ನು ಮಧ್ಯದಲ್ಲಿ ಕೈಬಿಡಬಾರದೆಂಬ ಪ್ರೀತಿಯ ಎಚ್ಚರಿಕೆಯನ್ನು ನೀಡುವುದರೊಂದಿಗೆ ಈ ಅಧ್ಯಯನಕ್ಕೆ ಮಾರ್ಗದರ್ಶಕರಾಗಲು ಒಪ್ಪಿ ಅಧ್ಯಯನದಲ್ಲಿ ಹೊಸ ರೀತಿಯ ಆಲೋಚನಾ ವಿಧಾನಗಳನ್ನು ಪರಿಚಯಿಸಿ; ಅಧ್ಯಯನದ ಪ್ರತಿಹಂತದಲ್ಲೂ ಗ್ರಹಿಕೆಯ ನೆಲೆಗಳನ್ನು ತಿದ್ದಿ, ಅರಿವಿನ ವಿಸ್ತಾರವನ್ನು ಹೆಚ್ಚಿಸಿದ್ದಲ್ಲದೆ, ವಿಭಾಗದ ಚರ್ಚೆ ಹಾಗೂ ಬರವಣಿಗೆಯಲ್ಲಿ ಸಕ್ರಿಯವಾಗಿ ತೊಡಗಿಕೊಳ್ಳಲು ಅವಕಾಶ ಕಲ್ಪಿಸಿಕೊಟ್ಟ ಕುಲಸಚಿವರೂ ಆಗಿರುವ ಡಾ. ಕೆ.ವಿ.ನಾರಾಯಣ ಅವರಿಗೆ ತುಂಬು ಹೃದಯದ ಕೃತಜ್ಞತೆಗಳು.

ಅಧ್ಯಯನದಲ್ಲಿ ಹೊಸರೀತಿಯ ಆಲೋಚನಾ ವಿಧಾನಗಳನ್ನು ಮತ್ತು ಅಧ್ಯಯನದ ವಿಧಿವಿಧಾನಗಳನ್ನು ಪರಿಚಯಿಸಿ, ಅಧ್ಯಯನಕ್ಕೆ ಅಗತ್ಯವಾದ ಕೆಲವು ಇಂಗ್ಲಿಶ್ ಲೇಖನಗಳನ್ನು ಅನುವಾದ ಮಾಡಿಕೊಟ್ಟು, ಚರ್ಚೆಯ ಮೂಲಕ ಓದಿಗೆ ಮತ್ತು ಬರವಣಿಗೆಗೆ ಖಚಿತ ರೂಪ ಬರುವಲ್ಲಿ ಪ್ರೇರಣೆ ನೀಡಿದ ಸ್ನೇಹಿತರಾದ ವಿ.ಬಿ.ತಾರಕೇಶ್ವರ್ ಅವರಿಗೆ,

ಎಂ.ಎ. ತರಗತಿಗಳಲ್ಲಿ ಸಾಮಾಜಿಕ ಭಾಷಾಶಾಸ್ತ್ರವನ್ನು ಪರಿಚಯಿಸುವುದರೊಂದಿಗೆ ಆ ಕ್ಷೇತ್ರದಲ್ಲಿ ಆಸಕ್ತಿಯನ್ನು ಬೆಳೆಸಿ ಈ ವಿಷಯವನ್ನು ಕುರಿತು ಅಧ್ಯಯನ ಮಾಡಲು ಒತ್ತಾಸೆಯಾಗಿ ನಿಂತ ಪ್ರೊ. ಕಿ.ರಂ.ನಾಗರಾಜ, ಡಾ. ಕೃಷ್ಣ ಪರಮೇಶ್ವರ ಭಟ್ಟ, ಡಾ. ಎಚ್.ಎಸ್.ರಾಘವೇಂದ್ರರಾವ್, ಡಾ. ಜಿ.ರವಿ ಅವರಿಗೆ,

ಅಧ್ಯನಾಂಗದ ನಿರ್ದೇಶಕರಾದ ಡಾ. ಹಿ.ಚಿ.ಬೋರಲಿಂಗಯ್ಯ ಅವರಿಗೆ,

ಅಧ್ಯಯನದ ಅವಧಿಯಲ್ಲಿ ಪ್ರೀತಿಯಿಂದ ಸಹಕರಿಸಿದ ಕನ್ನಡ ಭಾಷಾಭಿವೃದ್ಧಿ ವಿಭಾಗದ ಅಧ್ಯಾಪಕರಾದ ಡಾ.ಪಾಂಡುರಂಗಬಾಬು, ಡಾ. ಪಿ.ಮಹಾದೇವಯ್ಯ, ಡಾ. ಸಾಂಬಮೂರ್ತಿ ಅವರಿಗೆ ಮತ್ತು ಸಿಬ್ಬಂದಿ ಕೃಪಾಶಂಕರ್, ಬಿ.ವೆಂಕಟೇಶ್, ಜಿ.ನಾಗರಾಜ್ ಅವರಿಗೆ,

ಅಧ್ಯಯನಕ್ಕೆ ಪೂರಕವಾಗಿ ಸಹಕಾರ ನೀಡಿದ ಶಿವಾನಂದ ವಿರಕ್ತಮಠ, ಕಲವೀರ ಮನ್ವಾಚಾರ್, ಸುಬ್ಬಾನಮೂರ್ತಿ ಅವರಿಗೆ, ಕ್ಷೇತ್ರಕಾರ್ಯದಲ್ಲಿ ವಿಶೇಷವಾಗಿ ಸಹಾಯ ಮಾಡಿದ ಸಂಶೋಧನ ವಿದ್ಯಾರ್ಥಿ ಮಿತ್ರರಾದ ಬಾಜಿ ದೇವೇಂದ್ರಪ್ಪ, ಸಣ್ಣ ಪಾಪಯ್ಯ ಮತ್ತು ಓಂಪ್ರಕಾಶ್ ಅವರಿಗೆ,

ಅಧ್ಯಯನದ ಬಗೆಗೆ ಸದಾ ವಿಚಾರಿಸುತ್ತ ಪ್ರೋತ್ಸಾಹವನ್ನು ಕೊಟ್ಟ ಡಾ. ಎಚ್.ಎಸ್.ಶ್ರೀಮತಿ, ಡಾ. ಮಲ್ಲಿಕಾ ಘಂಟಿ, ನಿರುಪಮ ಮೇಡಂ ಅವರಿಗೆ, ತಾಯಿ ತಂದೆಯರಂತೆ ಪ್ರೀತಿ ತೋರಿ ಅಧ್ಯಯನದುದ್ದಕ್ಕೂ ಪ್ರೋತ್ಸಾಹ ಮತ್ತು ಸಹಕಾರವನ್ನು ನೀಡಿದ ಶಶಿಕಲಾ ಮತ್ತು ಅರುಣ್‌ಕುಮಾರ್ ಮಗೆಣ್ಣನವರ್ ಅವರಿಗೆ,

ಗ್ರಂಥಾಲಯದಲ್ಲಿ ಬೇಕಾದ ಪುಸ್ತಕಗಳನ್ನು ಸಕಾಲದಲ್ಲಿ ಒದಗಿಸುವಲ್ಲಿ ಸಹಕರಿಸಿದ ಜೆ.ಆರ್.ರಾಮಮೂರ್ತಿ, ಹೆಚ್.ನಾಗವೇಣಿ, ಸುಹಾಸ್, ಮಲ್ಲಿಕಾರ್ಜುನ ಮತ್ತು ಗುಡಿಮನಿ ಅವರಿಗೆ,

ಬಳ್ಳಾರಿ, ಸಿರುಗುಪ್ಪಗಳಿಗೆ ಪ್ರತಿಸಲ ಕ್ಷೇತ್ರಕಾರ್ಯಕ್ಕೆ ಹೋದಾಗಲೆಲ್ಲಾ ಪ್ರೀತಿಯಿಂದ ನೋಡಿಕೊಂಡು ಬೇಕಾದ ಮಾಹಿತಿಯನ್ನು ಒದಗಿಸಿ ಸಹಕರಿಸಿದ ಡಾ. ಸಾಯಿನಾಥ್, ನಾಗರತ್ನ ಮತ್ತು ಸೌಮ್ಯಳಿಗೆ, ಪ್ರೇಮಾ ವೆಂಕಟೇಶ್‌ಗೆ, ಸಿ.ಬಿ.ಐ.ನಲ್ಲಿರುವ ವೆಂಕಟೇಶ್ ಮತ್ತು ಅವರ ಪತ್ನಿ ರೇಖಾ ಅವರಿಗೆ, ಸುಶೀಲಾ ಶಿರೂರ್ ಅವರಿಗೆ, ಸಿರುಗುಪ್ಪ ತಾಲೂಕು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಹನುಮಂತರೆಡ್ಡಿ ಅವರಿಗೆ, ಕ್ಷೇತ್ರಕಾರ್ಯದಲ್ಲಿ ಮಾಹಿತಿ ನೀಡಿದ ಅನೇಕ ದ್ವಿಭಾಷಾ ಕುಟುಂಬಗಳಿಗೆ, ಶಾಲಾ ಶಿಕ್ಷಕರಿಗೆ ಮತ್ತು ವಿದ್ಯಾರ್ಥಿ ವೃಂದಕ್ಕೆ, ಸೂಕ್ಷ್ಮ ಅಧ್ಯಯನಕ್ಕೆ ಸಹಕರಿಸಿದ ನಿರ್ಮಲ - ಮನೋಹರ್, ಮಾಲಾ - ವಿಶ್ವನಾಥಶೆಟ್ಟಿ ಮುಂತಾದ ಕುಟುಂಬಗಳ ಸ್ನೇಹಿತರಿಗೆ,

ಅಧ್ಯಯನಕ್ಕೆ ಪರೋಕ್ಷವಾಗಿ ಸಹಕರಿಸಿದ ಶಕುಂತಲ ವಿರಕ್ತಮಠ, ಭಾನು ತರೀಕೆರೆ, ಜಯಪುಟ್ಟಯ್ಯ, ಶಶಿಕುಮಾರ್, ಚಲಪತಿ, ಹೇಮಾ, ಲಕ್ಷ್ಮೀಪತಿ, ಪದ್ಮಾ, ಶಿವಪ್ಪ, ಕೆ.ವೈ.ನಾರಾಯಣ ಸ್ವಾಮಿ ಮುಂತಾದ ಸ್ನೇಹಿತರಿಗೆ,

ಅಧ್ಯಯನದ ಅವಧಿಯಲ್ಲಿ ಸಹಕರಿಸಿದ ಆಡಳಿತಾಂಗ, ಪ್ರಸಾರಾಂಗದ ಸಿಬ್ಬಂದಿ ವರ್ಗಕ್ಕೆ ಹಾಗೂ ಸಂಶೋಧನಾ ವಿದ್ಯಾರ್ಥಿ ಮಿತ್ರರಿಗೆ,

ನನ್ನ ಆಸೆ - ಆಸಕ್ತಿಗಳಿಗೆ ಸದಾ ಸ್ಪಂದಿಸಿ, ಚರ್ಚೆಯ ಮೂಲಕ ಅಧ್ಯಯನಕ್ಕೆ ಪ್ರೋತ್ಸಾಹ, ಸಹಕಾರವನ್ನು ನೀಡುತ್ತಾ ಬಂದಿರುವ ಬಾಳಸಂಗಾತಿ ಅಶೋಕ್‌ಗೆ, ಅಧ್ಯಯನ ಸಂದರ್ಭದಲ್ಲಿ ತೊಂದರೆ ಮತ್ತು ಸಹಕಾರಗಳೆರಡನ್ನೂ ನೀಡಿದ ಮುದ್ದು ಮಗ ನಿಧಿಗೆ,

ಮನೆಯ ಜಂಜಾಟದಿಂದ ಮುಕ್ತಗೊಳಿಸಿ ಅಧ್ಯಯನಕ್ಕೆ ಪರೋಕ್ಷವಾಗಿ ಸಹಕರಿಸಿದ ಪ್ರೀತಿಯ ಸುವರ್ಣಳಿಗೆ,

ಕೌಟುಂಬಿಕ ಒತ್ತಡಗಳನ್ನು ಹೇರದೆ ವಿದ್ಯಾಭ್ಯಾಸದಲ್ಲಿನ ನನ್ನ ಬೆಳವಣಿಗೆಗೆ ಕಾರಣರಾದ ತಾಯಿ, ತಮ್ಮಂದಿರು, ಅತ್ತೆ, ಅಕ್ಕ, ಭಾವ, ಮೈದುನರಿಗೆ,

ಸಮಯಕ್ಕೆ ಸರಿಯಾಗಿ ಅಚ್ಚುಕಟ್ಟಾಗಿ ಡಿ.ಟಿ.ಪಿ. ಮಾಡಿಕೊಟ್ಟ ಸೋಮನಾಥ ಕುಡಿತಿನಿ ಅವರಿಗೆ,

ಪ್ರೀತಿಯ ಕೃತಜ್ಞತೆಗಳು

**ಎಂ. ಭಾಗ್ಯಲಕ್ಷ್ಮಿ**



# ಪರಿವಿಡಿ

■

ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ - ಸ್ವರೂಪ - ವ್ಯಾಪ್ತಿ

ವಿಜ್ಞಾನ ಮತ್ತು ತಂತ್ರಜ್ಞಾನದಿಂದ ಆಧುನೀಕರಣಗೊಂಡ ಜಗತ್ತು ಹಲವಾರು ಕಾರಣಗಳಿಂದ ಕಿರಿದಾಗುತ್ತ ಸಾಗಿದೆ. ಜಗತ್ತಿನ ಜನರು ಒಟ್ಟೊಟ್ಟಿಗೆ ವ್ಯವಹರಿಸಬೇಕಾದ ಸಂದರ್ಭಗಳ ಅನಿವಾರ್ಯ ಉಂಟಾಗಿದೆ. ಒಂದು ಪ್ರದೇಶದಲ್ಲಿ ಜೀವನಪರ್ಯಂತ ಯಾವ ತೊಂದರೆಯೂ ಎದುರಿಸದೆ ಏಕಭಾಷಿಕರಾಗಿ ಬದುಕಬಲ್ಲವರೂ ಅನಿವಾರ್ಯ ಕಾರಣಗಳಿಂದಾಗಿ ಇಂದು ದ್ವಿಭಾಷಿಕರು ಮತ್ತು ಬಹುಭಾಷಿಕರು ಆಗುವ ಸಂದರ್ಭಗಳು ಹೆಚ್ಚಾಗುತ್ತಿವೆ. ಮನುಷ್ಯ ಆಧುನಿಕನಾಗುತ್ತಾ ಹೋದಂತೆ,ಚಿಂತನೆ ಬೆಳೆದಂತೆ, ವಿಜ್ಞಾನ ಮತ್ತು ತಂತ್ರಜ್ಞಾನವೂ ಬೆಳೆದು ಮನುಷ್ಯನ ಬದುಕಿನಲ್ಲಿ ಮಹತ್ತರವಾದ ಬದಲಾವಣೆಗಳಾದವು. ಮನುಷ್ಯನ ಬೆಳವಣಿಗೆಯ ಹಂತಗಳು ಮನುಷ್ಯನನ್ನು ಸಾಮಾಜಿಕವಾಗಿ ಸಂಘಜೀವಿಯಾಗಿ ಬದುಕುವಂತೆ ಮಾಡಿತು. ಹೀಗೆ ಸಮಾಜದಲ್ಲಿ ಬದುಕುವ ಮನುಷ್ಯನಿಗೆ ಭಾಷೆಯೊಂದು ಸಂವಹನ ಮಾಧ್ಯಮವಾಗಿ ಮನುಷ್ಯನ ಯೋಚನೆ, ಚಿಂತನೆ ಎಲ್ಲವೂ ಭಾಷೆಯೊಂದರಿಂದ ಅಭಿವ್ಯಕ್ತವಾಗಲು ಸಾಧ್ಯವಾಯಿತು. ಮನುಷ್ಯನಲ್ಲಿ ಭಾಷೆಗಳು ರೂಪುಗೊಂಡ ಮೇಲೆ ರೂಪುಗೊಂಡ ಭಾಷೆಗಳು ಪರಸ್ಪರ ಸಂಪರ್ಕಗೊಳ್ಳುವ ಅವಕಾಶಗಳೇ ಇರಲಿಲ್ಲ. ಮನುಷ್ಯನ ನಾಗರಿಕ ಹಂತದ ಬೆಳವಣಿಗೆಯಲ್ಲಿನ ಆವಿಷ್ಕಾರಗಳಿಂದಾಗಿ (ಮುಖ್ಯವಾಗಿ ಸಂಪರ್ಕ - ಸಾಧನಗಳು) ದೇಶ ಭಾಷೆಗಳು ಹತ್ತಿರ ಬಂದಿವೆ. ದಿನನಿತ್ಯದ ವ್ಯವಹಾರಗಳಿಗಾಗಿ ಬೇರೆ - ಬೇರೆ ದೇಶದ, ಬೇರೆ ಬೇರೆ ರಾಜ್ಯದ, ಬೇರೆ ಬೇರೆ ಜನಾಂಗದ ಭಾಷಿಕರನ್ನು ಸಂಪರ್ಕಿಸಬೇಕಿದೆ. ಆದಕಾರಣ ಯಾವುದೇ ಸ್ವಭಾಷೆಯ ಜೊತೆಗೆ ಬೇರೊಂದು ಭಾಷೆಯನ್ನು ಕಲಿಯಬೇಕಾದ ಅನಿವಾರ್ಯಗಳು ಸೃಷ್ಟಿಯಾಗಿದೆ.

20ನೆಯ ಶತಮಾನದ ಅಂಚಿನಲ್ಲಿ ತೀವ್ರಗತಿಯಲ್ಲಿ ಉಂಟಾಗಿರುವ ಜಾಗತೀಕರಣ, ಉದಾರೀಕರಣ ಪ್ರಕ್ರಿಯೆಗಳು, ದ್ವಿ-ಬಹುಭಾಷಿಕತೆಯ ಸಂದರ್ಭಗಳನ್ನು ತೀವ್ರಗೊಳಿಸುತ್ತಿವೆ. ಇದು ಎರಡನೇ ಜಾಗತಿಕ ಮಹಾಯುದ್ಧಾನಂತರದಲ್ಲಿ ಉಂಟಾದ ದ್ವಿಭಾಷಿಕತೆಯ ಪ್ರಮಾಣಕ್ಕಿಂತ ಹಲವಾರು ಪಟ್ಟು ಹೆಚ್ಚಾಗಿದ್ದು ಪ್ರತಿಯೊಂದು

ದ್ವಿಭಾಷಾ ಪರಿಸರಗಳು ಸ್ವರೂಪದಲ್ಲಿ ಪರಿಣಾಮದಲ್ಲಿ ವಿಭಿನ್ನವಾಗಿರುವ ಹಾಗಿದೆ. ಇದಲ್ಲದೆ ಆಧುನಿಕತೆಯಿಂದಾದ ತಂತ್ರಜ್ಞಾನದ ಬೆಳವಣಿಗೆಯಲ್ಲಿ ವಲಸೆಯ ಪ್ರಮಾಣ ಹೆಚ್ಚಾಗುತ್ತಿದೆ. ಇದರಿಂದ ದ್ವಿಭಾಷಿಕತೆಯ ಸಂದರ್ಭಗಳು ವ್ಯಾಪಕವಾಗಿವೆ. ಆದರೆ ದ್ವಿಭಾಷಾ ಸಂದರ್ಭಗಳ ಹರಡುವಿಕೆಯನ್ನು ಕುರಿತಂತೆ ವ್ಯಾಪಕವಾದ ಅಧ್ಯಯನಗಳು ಆಗಿಲ್ಲ. ದ್ವಿಭಾಷಾ ಸಂದರ್ಭಗಳು ಭಾರತದಲ್ಲಿ ಇತ್ತಾದರೂ, ಶಾಸ್ತ್ರೀಯವಾಗಿ ದ್ವಿಭಾಷಾ ಸಂದರ್ಭಗಳ ಬಗೆಗೆ ನಡೆದಿರುವ ಅಧ್ಯಯನಗಳನ್ನು ಗುರುತಿಸುವುದು ಗುಂಫರ್ಜ್ (1964a), (1971) ಅವರಿಂದ ಭಾರತದಲ್ಲಿ ದ್ವಿಭಾಷಾ ಸಂದರ್ಭಗಳನ್ನು ಕುರಿತಾದ ಅಧ್ಯಯನಗಳಿಗೆ ಇವರ ಅಧ್ಯಯಮಗಳು ಪ್ರಾರಂಭಿಕ ಪ್ರೇರಣೆಯನ್ನು ಒದಗಿಸಿಕೊಟ್ಟವೆ. ದ್ವಿಭಾಷಿಕತೆಗೆ ಸಂಬಂಧಿಸಿದ ಸಾಮಗ್ರಿಗಳನ್ನು ಒಳಗೊಂಡ 1961 ನೆಯ ಜನಗಣತಿಯ ವರದಿಯು ಪ್ರಕಟವಾದ ನಂತರ ಭಾರತದಲ್ಲಿ ದ್ವಿ-ಬಹುಭಾಷಿಕತೆಯ ಬಗೆಗೆ ವಿಶೇಷವಾದ ಗಮನಹರಿಸಲಾಯಿತು. ಇಂಥ ಸಂದರ್ಭದಲ್ಲಿ ನಡೆದ ಖುಬ್ ಚಂದಾನಿ (1972)ಯವರ ಮುಂಚೂಣಿಯ ಅಧ್ಯಯನವು ಮುಂದಿನ ದ್ವಿ - ಬಹುಭಾಷಿಕತೆಯ ಕ್ಷೇತ್ರದಲ್ಲಿನ ಕೆಲಸಗಳಿಗೆ ಒಂದು ಮಾದರಿಯನ್ನು ಒದಗಿಸಿಕೊಡುತ್ತದೆ. ನಂತರದಲ್ಲಿ ಭಾರತದ ಇತರ ಭಾಷೆಗಳಿಗೆ ಸಂಬಂಧಪಟ್ಟಂತೆ ದ್ವಿಭಾಷಿಕತೆಯನ್ನು ಕುರಿತು ಹಲವು ಅಧ್ಯಯನಗಳಾಗಿವೆ. ದ್ರಾವಿಡ ಭಾಷೆಗಳಲ್ಲಿ ತಮಿಳು, ಮಲೆಯಾಳಂ, ತೆಲುಗು ಭಾಷೆಗಳ ದ್ವಿಭಾಷಾ ಸಂದರ್ಭಗಳನ್ನು ಕುರಿತಂತೆ ನಡೆದಿರುವ ಕೆಲವು ಅಧ್ಯಯನಗಳಷ್ಟೂ ಕನ್ನಡದ ಸಂದರ್ಭದಲ್ಲಿ ನಡೆದಿಲ್ಲ. ಕನ್ನಡದ ಸಂದರ್ಭದಲ್ಲಿ ದ್ವಿಭಾಷಿಕತೆಯನ್ನು ಕುರಿತಂತೆ ನಡೆದಿರುವ ಅಧ್ಯಯನಗಳು ಬೆರಳೆಣಿಕೆಯಷ್ಟು ಮಾತ್ರ. ಕನ್ನಡದ ಮಾಹಿತಿಯನ್ನು ಬಳಸಿಕೊಂಡು ರಾಷ್ಟ್ರೀಯ ಮತ್ತು ಅಂತರ ರಾಷ್ಟ್ರೀಯ ಮಟ್ಟದಲ್ಲು ಕೇವಲ ಕೆಲವೇ ಅಧ್ಯಯನಗಳು ದ್ವಿಭಾಷಾ ಸಂದರ್ಭಗಳನ್ನು ಕುರಿತಂತೆ ನಡೆದಿವೆ. ಕನ್ನಡದ ಸಂದರ್ಭದಲ್ಲಿ ಅನೇಕ ಶತಮಾನಗಳ ಹಿಂದಿನಿಂದಲೂ ದ್ವಿಭಾಷಾ ಸಂದರ್ಭಗಳಿರುವುದು ಆಧಾರಗಳಿಂದ ತಿಳಿದುಬರುತ್ತದೆಯಾದರೂ ಅದರ ಸ್ವರೂಪ ಮತ್ತು ಪರಿಣಾಮಗಳನ್ನು ಕುರಿತಂತೆ ಮಾಹಿತಿ ಇಲ್ಲ.

ಭಾಷಾ ಅಧ್ಯಯನವು ಮುಖ್ಯವಾಗಿ ಒಂದು ಶಿಸ್ತಾಗಿ ರೂಪಗೊಂಡಿದ್ದು ಪಶ್ಚಿಮದ ರಾಷ್ಟ್ರಗಳಲ್ಲೇ. ಆದರೆ ಈ ರಾಷ್ಟ್ರಗಳಲ್ಲಿ ಬ್ಲೂಮ್‌ಫೀಲ್ಡ್‌ನವರೆಗಿನ ಭಾಷಾಧ್ಯಯನಗಳು ಏಕಭಾಷಿಕ ದೃಷ್ಟಿಕೋನದಲ್ಲೆ ನಡೆದಿರುವಂಥದ್ದು. ನಂತರ ಭಾಷಾಶಾಸ್ತ್ರದ ಮೂಲ ಸಮಸ್ಯೆ 'ದ್ವಿಭಾಷಿಕತೆ' ಎಂದು ಗುರುತಿಸಿ ದ್ವಿಭಾಷಿಕತೆಯ ಪರಿಕಲ್ಪನೆಯನ್ನು ಹುಟ್ಟುಹಾಕಿದ ಆಧುನಿಕ ಭಾಷಾ ವಿಜ್ಞಾನಿಗಳು ದ್ವಿಭಾಷಿಕತೆ ಮತ್ತು ಭಾಷಾ ಸಂಪರ್ಕ ಕ್ಷೇತ್ರದ ಆಯಾಮಗಳ ಚರ್ಚೆಗಳೊಂದಿಗೆ ಅಧ್ಯಯನದ ವಿಧಿವಿಧಾನಗಳು, ಸೈದ್ಧಾಂತಿಕ ಚೌಕಟ್ಟನ್ನು ದ್ವಿಭಾಷಿಕತೆಯ ಅಧ್ಯಯನಕ್ಕೆ ರೂಪಿಸಿದರು. ಇದರ ಮೂಲಕ ವಲಸಿಗ ಅಲ್ಪಸಂಖ್ಯಾತ, ಸ್ಥಳೀಯ ಅಲ್ಪಸಂಖ್ಯಾತರ ವಿವಿಧ ಸಮಾಜೋಭಾಷಿಕ ಸ್ಥಿತಿಗತಿಗಳನ್ನು ಕುರಿತು ಅಧ್ಯಯನಗಳನ್ನು ನಡೆಸಲಾಗಿದೆ. ಇಂಥ ಅಧ್ಯಯನಗಳು ಅಂತರ್ ಶಿಸ್ತೀಯವಾಗಿದ್ದು ವಿವಿಧ ಸಮಾಜ ವಿಜ್ಞಾನ ಶಾಖೆಗಳಿಂದ ಪ್ರಭಾವಿತವಾಗಿತ್ತಲ್ಲದೆ, ಒಂದು ಭಾಷಿಕ ಸಮುದಾಯದಲ್ಲಿನ ಹಲವು ವಿಷಯಗಳನ್ನು ಕುರಿತ

ಚಿತ್ರಣ ಈ ಅಧ್ಯಯನಗಳಲ್ಲಿ ದೊರೆಯುತ್ತದೆ. ಜೊತೆಗೆ ದ್ವಿಭಾಷಿಕ ಸಮುದಾಯಗಳ ಭಾಷಾ ಬಳಕೆಯ ಮಾದರಿಗಳ ಸಮಾಜೋಭಾಷಿಕ ವಿಶ್ಲೇಷಣೆಯು ಸಮಾಜ ಸಿದ್ಧಾಂತಗಳ ಬೆಳವಣಿಗೆಗಳಲ್ಲಿ ಹೊಸ ದಾರಿಗಳನ್ನು ತೋರಿದೆ. ಆದರೆ ಭಾರತದ ಸಂದರ್ಭದಲ್ಲಿ ದ್ವಿಭಾಷಿಕತೆಯ ಅಧ್ಯಯನಗಳಿಗೆ ಅಧ್ಯಯನದ ವಿಧಿವಿಧಾನಗಳನ್ನು ರೂಪಿಸುವಲ್ಲಿ, ಸಮಾಜೋಭಾಷಿಕ ಶಿಸ್ತಿಗೆ ಅಧ್ಯಯನ ಚೌಕಟ್ಟನ್ನು ಅಳವಡಿಸುವಲ್ಲಿ ಸೈದ್ಧಾಂತಿಕ ಚೌಕಟ್ಟನ್ನು ಸಿದ್ಧಪಡಿಸುವಲ್ಲಿ ಇನ್ನು ಹಲವು ಸಮಸ್ಯೆಗಳಿವೆ. ವಾಸ್ತವವಾಗಿ ಇಲ್ಲಿನ ಭಾಷಿಕ ಸ್ಥಿತಿ ಮತ್ತು ಸಮಾಜದ ರಚನೆಗೂ, ಪಶ್ಚಿಮದ ಭಾಷಿಕ ಮತ್ತು ಸಾಮಾಜಿಕ ಸ್ಥಿತಿಗಳ ನಡುವೆ ಹಲವು ವ್ಯತ್ಯಾಸಗಳಿವೆ. ಆದ್ದರಿಂದ ಪಶ್ಚಿಮದ ದ್ವಿಭಾಷಿಕ ಅಧ್ಯಯನಗಳ ವಿಧಿವಿಧಾನಗಳನ್ನಾಗಲಿ, ಸೈದ್ಧಾಂತಿಕ ಚೌಕಟ್ಟನ್ನಾಗಲಿ ಭಾರತದ ಸಂದರ್ಭದ ದ್ವಿಭಾಷಾ ಸಂದರ್ಭಗಳಲ್ಲಿ ಅಳವಡಿಸಿಕೊಳ್ಳುವಲ್ಲಿ ಎಚ್ಚರಿಕೆ ಇರಬೇಕು. ಜೊತೆಗೆ ಭಾರತದ ಪ್ರತಿಯೊಂದು ದ್ವಿಭಾಷಾ ಪರಿಸರಗಳು ಸಹ ಸ್ವರೂಪದಲ್ಲಿ ಮತ್ತು ಪರಿಣಾಮದಲ್ಲಿ ಭಿನ್ನವಾಗಿವೆ. ಇದನ್ನು ಒಂದೇ ದ್ವಿಭಾಷಾ ಪರಿಸರಗಳಿರುವ (ಕನ್ನಡ - ತೆಲುಗು) ಎರಡು ಜಿಲ್ಲೆಗಳಲ್ಲಿ ಹೇಗೆ ದ್ವಿಭಾಷಾ ಸಂದರ್ಭಗಳು ಭಿನ್ನವಾಗಿವೆ ಎಂಬುದನ್ನು ಅಧ್ಯಯನದ ಮೂಲಕ ತಿಳಿಯಬಹುದಾಗಿದೆ. ಆದ್ದರಿಂದ ಭಾರತದಲ್ಲಿ ದ್ವಿಭಾಷಾ ಸಂದರ್ಭಗಳನ್ನು ಅಧ್ಯಯನ ಮಾಡುವಾಗ ಪ್ರತಿಯೊಂದು ದ್ವಿಭಾಷಾ ಸಂದರ್ಭಗಳಿಗೆ ತಕ್ಕಂತೆ ಅಧ್ಯಯನದ ವಿಧಿವಿಧಾನಗಳನ್ನು ರೂಪಿಸುವ ಅಗತ್ಯವಿದೆ. ಜೊತೆಗೆ ಭಾರತದಲ್ಲಿ ನಡೆಯುತ್ತಿರುವ ಭಾಷಾಧ್ಯಯನಗಳಲ್ಲಿ "ಭಾಷೆಯನ್ನು ಒಂದು ವಸ್ತುವನ್ನಾಗಿ ಭಾಷಾಧ್ಯಯನಕಾರರು ನೋಡುತ್ತಿದ್ದಾರೆಯೇ ವಿನಹ ಭಾಷೆಯ ಕಾರ್ಯಗಳ ಬಗೆಗಾಗಲಿ ಅದರ ಬಳಕೆಯ ನೆಲೆಗಳನ್ನು ಕುರಿತಾಗಲಿ ಅಧ್ಯಯನಗಳು ಆಗುತ್ತಿಲ್ಲ" ಎಂದು ಯಮುನ ಕಾಛ್ರು (1995:14) ರವರು ಹೇಳಿದ್ದಾರೆ. ಜೊತೆಗೆ ಭಾರತದಲ್ಲಿನ ಭಾಷಾಧ್ಯಯನದ ನೆಲೆಗಳನ್ನು ಕುರಿತು ಹೇಳುತ್ತ ಭಾಷಾ ಸಂಶೋಧನೆಗೆ ಸಂಬಂಧಿಸಿದ ಹಲವು ವಿಷಯಗಳನ್ನು ಪ್ರಸ್ತಾಪಿಸಿದ್ದಾರಲ್ಲದೆ ಭಾರತದ ಸಂದರ್ಭದಲ್ಲಿ ನಡೆಯುವ ಭಾಷಾ ಅಧ್ಯಯನವು ಹೊಸರೀತಿಯ ವಿಧಿವಿಧಾನಗಳನ್ನು, ಸೈದ್ಧಾಂತಿಕ ಚೌಕಟ್ಟನ್ನು, ರೂಪಿಸಿಕೊಳ್ಳುವ ಅಗತ್ಯವನ್ನು ಕುರಿತು ಹೇಳಿದ್ದಾರೆ.

ಜಾಗತೀಕರಣ ಸಂದರ್ಭದಲ್ಲಿ ಬದಲಾಗುತ್ತಿರುವ ಪರಿಸ್ಥಿತಿಯ ಒತ್ತಡಗಳನ್ನು ಎದುರಿಸಲು ಉನ್ನತ ಮಟ್ಟದ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ, ಮತ್ತು ಅಧಿಕಾರದ ಸ್ಥಾನಮಾನಗಳನ್ನು ಪಡೆಯುವುದಕ್ಕಾಗಿ ಭಾಷಿಕರು ಪ್ರಜ್ಞಾಪೂರ್ವಕವಾಗಿ ದ್ವಿಭಾಷಿಕರಾಗುತ್ತಿರುವ ಪ್ರಮಾಣ ಹೆಚ್ಚಾಗಿ ಕಾಣುವಂತಿದೆ.ಇಂಥ ದ್ವಿಭಾಷಿಕತೆ ಉಂಟಾಗುವ ಪ್ರಕ್ರಿಯೆ ತುಂಬಾ ಕುತೂಹಲಕಾರಿಯಾಗಿದೆ. ಅಲ್ಲದೆ ದ್ವಿಭಾಷಿಕತೆಯ ವಲಯ ಕ್ರಮೇಣ ಹೆಚ್ಚಾಗುತ್ತ ಬಂದು ಹಲವಾರು ಕಾರಣಗಳಿಂದ ಉಂಟಾದ ದ್ವಿಭಾಷಿಕತೆಯಲ್ಲಿ ಭಾಷಾ ಸಂಪರ್ಕದಿಂದ ಭಾಷಾ ಸನ್ನಿವೇಶಗಳು, ಭಾಷಾ ಬದಲಾವಣೆಗಳು, ಭಾಷಿಕ ವ್ಯತ್ಯಾಸಗಳು ಕಾಣಿಸಿಕೊಳ್ಳಲು ಪ್ರಾರಂಭವಾಗಿವೆ. ದ್ವಿಭಾಷಾ ಸಂದರ್ಭದಲ್ಲಿ ಉಂಟಾಗುತ್ತಿರುವ ಭಾಷಾ ಸನ್ನಿವೇಶಗಳು, ಭಾಷಾ ಬದಲಾವಣೆಗಳು, ವ್ಯತ್ಯಾಸಗಳು ಅವುಗಳ ಬಳಕೆಯ ನೆಲೆಗಳನ್ನು ಕುರಿತು ಅಧ್ಯಯನ

ಮಾಡುವುದು ಆಸಕ್ತಿಯ ವಿಷಯವಾಗಿದೆ. ದ್ವಿಭಾಷಾ ಸಂದರ್ಭಗಳನ್ನು ಕುರಿತು ನಡೆಸುವ ಅಧ್ಯಯನಗಳಿಂದಾಗಿ ಒಂದು ರಾಷ್ಟ್ರದ, ಒಂದು ರಾಜ್ಯದ ಭಾಷಾ ಯೋಜನೆಗಳನ್ನು ರೂಪಿಸುವಲ್ಲಿ ಭಾಷಿಕರ ಮತ್ತು ಭಾಷೆಯ ಸ್ಥಿತಿ ಗತಿಗಳನ್ನು ತಿಳಿಯುವಲ್ಲಿ, ದ್ವಿಬಹುಭಾಷಿಕ ಪರಿಸರಗಳಿಗೆ ಶಿಕ್ಷಣದ ಯೋಜನೆಗಳನ್ನು ರೂಪಿಸುವಲ್ಲಿ ಇಂಥ ಅಧ್ಯಯನಗಳು ಉಪಯುಕ್ತವಾಗುತ್ತವೆ.

ತೆಲುಗು ಭಾಷೆಯು ಭಾರತದಲ್ಲಿ ಹಿಂದಿಯ ನಂತರ, ಕರ್ನಾಟಕದಲ್ಲಿ ಕನ್ನಡ ಮತ್ತು ಉರ್ದು ಭಾಷೆಗಳ ನಂತರ ಬಹುಸಂಖ್ಯಾತರು ಬಳಸುವ ಭಾಷೆಯಾಗಿದೆ. ಇದು ಕನ್ನಡದಂತೆ ದ್ರಾವಿಡ ಭಾಷಾ ಕುಟುಂಬಕ್ಕೆ ಸೇರಿದ ಭಾಷೆ. ಆದರೆ ತೆಲುಗು ಮಧ್ಯ ದ್ರಾವಿಡ ಉಪಕುಟುಂಬಕ್ಕೆ ಸೇರಿದ ಭಾಷೆಯಾಗಿದೆ. ಕರ್ನಾಟಕದ ಪೂರ್ವಕ್ಕೆ ಬೀದರ್‌ನಿಂದ ಕೋಲಾರದವರೆಗಿನ ಬಹಳ ಉದ್ದದ ಆಂಧ್ರದ ಗಡಿ ಕರ್ನಾಟಕದ ಹಲವಾರು ಜಿಲ್ಲೆಗಳನ್ನು ಸಂಧಿಸಿದೆ. ಆಂಧ್ರಪ್ರದೇಶಕ್ಕೆ ಹೊಂದಿಕೊಂಡಿರುವ ಕರ್ನಾಟಕದ ಗಡಿ ಜಿಲ್ಲೆಗಳಲ್ಲಿ ತೆಲುಗು ಸ್ವಭಾಷಿಕರು ಹೆಚ್ಚು ಸಂಖ್ಯೆಯಲ್ಲಿಯೂ, ಇತರೆಡೆಗಳಲ್ಲಿ ಚದುರಿದಂತೆಯೂ ಇದ್ದಾರೆ. ಕೋಲಾರ ಜಿಲ್ಲೆಯಲ್ಲಿ ಇವರ ಶೇಕಡವಾರು ಪ್ರಮಾಣ ಇತರ ಜಿಲ್ಲೆಗಳಿಗಿಂತ ಹೆಚ್ಚಾಗಿದೆ. ಆದ್ದರಿಂದ ಕರ್ನಾಟಕ ಆಂಧ್ರ ಗಡಿಭಾಗದ ಭಾಷಿಕರು ಚಾರಿತ್ರಿಕ ಕಾರಣಗಳಿಂದಲೂ ಕನ್ನಡಿಗರು ತೆಲುಗರೊಂದಿಗೆ, ತೆಲುಗರು ಕನ್ನಡಿಗರೊಂದಿಗೆ ವ್ಯವಹರಿಸುತ್ತಾರೆ. ಇದರಿಂದಾಗಿ ತೆಲುಗು - ಕನ್ನಡ, ಕನ್ನಡ - ತೆಲುಗು ಭಾಷೆಯ ಹಲವಾರು ಪ್ರಭೇದಗಳು ಪ್ರತಿಯೊಂದು ಜಿಲ್ಲೆಯಿಂದ ಜಿಲ್ಲೆಗೆ ಭಿನ್ನವಾಗಿವೆ. ಜೊತೆಗೆ ಜಿಲ್ಲೆ ಪುನರ್ ವಿಂಗಡಣೆಯ ಕಾಲದಲ್ಲಿ ಆಧರಿಸಿದ ಭೌಗೋಳಿಕ ಭಾಷಿಕ ಮೇರೆಗಳು ಹಿಂದೆ ಇರಲಿಲ್ಲ. ಆಂಧ್ರಕ್ಕೂ ಕರ್ನಾಟಕಕ್ಕೂ ಸೇರಿರುವ ಎಷ್ಟೋ ಭಾಗಗಳು ಹಿಂದೆ ಒಬ್ಬನೇ ರಾಜನ ಆಡಳಿತಕ್ಕೆ ಇಲ್ಲವೆ, ಒಂದೇ ಸಾಮ್ರಾಜ್ಯದ ತೆಕ್ಕೆಗೊಳಪಟ್ಟಿದ್ದವು. ಅಂದಿನ ವಿಜಯನಗರ ಸಾಮ್ರಾಜ್ಯದಲ್ಲಿ ಇಂದಿನ ಆಂಧ್ರದ ಅರ್ಧಭಾಗವೇ ಒಳಪಟ್ಟಿತ್ತು. 12ನೇ ಶತಮಾನದ ತನಕ ಒಂದೇ ರಾಜ್ಯದ ಸೀಮಾರೇಖೆಯಲ್ಲಿ ಈ ಎರಡೂ ಭಾಷಾ ಪ್ರದೇಶಗಳ ಬಹುಭಾಗ ಅಂತರ್ಗತವಾಗಿತ್ತು ಎಂಬ ಸಂಗತಿಗಳು ಇತಿಹಾಸದ ಪುಟಗಳಿಂದ ತಿಳಿದು ಬರುತ್ತದೆ. ಬಳ್ಳಾರಿ ಜಿಲ್ಲೆಯು ಚಾರಿತ್ರಿಕ ಮತ್ತು ಆಧುನಿಕತೆಯ ಕಾರಣಗಳಿಂದಾಗಿ ದ್ವಿ - ಬಹುಭಾಷಾ ಪ್ರದೇಶವಾಗಿದ್ದು ಬಹುಸಂಖ್ಯಾತ ಕನ್ನಡ ಭಾಷಿಕರ ಜೊತೆಗೆ ತಮಿಳರು, ಉರ್ದುಭಾಷಿಕರು, ಮಾರ್ವಾಡಿಗಳು, ಹಿಂದಿಯವರು ಮತ್ತು ಇತರ ಭಾಷಿಕರನೇಕರು ಇಲ್ಲಿ ನೆಲೆಸಿದ್ದಾರೆ. ಇದಲ್ಲದೆ ಆಂಧ್ರದೊಂದಿಗಿನ ವೈವಾಹಿಕ ಸಂಬಂಧಗಳು, ವ್ಯಾಪಾರ, ವಾಣಿಜ್ಯ, ರಾಜಕೀಯ ಸಂಬಂಧಗಳು ನಿರಂತರವಾಗಿ ಈ ಪ್ರದೇಶದ ಹಲವು ಭಾಷಿಕರ ನಡುವೆ ಇರುವುದರಿಂದ ದ್ವಿಭಾಷಿಕತೆಯು ಈ ಪರಿಸರದಲ್ಲಿ ಸೃಷ್ಟಿಯಾಗಿದೆ. ಹಾಗೆಯೆ ದ್ವಿಭಾಷಿಕತೆಯ ಸ್ವರೂಪ, ಪ್ರಮಾಣ ಅವಶ್ಯಕತೆಗಳು ದ್ವಿಭಾಷಿಕತೆಯನ್ನು ನಿರ್ವಹಿಸುವ ನೆಲೆಯಲ್ಲೂ ಭಿನ್ನವಾಗಿರಬಹುದು. ಆದ್ದರಿಂದ ತೆಲುಗುವಿನೊಂದಿಗಿನ ಕನ್ನಡದ ಸಂಬಂಧ ಈ ಅಧ್ಯಯನದ ಆಸಕ್ತಿಯಾಗಿದೆ. ಇದರಲ್ಲಿ ತೆಲುಗು ಕನ್ನಡ ದ್ವಿಭಾಷಾ ಸಂದರ್ಭವನ್ನು ಕುರಿತು ಅಧ್ಯಯನ ಮಾಡುವುದು ಅಧ್ಯಯನದ ಉದ್ದೇಶಗಳಲ್ಲಿ ಒಂದಾಗಿದೆ.

ಬಳ್ಳಾರಿ ಪರಿಸರದಲ್ಲಿ ದ್ವಿಭಾಷಿಕತೆಯು ಯಾವ ಯಾವ ಕಾರಣಗಳಿಗಾಗಿ ಉಂಟಾಗಿದೆ, ಅದರ ಸ್ವರೂಪವೇನು, ಪರಿಣಾಮಗಳೇನು? ದ್ವಿಭಾಷಿಕತೆಯ ಸಂರಚನೆಯ ಸ್ವರೂಪದಲ್ಲಿ ಜಾತಿ, ಲಿಂಗ, ವರ್ಗ, ವೃತ್ತಿ ಆಧಾರಿತ ವ್ಯತ್ಯಾಸಗಳಿವೆಯೇ? ದ್ವಿಭಾಷಿಕತೆಯಿಂದಾಗಿ ಇಲ್ಲಿ ಉಂಟಾಗಿರುವ ಭಾಷಿಕ ಸನ್ನಿವೇಶಗಳು ಎಂಥವು? ದ್ವಿಭಾಷಿಕರಾದವರಲ್ಲಿ ತಲೆಮಾರುಗಳಲ್ಲಿನ ಭಾಷಾ ಸಂಗೋಪನೆ ಮತ್ತು ಭಾಷಾ ಪಲ್ಲಟಗಳ ಸ್ವರೂಪವೆಂಥದ್ದು? ಎಂಬ ಹಲವು ಸಂಶೋಧನ ಪ್ರಶ್ನೆಗಳಿಗೆ ಉತ್ತರಗಳನ್ನು ಹುಡುಕಲು ಪ್ರಯತ್ನಿಸುವುದು ಅಧ್ಯಯನದ ಮುಖ್ಯ ಉದ್ದೇಶಗಳಲ್ಲಿ ಒಂದಾಗಿದೆ. ಅನೇಕ ಶತಮಾನಗಳ ಭಾಷಾ ಸಂಪರ್ಕದಿಂದಾಗಿ ಗ್ರಾಮ ಮಹಾರಾಷ್ಟ್ರದ ಕುಪ್ಪವಾರ್‌ನಲ್ಲಿ ಕನ್ನಡ - ಉರ್ದು - ಮರಾಠಿ ಭಾಷೆಗಳ ಸಂಪರ್ಕದಿಂದಾಗಿ ಕನ್ನಡ ವ್ಯಾಕರಣ ಹಂತದಲ್ಲಾಗಿರುವ ಬದಲಾವಣೆಗಳಿಂದಾಗಿ ಪ್ರಮಾಣ ಕನ್ನಡದಲ್ಲಿ 'ಈ' ಮತ್ತು 'ಇದು' ಎಂಬ ಸರ್ವನಾಮಗಳನ್ನು ಬಳಸುವಾಗ ವಾಕ್ಯದಲ್ಲಿ ಉಂಟಾಗುವ ಬದಲಾವಣೆಗಳು ಕುಪ್ಪವಾರ್ ಕನ್ನಡದಲ್ಲಿ ಇಲ್ಲ. ಕನ್ನಡದಲ್ಲಿ ಅವಶ್ಯಕಾಣದ 'be' ಅರ್ಥದ ಕ್ರಿಯಾಪದವನ್ನು ಕುಪ್ಪವಾರ್ ಕನ್ನಡ (ಐತಿ) ಬಳಸುತ್ತಿದೆ. ಇವೆರಡೂ ವ್ಯಾಕರಣದ ನೆಲೆಯಲ್ಲಿ ಆಗಿರುವ ಪ್ರಭಾವಗಳೇ ಆಗಿವೆ. ಉರ್ದು ಆಡಳಿತ ಭಾಷೆಯಾಗಿದ್ದ ಉತ್ತರ ಕರ್ನಾಟಕದ ಬೀದರ್, ಗುಲಬರ್ಗಾ ಪ್ರದೇಶಗಳಲ್ಲಿ ಕನ್ನಡದ ವ್ಯಾಕರಣದ ಮೇಲೆ ಆಗಿರುವ ಉರ್ದು ಭಾಷಾ ಪ್ರಭಾವದಿಂದ 'ಬಿ' ಎನ್ನುವ ಉರ್ದು ಪ್ರತ್ಯಯ ಅಂವಬಿ, ನಾಬಿ, ನೀಬಿ ಎಂದು ಕನ್ನಡದ ಪ್ರತ್ಯಯವಾಗಿ ಬಳಕೆಯಾಗುತ್ತಿರುವ ಸಂಗತಿಯೊಂದು ಈ ಪ್ರದೇಶಗಳಲ್ಲಿನ ಜನರ ಆಡು ಮಾತನ್ನು ಗಮನಿಸಿದರೆ ತಿಳಿಯುತ್ತದೆ. ಈ ರೀತಿಯ ಪ್ರಭಾವ ಬಳ್ಳಾರಿ ಕನ್ನಡದಲ್ಲಿ ನಡೆದಿದೆಯೇ ಎನ್ನುವುದೂ ಕುತೂಹಲವಾಗಿದೆ. ತೆಲುಗು - ಕನ್ನಡ ದ್ವಿಭಾಷಿಕರ ಬಳಕೆಯ ನೆಲೆಯಲ್ಲಿ ತೆಲುಗು ಭಾಷೆಯ ಮೌಖಿಕ ರಚನೆಗಳು ಹೇಗಿವೆ ಎನ್ನುವುದೂ ಅಧ್ಯಯನದ ಒಂದು ಗುರಿ. ದ್ವಿಭಾಷಿಕರಾಗುವ ಅವಶ್ಯಕತೆಗಳು ಯಾರಿಗಿದೆ, ದ್ವಿಭಾಷಿಕರಾದವರು ಮತ್ತು ಏಕಭಾಷಿಕರು ದ್ವಿಭಾಷಿಕತೆಯ ಸಂದರ್ಭವೊಂದನ್ನು ಹೇಗೆ ನಿರ್ವಹಿಸುತ್ತಾರೆ, ಯಾರಿಗೆ ದ್ವಿಭಾಷಿಕತೆ ಸಂದರ್ಭಗಳು ಕಷ್ಟಕರವಾಗಿವೆ ಎಂಬುದನ್ನು ಅಧ್ಯಯನ ಮಾಡುವುದು ಅಧ್ಯಯನದ ಉದ್ದೇಶಗಳಲ್ಲಿ ಒಂದಾಗಿದೆ.

ಐತಿಹಾಸಿಕವಾಗಿ ಮತ್ತು ಆಧುನಿಕತೆಯಿಂದುಂಟಾದ ದ್ವಿಭಾಷಿಕತೆಯ ಸ್ವರೂಪ, ಪ್ರಮಾಣ ಮತ್ತು ಪರಿಣಾಮಗಳನ್ನು ತಿಳಿಯಲು ಸಾಮಾಜಿಕ ಭಾಷಾಶಾಸ್ತ್ರದ ಶಿಸ್ತಿಗೆ ಈ ಅಧ್ಯಯನದ ಚೌಕಟ್ಟನ್ನು ಅಳವಡಿಸಿಕೊಳ್ಳಲಾಗಿದೆ. ಪಶ್ಚಿಮ ಸಂದರ್ಭದ ಯಾವುದೇ ಅಧ್ಯಯನ ಸಿದ್ಧಾಂತಗಳನ್ನು ಈ ಸಂಶೋಧನೆಗೆ ಅನ್ವಯಿಸಿಕೊಳ್ಳದೆ ಇಲ್ಲಿನ ಭಾಷಿಕ ಸ್ಥಿತಿಗೆ ಅನುಗುಣವಾಗಿ ಅಧ್ಯಯನಕ್ಕೆ ಬೇಕಾದ ವಿಧಿವಿಧಾನವನ್ನು ರೂಪಿಸಿಕೊಳ್ಳಲಾಗಿದೆ. ಇದರ ಮೂಲಕ ಸಮಾಜೋಭಾಷಿಕ ಅಂಶಗಳು ದ್ವಿಭಾಷಿಕರ ಕಲಿಕೆ - ಬಳಕೆಯ ನೆಲೆಗಳ ಮೇಲೆ ಬೀರುವ ಪರಿಣಾಮವನ್ನು ಕುರಿತಂತೆ ಅಧ್ಯಯನ ಮಾಡಲಾಗಿದೆ. ಸಮಾಜೋಭಾಷಿಕ ಅಂಶಗಳು ದ್ವಿಭಾಷಿಕರ ಕಲಿಕೆ - ಬಳಕೆಯ ನೆಲೆಗಳ ಮೇಲೆ ಬೀರುವ ಪರಿಣಾಮಗಳನ್ನು ತಿಳಿಯಲು ಜಾತಿ, ಲಿಂಗ, ಶಿಕ್ಷಣ, ವಯಸ್ಸು, ವರ್ಗ, ಕುಟುಂಬ, ಎಂಬ ಆರು ಸಾಮಾಜಿಕ

ಭಿನ್ನಾಂಶಗಳನ್ನು ಅಧ್ಯಯನದ ವ್ಯಾಪ್ತಿಗೆ ತೆಗೆದುಕೊಳ್ಳಲಾಗಿದೆ. ಇದು ಕ್ಷೇತ್ರಕಾರ್ಯವನ್ನು ಆಧರಿಸಿದ ಅಧ್ಯಯನವಾಗಿದ್ದು ಪ್ರಶ್ನಾವಳಿ ಮತ್ತು ಧ್ವನಿಮುದ್ರಣ ಯಂತ್ರವನ್ನು ಬಳಸಿಕೊಳ್ಳಲಾಗಿದೆ. ದ್ವಿಭಾಷಿಕತೆ ಬಳಕೆಯಾಗುವ ಆವರಣಗಳಲ್ಲಿ ಹೆಚ್ಚಿನ ಕ್ಷೇತ್ರಕಾರ್ಯವನ್ನು ಮಾಡಲಾಗಿದೆ. ಹೆಚ್ಚಿನ ಮಾಹಿತಿಯನ್ನು 'ಶಿಕ್ಷಣ' ಆವರಣದಲ್ಲಿ ಸಂಗ್ರಹಿಸಲಾಗಿದೆ. ಭಾರತದ ಜನಗಣತಿಯನ್ನು ಆಧರಿಸಿದಂತೆ ಕೆಲವು ಅಂಕಿ - ಅಂಶಗಳಿಂದ ದ್ವಿಭಾಷಿಕ ಸಂದರ್ಭದ ಪರಿಸ್ಥಿತಿಯನ್ನು ವಿಶ್ಲೇಷಿಸಲಾಗಿದೆ. ಹೆಚ್ಚಿನ ವಿಶ್ಲೇಷಣೆಗಾಗಿ ಕ್ಷೇತ್ರಕಾರ್ಯದಲ್ಲಿ ದತ್ತ ಒಡ್ಡಿದ ಸವಾಲುಗಳಿಗೆ ಉತ್ತರಗಳನ್ನು ಹುಡುಕಲು ಪ್ರಯತ್ನಿಸಲಾಗಿದೆ.

ಅಧ್ಯಯನದ ಮೊದಲಲ್ಲಿ ಇಡೀ ಬಳ್ಳಾರಿ ಜಿಲ್ಲೆಯನ್ನು ಅಧ್ಯಯನದ ವ್ಯಾಪ್ತಿಗೆ ತೆಗೆದುಕೊಳ್ಳಲಾಗಿತ್ತು. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಬಳ್ಳಾರಿಯ ಉತ್ತರ ಮತ್ತು ಪೂರ್ವ ಭಾಗದಲ್ಲಿ ತೆಲುಗು - ಕನ್ನಡ ದ್ವಿಭಾಷಿಕತೆಯ ಒತ್ತಡ ಮತ್ತು ಪ್ರಮಾಣಗಳು ಹೆಚ್ಚಾಗಿ ಕಂಡುಬಂದಿದ್ದರಿಂದ ಬಳ್ಳಾರಿಯ ಉತ್ತರ ಮತ್ತು ಪೂರ್ವಕ್ಕಿರುವ ತಾಲ್ಲೂಕುಗಳಾದ ಹೊಸಪೇಟೆ, ಸಂಡೂರು (ತೋರಣಗಲ್ಲು), ಬಳ್ಳಾರಿ ಮತ್ತು ಸಿರುಗುಪ್ಪ ತಾಲ್ಲೂಕುಗಳಿಗೆ ಮಾತ್ರ ಅಧ್ಯಯನದ ವ್ಯಾಪ್ತಿಯನ್ನು ಸೀಮಿತಗೊಳಿಸಿಕೊಳ್ಳಲಾಗಿದೆ. ಪ್ರಾಥಮಿಕ ಹಂತದಲ್ಲಿ ಮಾತ್ರ ಕೆಲವು ದ್ವಿಭಾಷಿಕ ಕುಟುಂಬಗಳ ಮನೆ ಆವರಣದಲ್ಲಿ ಮಾಹಿತಿ ಸಂಗ್ರಹಣೆ ಮಾಡಲಾಗಿದೆ. ಮಿಕ್ಕಂತೆ 'ಶಿಕ್ಷಣ' ಆವರಣದಲ್ಲೇ ದ್ವಿಭಾಷಿಕರ ಬಗೆಗಿನ ಹೆಚ್ಚಿನ ವಿವರಗಳನ್ನು ವಿದ್ಯಾರ್ಥಿ ಸಮುದಾಯದಿಂದ ಪ್ರಶ್ನಾವಳಿಯೊಂದರ ಮೂಲಕ ಪಡೆಯಲಾಗಿದೆ. ಮಾಹಿತಿ ಪಡೆಯಲಾರದ ಅನೇಕ ದ್ವಿಭಾಷಿಕ ಕುಟುಂಬಗಳು ಈ ಅಧ್ಯಯನದಿಂದ ಹೊರಗಿವೆ. ಇದು ಈ ಅಧ್ಯಯನದ ಮಿತಿಯೂ ಹೌದು. ಅನೇಕ ಆವರಣಗಳಲ್ಲಿ ನೇರವಾಗಿ ಪ್ರಶ್ನಾವಳಿಯ ಮೂಲಕ ಮಾಹಿತಿಯನ್ನು ಸಂಗ್ರಹಿಸಲು ಆಗದ ಸಂದರ್ಭಗಳಲ್ಲಿ ಧ್ವನಿಮುದ್ರಣ ಯಂತ್ರದಿಂದ ಮತ್ತು ಸೂಕ್ಷ್ಮವಾಗಿ ದ್ವಿಭಾಷಿಕ ಸಂದರ್ಭಗಳನ್ನು ಗಮನಿಸುವುದರ ಮೂಲಕ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಹೊಸಪೇಟೆಯಲ್ಲಿ ಮಾತ್ರ ಆರು ತೆಲುಗು - ಕನ್ನಡ ದ್ವಿಭಾಷಿಕ ಕುಟುಂಬಗಳನ್ನು ಸೂಕ್ಷ್ಮ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಶಿಕ್ಷಣದಲ್ಲಿ ದ್ವಿಭಾಷಿಕತೆಯ ಪರಿಣಾಮಗಳನ್ನು ಕುರಿತು ಹೇಳುವಾಗ ಭಾಷಾದ್ವೀಪವೆಂದು ಗುರುತಿಸಿಕೊಂಡ ಪ್ರದೇಶದಲ್ಲಿರುವ ತೋರಣಗಲ್ಲಿನ ಶಾಲೆಯನ್ನು ಸೂಕ್ಷ್ಮ ಅಧ್ಯಯನ ವ್ಯಾಪ್ತಿಗೆ ತೆಗೆದುಕೊಳ್ಳಲಾಗಿದೆ. ಈ ಅಧ್ಯಯನದಲ್ಲಿ ಕಾಣಲಾದ ಫಲಿತಗಳು ಯಾವುದೂ ಅಂತಿಮವಲ್ಲ. ಸಂಶೋಧನ ಅವಧಿಯಲ್ಲಿ ಸಂಶೋಧನ ವಿಧಿವಿಧಾನಗಳ ಮಿತಿಯಲ್ಲಿ ಕಂಡುಕೊಂಡ ಫಲಿತಗಳು. ಏಕೆಂದರೆ ದ್ವಿಭಾಷಾ ಸಂದರ್ಭಗಳು ಚಲನಶೀಲವಾಗಿವೆ. ಪರಿಸ್ಥಿತಿಗಳು ಬದಲಾದಂತೆ ದ್ವಿಭಾಷಾ ಸಂದರ್ಭಗಳೂ ಬದಲಾವಣೆಗೆ ಒಳಪಡುತ್ತಿರುತ್ತವೆ. ಆದ್ದರಿಂದ ಈ ಅಧ್ಯಯನ ಸಂದರ್ಭದಲ್ಲಿರುವ ದ್ವಿಭಾಷಾ ಸಂದರ್ಭದ ಸ್ವರೂಪ ಪರಿಣಾಮಗಳು ಮುಂದಿನ ಐದು ಅಥವಾ ಹತ್ತು ವರ್ಷಗಳ ನಂತರದಲ್ಲಿ ಬದಲಾಗಬಹುದು.

■

ಅಧ್ಯಾಯ : ಎರಡು

# ಅಧ್ಯಯನದ ವಿಧಿ ವಿಧಾನಗಳು

ಬಳ್ಳಾರಿ ಪರಿಸರದ ತೆಲುಗು - ಕನ್ನಡ ದ್ವಿಭಾಷಿಕತೆಯನ್ನು ಸಾಮಾಜಿಕ ಭಾಷಾಶಾಸ್ತ್ರದ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವ ಉದ್ದೇಶದಿಂದ ಅಧ್ಯಯನಕ್ಕೆ ಅಳವಡಿಸಿಕೊಳ್ಳಲಾದ ವಿಧಿವಿಧಾನಗಳನ್ನು ಇಲ್ಲಿ ವಿವರಿಸಲಾಗಿದೆ. ಭಾರತ ದ್ವಿ-ಬಹುಭಾಷಿಕತೆಯ ಅಧ್ಯಯನಕ್ಕೊಂದು ಪ್ರಯೋಗಾಲಯ. ಇಲ್ಲಿ ಅನೇಕ ಜಾತಿ - ಉಪಜಾತಿ, ಧರ್ಮ, ಸಂಸ್ಕೃತಿ, ಆಚಾರ - ವಿಚಾರ, ಉಡುಗೆ - ತೊಡುಗೆ ಎಲ್ಲವೂ ವೈವಿಧ್ಯಮಯವಾಗಿವೆ. ಇವೆಲ್ಲವೂ ಒಂದು ಭಾಷೆಯ ಕಲಿಕೆ - ಬಳಕೆ ಬೆಳವಣಿಗೆಯಲ್ಲಿ ಕಾರಣವಾಗಿರುವುದರಿಂದ ಭಾಷಿಕ ಅಧ್ಯಯನಗಳನ್ನು ಕೈಗೊಳ್ಳುವವರಿಗೆ ಇಲ್ಲಿನ ಭಾಷಿಕ ಪರಿಸರದ ಹಿನ್ನೆಲೆಯ ಅರಿವು ಬೇಕಾಗುತ್ತದೆ. ಪಶ್ಚಿಮದಲ್ಲಿನ ಭಾಷಿಕ ಸ್ಥಿತಿಗೂ ಭಾರತದ ಸಂದರ್ಭದಲ್ಲಿನ ಭಾಷಿಕ ಸ್ಥಿತಿಗೂ ಬಹಳಷ್ಟು ವ್ಯತ್ಯಾಸಗಳಿರುವುದರಿಂದ ಅಲ್ಲಿನ ಅಧ್ಯಯನ ಮಾದರಿಗಳನ್ನು ನೇರವಾಗಿ ಇಲ್ಲಿನ ಭಾಷಿಕ ಪರಿಸ್ಥಿತಿಗೆ ಅಳವಡಿಸಿಕೊಳ್ಳಲಾಗುವುದಿಲ್ಲ. ಇಲ್ಲಿನ ಭಾಷಿಕ ಸಂದರ್ಭಗಳೇ ಬೇರೆ, ಪ್ರತಿಯೊಂದು ಭಾಷೆಯ ಭಾಷಿಕ ಸಂದರ್ಭಗಳೂ ಸಹ ಭಿನ್ನವಾಗಿರುವಂತಹವು. ಆದ್ದರಿಂದ ಯಾವುದೇ ಭಾಷೆಯ ಭಾಷಿಕ ಸಂದರ್ಭ, ಕಲಿಕೆ, ಬಳಕೆಗಳ ಬಗೆಗೆ ಅಧ್ಯಯನ ಮಾಡುವಾಗ ಅದಕ್ಕೆ ತಕ್ಕಂತಹ ಅಧ್ಯಯನದ ವಿಧಿವಿಧಾನಗಳನ್ನೂ, ಕ್ಷೇತ್ರಕಾರ್ಯದಲ್ಲಿ ಹೊಸ ರೀತಿಯ ತಂತ್ರಗಳನ್ನೂ ಅಳವಡಿಸಿಕೊಳ್ಳುವುದು ಅವಶ್ಯವೆನಿಸಿದೆ.

ಕನ್ನಡದಲ್ಲಿ ಸಮಾಜೋಭಾಷಿಕ ಶಿಸ್ತಿನ ನೆಲೆಯಲ್ಲಾದ ಅಧ್ಯಯನಗಳು ಬೆರಳೆಣಿಕೆಯಷ್ಟು ಮಾತ್ರ ಇರುವುದರಿಂದ ಈ ಅಧ್ಯಯನವನ್ನು ಸಾಮಾಜಿಕ ಭಾಷಾಶಾಸ್ತ್ರದ ಶಿಸ್ತಿಗೆ ಅಳವಡಿಸುವಲ್ಲಿ ಪ್ರಾರಂಭದಲ್ಲಿ ತೊಡಕುಂಟಾಯಿತು. ಈ ಸಂದರ್ಭದಲ್ಲಿ ದ್ವಿ-ಬಹುಭಾಷಿಕತೆಯನ್ನು ಕುರಿತಂತೆ ಪಶ್ಚಿಮ ಮತ್ತು ಭಾರತದಲ್ಲಿ ನಡೆದಿರುವ ಕೆಲವು ಅಧ್ಯಯನಗಳ ಓದು ಅಧ್ಯಯನ ದಾರಿಗಳನ್ನು ಸುಗಮಗೊಳಿಸಿತು. ಜೊತೆಗೆ ಭಾರತ ಮತ್ತು ಪಶ್ಚಿಮ ಸಂದರ್ಭಗಳ ದ್ವಿಭಾಷಾ ಪರಿಸರಗಳು, ಅವುಗಳ ಸ್ವರೂಪ, ಪರಿಣಾಮಗಳ ಬಗೆಗಿನ ತಿಳುವಳಿಕೆ, ಆ ದ್ವಿಭಾಷಾ ಸಂದರ್ಭಗಳಿಗೆ ಬಳಸುವ

ಅಧ್ಯಯನ ವಿಧಿ-ವಿಧಾನಗಳು, ಕ್ಷೇತ್ರಕಾರ್ಯದ ಹೊಸರೀತಿಯ ತಂತ್ರಗಳು, ಸಂಶೋಧನೆಯ ಒಳನೋಟಗಳನ್ನು ತೋರುವ ಭಾಷಾಧ್ಯಾಯ ಶಿಸ್ತು ಅರಿವಿನ ವಿಸ್ತಾರವನ್ನು ವಿಸ್ತರಿಸಿಕೊಳ್ಳುವಲ್ಲಿ ಸಹಾಯವಾಗಿವೆ. ಈ ನಿಟ್ಟಿನಲ್ಲಿ ಬಳ್ಳಾರಿ ಪರಿಸರದ ದ್ವಿಭಾಷಾ ಸಂದರ್ಭವನ್ನು ತಿಳಿಯಲು ಮೂರು ಹಂತದ ಕ್ಷೇತ್ರಕಾರ್ಯವನ್ನು ಮಾಡಲಾಗಿದೆ.

1. ಪ್ರಾಥಮಿಕ ಹಂತದ ಕ್ಷೇತ್ರಕಾರ್ಯ
2. ದ್ವಿತೀಯ ಹಂತದ ಕ್ಷೇತ್ರಕಾರ್ಯ
3. ಸೂಕ್ಷ್ಮ ಅಧ್ಯಯನದ ಕ್ಷೇತ್ರಕಾರ್ಯ.

ಈ ಮೂರು ಹಂತದ ಕ್ಷೇತ್ರಕಾರ್ಯದಲ್ಲಿ ಮುಖ್ಯವಾಗಿ 6 ರೀತಿಯ ಸಮಾಜೋಭಾಷಿಕ ಭಿನ್ನಾಂಶಗಳನ್ನು ಬಳಸಲಾಗಿದೆ.

1. ಲಿಂಗ
2. ವಯಸ್ಸು
3. ಜಾತಿ
4. ಶಿಕ್ಷಣ
5. ವರ್ಗ
6. ಕುಟುಂಬ

ಕ್ಷೇತ್ರಕಾರ್ಯದ ವ್ಯಾಪ್ತಿಯನ್ನು ದ್ವಿಭಾಷಿಕತೆಯ ಒತ್ತಡ ಮತ್ತು ಪ್ರಮಾಣ ಹೆಚ್ಚಾಗಿ ಕಂಡುಬಂದಿರುವ ಬಳ್ಳಾರಿಯ ಉತ್ತರ ಮತ್ತು ಪೂರ್ವದ ತಾಲ್ಲೂಕುಗಳಾದ ಹೊಸಪೇಟೆ, ಸಂಡೂರು (ತೋರಣಗಲ್ಲು), ಬಳ್ಳಾರಿ, ಸಿರುಗುಪ್ಪ ತಾಲ್ಲೂಕುಗಳು ಹಾಗೂ ಅವುಗಳಲ್ಲಿ ಮುಖ್ಯವಾಗಿ ತೆಲುಗರು ನೆಲೆಸಿರುವ ಪ್ರದೇಶಗಳನ್ನು ಆಯ್ಕೆ ಮಾಡಿಕೊಂಡು ಪ್ರಶ್ನಾವಳಿ ಮತ್ತು ಧ್ವನಿಮುದ್ರಣ ಯಂತ್ರವನ್ನು ಬಳಸಿ ಕ್ಷೇತ್ರಕಾರ್ಯ ಮಾಡಲಾಗಿದೆ.

## 1. ಪ್ರಾಥಮಿಕ ಹಂತದ ಕ್ಷೇತ್ರಕಾರ್ಯ

ಈ ಹಂತದಲ್ಲಿ ನಾಲ್ಕೂ ತಾಲ್ಲೂಕುಗಳಲ್ಲಿ ನೂರು ಜನ ಪ್ರತಿವಕ್ತರನ್ನು ಸಂದರ್ಶನಕ್ಕೆ ಆರಿಸಿಕೊಳ್ಳಲಾಗಿದೆ. ತೆಲುಗು-ಕನ್ನಡ, ಕನ್ನಡ-ತೆಲುಗು ದ್ವಿಭಾಷಿಕರನ್ನು ಗುರುತಿಸಿಕೊಂಡು ದ್ವಿಭಾಷಿಕ ಕುಟುಂಬಗಳಿಗೆ ಹೋಗಿ ಪ್ರತಿ ತಾಲ್ಲೂಕಿಗೆ ಇಪ್ಪತ್ತೈದು ಜನರಂತೆ ಒಟ್ಟು ನೂರು ಜನರನ್ನು ಪ್ರಶ್ನಾವಳಿಯೊಂದರ ಮೂಲಕ ಸಂದರ್ಶಿಸಲಾಗಿದೆ. ಈ ಹಂತದ

ಕ್ಷೇತ್ರಕಾರ್ಯದಲ್ಲಿ ದೊರೆತ ಮಾಹಿತಿಯನ್ನು ಆಧಾರವಾಗಿಟ್ಟುಕೊಂಡು ಕೆಲವು ಸಂಶೋಧನ ಪ್ರಶ್ನೆಗಳನ್ನು ಹಾಕಿಕೊಳ್ಳಲಾಗಿದೆ.

ಸಂಶೋಧನ ಪ್ರಶ್ನೆಗಳು

01. ಬಳ್ಳಾರಿ ಪರಿಸರದ ದ್ವಿಭಾಷಿಕತೆಯ ಸ್ವರೂಪ ಎಂಥದ್ದು?

02. ಯಾವ ಕಾರಣಗಳಿಗಾಗಿ ಇಲ್ಲಿ ದ್ವಿಭಾಷಿಕತೆ ಉಂಟಾಗಿದೆ?

03. ದ್ವಿಭಾಷಿಕತೆಯ ಪ್ರಮಾಣದಲ್ಲಿ ಲಿಂಗಾಧಾರಿತ ಭಿನ್ನತೆಗಳಿವೆಯೇ? ಜಾತಿಗಳಲ್ಲಿ ಇದು ವಿಭಿನ್ನವಾಗಿರಬಹುದೇ? ಕಸುಬುಗಳಲ್ಲಿ ಇದರ ಸ್ವರೂಪವೇನು?

04. ಬೇರೆ ದ್ವಿಭಾಷಿಕ ಸಂದರ್ಭಗಳಿಗಿಂತ ಬಳ್ಳಾರಿ ದ್ವಿಭಾಷಾ ಸಂದರ್ಭ ಭಿನ್ನವಾಗಿದೆಯೇ? ಹೇಗೆ?

05. ಇಲ್ಲಿನ ದ್ವಿಭಾಷಾ ಪರಿಸರದಲ್ಲಿ ತಲೆಮಾರುಗಳಲ್ಲಿ ಆಗುತ್ತಿರುವ ಬದಲಾವಣೆಗಳೇನು?

06. ದ್ವಿಭಾಷಿಕರಾದವರಲ್ಲಿ ಕನ್ನಡ - ತೆಲುಗು ಭಾಷೆಗಳಲ್ಲಿನ ಭಾಷಾ ಕೌಶಲಗಳ ಪ್ರಮಾಣ ಯಾವ ಸ್ವರೂಪದಲ್ಲಿದೆ? (ಮೌಖಿಕ ಕೌಶಲಗಳು-ಸಾಕ್ಷರತೆಯ ಕೌಶಲಗಳು)

07. ಶಿಕ್ಷಣದಲ್ಲಿ ದ್ವಿಭಾಷಿಕತೆಯಿಂದಾಗಿ ಎಂತಹ ಪರಿಣಾಮಗಳು ಉಂಟಾಗುತ್ತಿವೆ?

08. ಬಳ್ಳಾರಿ ಪರಿಸರದ ಕನ್ನಡ - ತೆಲುಗು ಭಾಷೆಯ ಸಂಪರ್ಕದಿಂದಾಗಿ ಯಾವ ರೀತಿಯ ಪರಿಣಾಮಗಳು ಕನ್ನಡ ಭಾಷೆಯ ಬಳಕೆಯ ಮೇಲೆ ಉಂಟಾಗಿದೆ? ಯಾವ ರೀತಿಯ ಭಾಷಾ ಸನ್ನಿವೇಶಗಳು ಕಂಡುಬರುತ್ತಿವೆ?

09. ದ್ವಿಭಾಷಿಕರಾದವರಲ್ಲಿ ಸ್ವಭಾಷೆಯ ಸಂಗೋಪನ ಕಾರ್ಯದ ತಂತ್ರಗಳೇನು?

10. ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ಶೈಕ್ಷಣಿಕವಾಗಿ ಆಗುತ್ತಿರುವ ಬದಲಾವಣೆಗಳಿಂದಾಗಿ ಇಲ್ಲಿನ ದ್ವಿಭಾಷಿಕರಲ್ಲಿ ಯಾವ ರೀತಿಯ ಪಲ್ಲಟಗಳುಂಟಾಗಿವೆ?

11. ಇಲ್ಲಿನ ದ್ವಿಭಾಷಾ ಸಂದರ್ಭ ಸ್ಥಿರ ಅಥವಾ ಅಸ್ಥಿರ ಸನ್ನಿವೇಶದಲ್ಲಿ ಯಾವ ಸನ್ನಿವೇಶವನ್ನು ಮುಂದುವರೆಸಿ ಕೊಂಡು ಹೋಗುವ ಸಾಧ್ಯತೆಗಳು ಹೆಚ್ಚಿನ ಸಂದರ್ಭದಲ್ಲಿ ಕಂಡುಬರುತ್ತಿವೆಯೆ?

## 2. ದ್ವಿತೀಯ ಹಂತದ ಕ್ಷೇತ್ರಕಾರ್ಯ

ಪ್ರಾಥಮಿಕ ಹಂತದ ಕ್ಷೇತ್ರಕಾರ್ಯದಲ್ಲಿ ದೊರೆತ ಮಾಹಿತಿಯಿಂದ ಹಾಕಿಕೊಳ್ಳಲಾದ ಸಂಶೋಧನ ಪ್ರಶ್ನೆಗಳಿಗೆ ಉತ್ತರಗಳನ್ನು ಹುಡುಕಲು ದ್ವಿತೀಯ ಹಂತದ ಕ್ಷೇತ್ರಕಾರ್ಯವನ್ನು ಮಾಡಲಾಗಿದೆ. ಈ ಹಂತದ ಕ್ಷೇತ್ರಕಾರ್ಯದಲ್ಲಿ

ನಾಲ್ಕು ತಾಲ್ಲೂಕುಗಳ ಭಾಷಿಕ ಪರಿಸ್ಥಿತಿಯನ್ನು ತಿಳಿಯಲು ಮುಖ್ಯವಾಗಿ ಕೆಲವು ಆವರಣಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಭಾಷೆಯ ಕಲಿಕೆ-ಬಳಕೆ-ಬೋಧನೆ ಬಗೆಗೆ ಹೆಚ್ಚು ಜಾಗ್ರತವಾದ ಆವರಣ 'ಶಿಕ್ಷಣ'. ಆದ್ದರಿಂದ ಈ ಆವರಣದಲ್ಲಿ ಮಾಹಿತಿಯನ್ನು ಪಡೆಯಲು ಜಿಲ್ಲಾ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರು ಮತ್ತು ಕ್ಷೇತ್ರ ಶಿಕ್ಷಣಾಧಿಕಾರಿಗಳ ಬಳಿ ಅನುಮತಿಯನ್ನು ಪಡೆದು ಕನ್ನಡ, ತೆಲುಗು, ಇಂಗ್ಲಿಶ್, ಮಾಧ್ಯಮಗಳಲ್ಲಿ ಓದುತ್ತಿರುವ ಮಾಧ್ಯಮಿಕ ಮತ್ತು ಪ್ರೌಢಶಾಲಾ ವಿದ್ಯಾರ್ಥಿ ಸಮುದಾಯದಲ್ಲಿ ಪ್ರಶ್ನಾವಳಿಯೊಂದರ ಮೂಲಕ ಮಾಹಿತಿಯನ್ನು ಪಡೆಯಲಾಗಿದೆ. ಒಟ್ಟು ಏಳುನೂರು ಜನ ವಿದ್ಯಾರ್ಥಿಗಳಿಂದ ದೊರೆತ ಮಾಹಿತಿಯಲ್ಲಿ ಐದುನೂರಹದಿನಾಲ್ಕು ಪ್ರಶ್ನಾವಳಿಗಳು ಕನ್ನಡ - ತೆಲುಗು, ತೆಲುಗು - ಕನ್ನಡ ದ್ವಿಭಾಷಿಕರ ಬಗೆಗೆ ಮಾಹಿತಿಯನ್ನು ತಿಳಿಸಿದ್ದರೆ, ನೂರ ಎಂಬತ್ತಾರು ಪ್ರಶ್ನಾವಳಿಗಳು ಕನ್ನಡ - ತೆಲುಗು ಭಾಷೆಗಳನ್ನು ಎರಡನೆಯ ಭಾಷೆಯಾಗಿ ಬಳಸುತ್ತಿರುವ ಬಗೆಗೆ ಮಾಹಿತಿ ದೊರೆತಿದೆ. ಈ ಆವರಣದಲ್ಲಿ ದೊರೆತ ಅಂಕಿ - ಅಂಶಗಳನ್ನು ಆಧರಿಸಿ ಸಂಶೋಧನ ಪ್ರಶ್ನೆಗಳಿಗೆ ಉತ್ತರಗಳನ್ನು ಹುಡುಕಲು ಪ್ರಯತ್ನಿಸಲಾಗಿದೆ. ಪ್ರತಿಯೊಂದು ಕುಟುಂಬದ ಬಗೆಗಿನ ಸಮಾಜೋಭಾಷಿಕ ಅಂಶಗಳ ಬಗೆಗೆ, ಭಾಷಾ ಕೌಶಲಗಳ ಬಗೆಗೆ ವಿದ್ಯಾರ್ಥಿ ಸಮುದಾಯದಿಂದ ಈ ಆವರಣದಲ್ಲಿ ಪಡೆದ ಮಾಹಿತಿ ಬಳ್ಳಾರಿ ಪರಿಸರದ ಭಾಷಿಕ ಪರಿಸ್ಥಿತಿಯನ್ನು ತಿಳಿಯಲು ಮಾಡಿದ ಪ್ರಯತ್ನವಷ್ಟೆ. ಬೇರೆ ಆವರಣಗಳಲ್ಲಿ ಕ್ಷೇತ್ರಕಾರ್ಯ ನಡೆಸುವಾಗಲೆಲ್ಲಾ ವಿದ್ಯಾರ್ಥಿಗಳಿಂದ ಪಡೆದ ಮಾಹಿತಿಯನ್ನು ಪರೀಕ್ಷೆಗೆ ಒಳಪಡಿಸಿ, ಅನುಮಾನ ಬಂದೆಡೆಗಳಲ್ಲಿ ಮತ್ತೆ - ಮತ್ತೆ ಸರಿಯಾಗಿ ಮಾಹಿತಿಯನ್ನು ಪಡೆಯಲು ಪ್ರಯತ್ನಿಸಲಾಗಿದೆ. ಜೊತೆಗೆ ಶಿಕ್ಷಣದಲ್ಲಿ ದ್ವಿಭಾಷಿಕತೆಯ ಪರಿಣಾಮವನ್ನು ತಿಳಿಯಲು ಕೆಲವು ಶಾಲೆಗಳನ್ನು ಗುರುತಿಸಿಕೊಂಡು ಮತ್ತೆ - ಮತ್ತೆ ಶಾಲೆಗಳಿಗೆ ಭೇಟಿ ನೀಡಿ ದ್ವಿಭಾಷಾ ಸಂದರ್ಭದಲ್ಲಿ ಶಿಕ್ಷಕ ಮತ್ತು ವಿದ್ಯಾರ್ಥಿಗಳ ಕಲಿಕೆ - ಬೋಧನೆಯ ನೆಲೆಯಲ್ಲಿ ಇರುವ ಸಮಸ್ಯೆಗಳ ಬಗೆಗೆ ವಿಚಾರಿಸುವುದು. ತೆಲುಗು ಸ್ವಭಾಷಿಕ ಮಕ್ಕಳು ಹೋಗುವ ಶಾಲೆಗಳನ್ನು ಆಯ್ಕೆ ಮಾಡಿಕೊಂಡು ಆ ಮಕ್ಕಳು ಕನ್ನಡವನ್ನು ಒಂದು ವಿಷಯವನ್ನಾಗಿ ಓದುವಾಗ ಮತ್ತು ಕನ್ನಡವನ್ನು ಮಾಧ್ಯಮವನ್ನಾಗಿ ತೆಗೆದುಕೊಂಡು ಓದುವಾಗ ಅವರಲ್ಲಾಗುತ್ತಿರುವ ಭಾಷಿಕ ಬದಲಾವಣೆಗಳು, ಭಾಷಾ ಕೌಶಲಗಳ ಬಗೆಗಿನ ವಿವರಗಳು ಇವೆಲ್ಲವೂ ಶಿಕ್ಷಣದಿಂದುಂಟಾಗುವ ದ್ವಿಭಾಷಿಕತೆಯ ಸ್ವರೂಪದಲ್ಲಿ ಯಾವ ರೀತಿಯ ಬದಲಾವಣೆಗಳುಂಟಾಗುತ್ತಿವೆ ಎಂದು ಗುರುತಿಸುವಲ್ಲಿ ಸಹಾಯವಾಗಿದೆ. ವಿದ್ಯಾರ್ಥಿಗಳ ಬಗೆಗೆ ಭಾಷಿಕ ವಿವರಗಳನ್ನು ಪಡೆಯುವಾಗ ಅವರ ಸಮಾಜೋಭಾಷಿಕ ಅಂಶಗಳು ಸಹ ಅವರ ಭಾಷೆಯ ಮೇಲೆ ಯಾವ ರೀತಿಯ ಪರಿಣಾಮವನ್ನುಂಟು ಮಾಡುತ್ತಿವೆ ಎನ್ನುವುದನ್ನು ತಿಳಿಯಲು ಅನುಕೂಲವಾಗಿದೆ.

ವ್ಯಕ್ತಿಗಳ ಮುಖಚಹರೆ, ಬಣ್ಣ, ಧರಿಸಿರುವ ಬಟ್ಟೆ, ಮಾಡಿಕೊಂಡಿರುವ ಅಲಂಕಾರ, ಮಾತಿನ ಶೈಲಿ, ದೈಹಿಕ ಚಹರೆಗಳು ಇತ್ಯಾದಿಗಳಿಂದ ಇವರು ಇಂಥದೇ ಭಾಷೆಯನ್ನು ಮಾತನಾಡಬಹುದು, ಇಂಥದೇ ಜಾತಿಗೆ ಸೇರಿರಬಹುದೆಂದು ಅನೇಕ ಸಾರಿ ಗುರುತಿಸಿಕೊಂಡು, ಹೆಚ್ಚಾಗಿ ತೆಲುಗು ಭಾಷಿಕರೆಲ್ಲಾ ಒಂದೇ ಕಡೆಗಳಲ್ಲಿ ವಾಸಿಸುವ

ಸ್ಥಳಗಳನ್ನು (ಭಾಷಾದ್ವೀಪ) ಗುರ್ತಿಸಿ ಅಂತಹ ಕಡೆಗಳಲ್ಲಿ ಯಾವುದಾದರೊಂದು ಕಾರಣವನ್ನು ಹುಡುಕಿಕೊಂಡು ಸಮಯ ಸಿಕ್ಕಾಗಲೆಲ್ಲಾ ಅವರ ಬಳಿ ಹೋಗಿ ಮಾತನಾಡುವುದು, ಅವರ ದಿನನಿತ್ಯದ ವ್ಯವಹಾರಗಳನ್ನು ಗಮನಿಸುವುದು, ಅವರ ದಿನನಿತ್ಯದ ವ್ಯವಹಾರಗಳಲ್ಲಿ ಕನ್ನಡ - ತೆಲುಗು ಭಾಷೆಗಳನ್ನು ಯಾವಾಗ - ಎಲ್ಲಿ - ಎಷ್ಟು ಪ್ರಮಾಣದಲ್ಲಿ ಬಳಸುತ್ತಿದ್ದಾರೆ. ಭಾಷಾ ಸಂದರ್ಭಗಳು ಬದಲಾದಾಗ ಅವರ ನಡವಳಿಕೆಗಳು ಹೇಗಿರುತ್ತವೆ. ಭಾಷಾ ಆಯ್ಕೆಯ ಹಿಂದಿರುವ ಅಂಶಗಳೇನು. ಕನ್ನಡಿಗರ ಬಳಿ ಮಾತನಾಡುವಾಗ, ಅಪರಿಚಿತರ ಬಳಿ ಮಾತನಾಡುವಾಗ, ಸ್ವಭಾಷಿಕರ ಬಳಿ ಮಾತನಾಡುವಾಗ ಅವರ ಭಾಷಾ ಮನೋಭಾವ, ನಡವಳಿಕೆಗಳ ಬಗೆಗೆ ಸೂಕ್ಷ್ಮವಾಗಿ ಗಮನಿಸುವ ವಿಧಾನವನ್ನು ಅನುಸರಿಸಲಾಗಿದೆ. ಪ್ರಾಥಮಿಕ ಹಂತದ ಕ್ಷೇತ್ರಕಾರ್ಯದಲ್ಲಿ ಪ್ರಶ್ನಾವಳಿಯನ್ನು ಬಳಸಿ ಸಂದರ್ಶನ ಮಾಡುವಾಗ ಭಾಷಿಕರು ಎಷ್ಟೋ ಕಡೆಗಳಲ್ಲಿ ವಾಸ್ತವ ಸಂಗತಿಯನ್ನು ತಿರುಚಿ ಬೇರೆಯಾದ ಉತ್ತರಗಳನ್ನು ಹೇಳುವುದು ಗಮನಕ್ಕೆ ಬಂದಿದೆ. ಆದ್ದರಿಂದ ಈ ಹಂತದಲ್ಲಿ ದ್ವಿಭಾಷಿಕರಿಗೆ ನೇರವಾಗಿ ಪ್ರಶ್ನಾವಳಿಯಿಂದ ಸಂದರ್ಶನ ಮಾಡದೆ, ಗಮನಿಸಿದ ವಿವರಗಳನ್ನು ಮನೆಯಲ್ಲಿ ಪ್ರಶ್ನಾವಳಿಗಳಿಗೆ ಉತ್ತರವನ್ನು ತುಂಬಿಕೊಳ್ಳುವ ತಂತ್ರವನ್ನು ಬಳಸಬೇಕಾಯಿತು. ಕೆಲವು ಕಡೆಗಳಲ್ಲಿ ಭಾಷಿಕರಿಗೆ ಕಾಣದ ರೀತಿಯಲ್ಲಿ ಧ್ವನಿಮುದ್ರಣವನ್ನಿಟ್ಟುಕೊಂಡು ಅವರ ಮಾತಿನ ವಿವರಗಳನ್ನು ಮುದ್ರಿಸಿಕೊಳ್ಳಲಾಗಿದೆ.

ಮಾಹಿತಿಯನ್ನು ಸಂಗ್ರಹಿಸಲು ಬಳಸಿದ ಇನ್ನಿತರ ಆವರಣಗಳೆಂದರೆ ಸರ್ಕಾರಿ ಕಛೇರಿಗಳು, ಖಾಸಗಿ ವಲಯಗಳು, ನ್ಯಾಯಾಂಗ, ಆಸ್ಪತ್ರೆಗಳು, ಆಟದ ಮೈದಾನ, ದೇವಾಲಯಗಳು, ಸಿನಿಮಾ ಮಂದಿರಗಳು, ಚುನಾವಣಾ ಪ್ರಚಾರ ಭಾಷಣಗಳು, ಸಾರ್ವಜನಿಕ ಸ್ಥಳಗಳಲ್ಲಿ ಉಂಟಾಗುತ್ತಿದ್ದ ಜಗಳ ಅದರ ಮಧ್ಯಸ್ಥಿಕೆಗಳು, ಪಂಚಾಯ್ತಿಗಳು, ಬಸ್ ನಿಲ್ದಾಣಗಳು, ಸಂತೆಗಳು, ಜಾತ್ರೆಗಳು, ಹರಾಜು ಮಾರುಕಟ್ಟೆ, ಬಳೆ ಅಂಗಡಿಗಳು, ತರಕಾರಿ ಮಾಂಸದ ಮಾರುಕಟ್ಟೆಗಳು, ಇಂಥ ಆವರಣಗಳಲ್ಲಿ ದ್ವಿಭಾಷಿಕರಾದವರು ಭಾಷಾ ಸಂದರ್ಭಗಳಲ್ಲಿ ಮಾಡುತ್ತಿದ್ದ ಪಲ್ಲಟಗಳು, ನುಡಿಮಿಶ್ರಣ, ಭಾಷಾ ನಡವಳಿಕೆ, ಭಾಷಾ ಮನೋಭಾವ, ಭಾಷಿಕ ಆಯ್ಕೆಗಳು ಹೇಗೆ ಬದಲಾಗುತ್ತಿರುತ್ತವೆ, ಏಕಭಾಷಿಕರಿಗೆ ದ್ವಿಭಾಷಾ ಸಂದರ್ಭದ ಯಾವ ಆವರಣದಲ್ಲಿ ಅನ್ಯಭಾಷಿಕರೊಂದಿಗೆ ಸಂವಹಿಸುವುದು ಕಷ್ಟವೆನಿಸುತ್ತದೆ, ಅಂತಹ ಭಾಷಿಕ ಸಂದರ್ಭವನ್ನು ಏಕಭಾಷಿಕರು ಹೇಗೆ ನಿರ್ವಹಿಸುತ್ತಾರೆ ಎಂಬುದನ್ನು ಗಮನಿಸಲಾಗಿದೆ. ಹೀಗೆ ಮಾಹಿತಿಯನ್ನು ಪಡೆಯುವಾಗ ಅನೇಕ ಕಡೆಗಳಲ್ಲಿ ವಾಸ್ತವ ಚಹರೆಯನ್ನು ಮುಚ್ಚಿಡಬೇಕಾಗಿ ಬಂತು. ಜನಗಣತಿಯ ದಾಖಲಾತಿಗೆ ಬಂದಿರುವ ಶಿಕ್ಷಕಿಯೆಂದೂ, ಶಾಲಾ ದಾಖಲಾತಿಗೆ ಬಂದಿರುವೆನೆಂದೂ, ಹೀಗೆ ಎಲ್ಲ ಆವರಣಗಳಲ್ಲೂ ಮಾಹಿತಿಯನ್ನು ಸಂಗ್ರಹಿಸುವಾಗಲೂ ವಿಭಿನ್ನವಾದ ಪಾತ್ರಗಳನ್ನು ನಿರ್ವಹಿಸಬೇಕಾಗಿ ಬಂದು, ಇದರಿಂದ ವಾಸ್ತವ ಭಾಷಿಕ ಮಾಹಿತಿ ಪಡೆಯುವ ಸುಲಭ ತಂತ್ರವೊಂದನ್ನು ಕಂಡುಕೊಂಡಂತಾಗಿದೆ. ಹೊಸಪೇಟೆಯಲ್ಲಿ ಇಂದಿರಾನಗರ, ಪಟೇಲ್ ನಗರ, ಚಿತ್ತವಾಡಗಿ, ನಾಯಕರ ಕೇರಿ, ಆಕಾಶವಾಣಿ ಸುತ್ತ - ಮುತ್ತ, ಪಂಡರಾಪುರ, ರೈಲ್ವೆ ನಿಲ್ದಾಣದ ಸುತ್ತ - ಮುತ್ತಲ

ಪ್ರದೇಶ, ಸಕ್ಕರೆ ಕಾರ್ಖಾನೆ ಪ್ರದೇಶ, ತುಂಗಭದ್ರ ಆಣೆಕಟ್ಟೆಯ ಸುತ್ತ - ಮುತ್ತಲ ಸ್ಥಳಗಳು. ಕಮಲಾಪುರದ ನಾಯಕರ ಕೇರಿ. ತೋರಣಗಲ್ಲಿನ ರೈಲ್ವೆ ನಿಲ್ದಾಣದ ಪ್ರದೇಶ. ಬಳ್ಳಾರಿಯ ಇಂದಿರಾನಗರ, ಗಾಂಧಿನಗರ, ಶ್ರೀರಾಂಪುರ, ಸತ್ಯನಾರಾಯಣಪೇಟೆ, ಅಂದ್ರಾಳ, ಗುಗ್ಗರಹಟ್ಟಿ, ಕಾಕರ್ಲತೋಟ, ಅಲ್ಲಿಪುರ, ಪಾರ್ವತಿನಗರ, ಶಾಸ್ತ್ರಿನಗರ. ಕಂಪ್ಲಿ ಬಳಿಯ ಮುದ್ದಾಪುರ, ಕೊಟ್ಟಾಲ ಕ್ಯಾಂಪ್‌ಗಳು. ಸಿರುಗುಪ್ಪದಲ್ಲಿ ಪರಿಶಿಷ್ಟ ಪಂಗಡ, ಜಾತಿಗಳು ವಾಸವಾಗಿರುವ ಪ್ರದೇಶಗಳು, ರೆಡ್ಡಿ ಜನರು ನೆಲೆಸಿರುವ ಕ್ಯಾಂಪ್‌ಗಳಲ್ಲಿ ಹೆಚ್ಚಿನ ಮಾಹಿತಿಯನ್ನು ಪಡೆಯಲಾಗಿದೆ.

## 3. ಸೂಕ್ಷ್ಮ ಅಧ್ಯಯನದ ಕ್ಷೇತ್ರಕಾರ್ಯ

ದ್ವಿತೀಯ ಹಂತದ ಅಧ್ಯಯನಕ್ಕೆ ಬಳಸಿದ ಕ್ಷೇತ್ರಕಾರ್ಯದ ತಂತ್ರಕ್ಕಿಂತ ಸ್ವಲ್ಪ ಭಿನ್ನವಾದ ತಂತ್ರವನ್ನು ಈ ಹಂತದ ಕ್ಷೇತ್ರಕಾರ್ಯದಲ್ಲಿ ಬಳಸಲಾಗಿದೆ. ಈ ಹಂತದಲ್ಲಿ ಹೊಸಪೇಟೆಯಲ್ಲಿನ ದ್ವಿಭಾಷಿಕ ಕುಟುಂಬಗಳನ್ನು ಮಾತ್ರ ಸೂಕ್ಷ್ಮ ಅಧ್ಯಯನಕ್ಕೆ ತೆಗೆದುಕೊಳ್ಳಲಾಗಿದೆ. ಒಟ್ಟು ಐದು ಕುಟುಂಬಗಳನ್ನು ಆಯ್ಕೆ ಮಾಡಿಕೊಂಡು ಉನ್ನತ ವರ್ಗ, ಮೇಲ್‌ಮಧ್ಯಮ, ಮಧ್ಯಮ, ಕೆಳಮಧ್ಯಮ, ಕೆಳವರ್ಗದಲ್ಲಿ ಬರುವ ಬೇರೆ - ಬೇರೆ ಜಾತಿಯವರು, ಬೇರೆ - ಬೇರೆ ವಯಸ್ಸಿನವರು, ಖಾಸಗಿ ಮತ್ತು ಸರ್ಕಾರಿ ವಲಯದಲ್ಲಿ ಕೆಲಸ ಮಾಡುತ್ತಿರುವವರು, ಅಣು ಕುಟುಂಬ ಮತ್ತು ಅವಿಭಕ್ತ ಕುಟುಂಬದಲ್ಲಿರುವವರು, ಕನ್ನಡದ ಸಾಮಾಜಿಕ ಸಂದರ್ಭಗಳಿಗೆ ಹೆಚ್ಚು ಒಳಗಾದವರು, ತೆಲುಗಿನ ಭಾಷಿಕ ಸಂದರ್ಭಗಳಿಗೆ ಹೆಚ್ಚು ಒಳಗಾದವರು, ಅವರ ತಲೆಮಾರುಗಳಲ್ಲಿ ಆಗುತ್ತಿರುವ ಸಂಗೋಪನೆ - ಪಲ್ಲಟಗಳು, ಸ್ವಭಾಷೆಯನ್ನು ಉಳಿಸಿಕೊಳ್ಳುವಲ್ಲಿನ ಅವರ ತಂತ್ರಗಳು, ಅವರ ಭಾಷಿಕ ಆಯ್ಕೆಗಳು, ಭಾಷಾ ಮನೋಭಾವ, ಅವರಾಡುವ ಮಾತಿನಲ್ಲಿ ಭಾಷಾ ಮಿಶ್ರಣದ ಪ್ರಮಾಣ ಮುಂತಾದ ಅನೇಕ ವಿಷಯಗಳ ಬಗೆಗೆ ಮಾಹಿತಿಯನ್ನು ಪಡೆಯಲಾಗಿದೆ. ಸುಮಾರು ಒಂದು ವರ್ಷಗಳ ಕಾಲ ದ್ವಿಭಾಷಿಕರ ಗಮನಕ್ಕೂ ಬಾರದಂತೆ ಅವರ ದಿನನಿತ್ಯದ ವ್ಯವಹಾರಗಳನ್ನು ಗಮನಿಸುವುದು, ತಯಾರಿಸಲಾದ ಪ್ರಶ್ನಾವಳಿಗೆ ಉತ್ತರಗಳನ್ನು ಮನೆಯಲ್ಲೇ ತುಂಬಿಕೊಳ್ಳುವುದು, ಈ ಕುಟುಂಬದವರು ಆಚರಿಸುವ ಹಬ್ಬ, ಕಾರ್ಯಕ್ರಮಗಳಿಗೆ ತಪ್ಪದೇ ಭೇಟಿ ಕೊಡುವುದು, ಅಲ್ಲಿ ಅವರುಗಳ ಭಾಷಿಕ ಆಯ್ಕೆಗಳು ಬದಲಾವಣೆಗಳು ಹೇಗೆ ಬದಲಾಗುತ್ತಿರುತ್ತವೆ, ವರ್ಗದಿಂದ - ವರ್ಗಕ್ಕೆ, ಜಾತಿಯಿಂದ - ಜಾತಿಗೆ, ತಲೆಮಾರಿನಿಂದ - ತಲೆಮಾರಿಗೆ, ಅಣು ಕುಟುಂಬದಿಂದ - ಅವಿಭಕ್ತ ಕುಟುಂಬಕ್ಕೆ, ಖಾಸಗಿ ವಲಯಕ್ಕಿಂತ - ಸರ್ಕಾರಿ ವಲಯದಲ್ಲಿ ಹೇಗೆ ಭಾಷಿಕರು ಬಳಸುವ ಭಾಷೆ ಭಿನ್ನವಾಗಿರುತ್ತದೆ? ಇಲ್ಲಿ ದೊರಕುವ ಮಾಹಿತಿ ಮೊದಲೆರಡು ಹಂತದ ಕ್ಷೇತ್ರಕಾರ್ಯದಲ್ಲಿ ದೊರಕಿದ ಮಾಹಿತಿಗಿಂತ ಭಿನ್ನವಾಗಿದೆಯೇ ಅಥವಾ ಒಂದೇ ರೀತಿಯ ಮಾಹಿತಿ ದೊರೆಯಬಹುದೇ ಎನ್ನುವ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಲು ಪ್ರಯತ್ನಿಸಲಾಗಿದೆ. ದ್ವಿಭಾಷಿಕರ ಭಾಷೆಯ ಕಲಿಕೆ - ಬಳಕೆಯ ನೆಲೆಗಳನ್ನು ಕುರಿತು ಅಧ್ಯಯನ ಮಾಡುವಾಗ ಸೂಕ್ಷ್ಮವಾದ ಕ್ಷೇತ್ರಕಾರ್ಯ, ಕ್ಷೇತ್ರಕಾರ್ಯದ

ಹೊಸತಂತ್ರಗಳು ಹೆಚ್ಚಿನ ಸಂಶೋಧನ ಅವಧಿಯಲ್ಲಿ ನಡೆಯುವಂಥದ್ದಾಗಿದೆ. ಆದರೂ ಈ ಸೂಕ್ಷ್ಮ ಅಧ್ಯಯನ ಸಂಶೋಧನೆಯ ಅವಧಿಯಲ್ಲಿ ಒಂದು ಮಿತಿಯೊಳಗೆ ಮಾಡಿರುವಂಥದ್ದಾಗಿದೆ.

ಬಳ್ಳಾರಿ ಪರಿಸರದ ಕನ್ನಡ - ತೆಲುಗು ದ್ವಿಭಾಷಿಕತೆಯ ಅಧ್ಯಯನಕ್ಕೆ ಅನೇಕ ವಿಷಯಗಳನ್ನು ಬೇರೆ - ಬೇರೆ ವಿದ್ವಾಂಸರಿಂದ, ಕ್ಷೇತ್ರತಜ್ಞರಿಂದ, ಭಾಷಾ ತಜ್ಞರಿಂದ, ಭಾಷೆಯ ಬಗೆಗೆ ಕೆಲಸ ಮಾಡುತ್ತಿರುವ ಸಂಸ್ಥೆಗಳಿಂದ ತಿಳಿಯಲು ಪ್ರಯತ್ನಿಸಲಾಗಿದೆ. ಮೊದಲು ಮಾರ್ಗದರ್ಶಕರ ಜೊತೆಗೆ ಸಂಶೋಧನೆಯ ವಿಧಿ - ವಿಧಾನಗಳ ಬಗೆಗೆ, ಅಧ್ಯಯನದ ಚೌಕಟ್ಟಿನ ಬಗೆಗೆ, ಅಧ್ಯಯನಕ್ಕೆ ಬೇಕಾದ ಆಧಾರಗಳ ಬಗೆಗೆ ಅಧ್ಯಯನಕ್ಕೆ ಸಂಬಂಧಿಸಿದ ಅನೇಕ ವಿಷಯಗಳನ್ನು ಚರ್ಚಿಸಲಾಗಿದೆ. ಜೊತೆಗೆ, ಭಾರತದ ಸಂದರ್ಭದಲ್ಲಾಗಲೀ, ಕರ್ನಾಟಕದ ಸಂದರ್ಭದಲ್ಲಾಗಲೀ, ಭಾಷೆಯ ಕಲಿಕೆ - ಬಳಕೆ - ಬೋಧನೆಯ ಬಗೆಗೆ ಕೆಲಸಮಾಡುತ್ತಿರುವ ಅನೇಕರ ಬಳಿ ವಿಚಾರಗಳನ್ನು ಹಂಚಿಕೊಳ್ಳುವುದು, ಚರ್ಚಿಸುವುದರ ಮೂಲಕ ನನ್ನ ಅರಿವಿನ ವಿಸ್ತಾರವನ್ನು ಹೆಚ್ಚಿಸಿಕೊಂಡು, ಅಧ್ಯಯನ ಮಾಡಲು ಪ್ರಯತ್ನಿಸಲಾಗಿದೆ. ಆನೇಕಲ್ ಕನ್ನಡ - ತೆಲುಗು ದ್ವಿಭಾಷಿಕತೆಯ ಬಗೆಗೆ ಅಧ್ಯಯನ ನಡೆಸಿರುವ ಸುಜ್ಞಾನಮೂರ್ತಿರವರ ಜೊತೆ ಆನೇಕಲ್ ತಾಲ್ಲೂಕಿನ ದ್ವಿಭಾಷಾ ಸಂದರ್ಭ, ಸ್ವರೂಪ ಇತ್ಯಾದಿಗಳ ಬಗೆಗಿನ ಚರ್ಚೆ, ಪ್ರೊ. ಕಿ.ರಂ.ನಾಗರಾಜರವರ ಜೊತೆ ಸಾಮಾಜಿಕ ಭಾಷಾಶಾಸ್ತ್ರದ ನೆಲೆಗಳನ್ನು ಕುರಿತ ಚರ್ಚೆ ಮಾಡಲಾಗಿದೆ. ಎಂ.ಟಿ.ರತಿ ಮತ್ತು ಸಿ.ಪಿ.ನಾಗರಾಜ್ ಅವರುಗಳ ಭಾಷಾ ಅಧ್ಯಯನದಲ್ಲಿನ ಕ್ಷೇತ್ರಕಾರ್ಯದ ಅವರ ಅನುಭವಗಳು, ಪ್ರಶ್ನಾವಳಿಯನ್ನು ಬಳಸಿರುವ ವಿಧಾನ ಇತ್ಯಾದಿಗಳನ್ನು ತಿಳಿದುಕೊಳ್ಳಲಾಗಿದೆ. ಡಾ. ವನಮಾಲ ವಿಶ್ವನಾಥ್ ಅವರ ಬಳಿ ದ್ವಿತೀಯ ಭಾಷೆಯೊಂದನ್ನು ಕಲಿಯುವಾಗ ಮತ್ತು ಬೋಧಿಸುವಾಗಿನ ಸಮಸ್ಯೆಗಳ ಬಗೆಗೆ ಚರ್ಚಿಸಲಾಗಿದೆ. ಸಿರುಗುಪ್ಪ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಹನುಮಂತರೆಡ್ಡಿಯವರೊಂದಿಗೆ ಸಿರುಗುಪ್ಪ ತಾಲ್ಲೂಕಿನ ಕನ್ನಡ - ತೆಲುಗು ಭಾಷಿಕರ ಬಗೆಗಿನ ಮಾಹಿತಿ, ವಲಸಿಗರ ಸ್ಥಳಗಳ ಬಗೆಗಿನ ಮಾಹಿತಿಯನ್ನು ಪಡೆಯಲಾಗಿದೆ. ಡಾ. ಸೋಮಶೇಖರಗೌಡ ಅವರೊಂದಿಗೆ ಭಾರತದ ಸಂದರ್ಭದಲ್ಲಿ ಸಾಮಾಜಿಕ ಭಾಷಾಶಾಸ್ತ್ರದಲ್ಲಾದ ಅಧ್ಯಯನಗಳ ಬಗೆಗೆ ಚರ್ಚಿಸಲಾಗಿದೆ. ಕನ್ನಡ ವಿಶ್ವವಿದ್ಯಾಲಯದ ಭಾಷಾಭಿವೃದ್ಧಿ ವಿಭಾಗದ ಅಧ್ಯಾಪಕರೊಂದಿಗಿನ ಪ್ರತಿವಾರದ ಭಾಷೆಯ ಬಳಕೆ - ರಚನೆಗೆ ಸಂಬಂಧಿಸಿದ ಚರ್ಚೆಗಳು ಸಂಶೋಧನೆಗೆ ಬಹಳಷ್ಟು ಪೂರಕವಾಗಿ ಸಹಾಯವಾಗಿವೆ.

ಹೀಗೆ ಸಂಗ್ರಹಿಸಿದ ಮಾಹಿತಿಯನ್ನು ದೊಡ್ಡ ಕೋಷ್ಟಕದಲ್ಲಿ ದಾಖಲಿಸಿ ಅದರಲ್ಲಿ ದೊರೆತ ಮಾಹಿತಿಯಿಂದ ಬೇಕಾದ ಸಣ್ಣ ಸಣ್ಣ ಕೋಷ್ಟಕಗಳನ್ನು ಮಾಡಿಕೊಳ್ಳಲಾಗಿದೆ. ದ್ವಿಭಾಷಿಕರಿಂದ ದೊರೆತ ಮಾಹಿತಿಯ ಅಂಕಿ - ಅಂಶಗಳು, ಸಮಾಜೋಭಾಷಿಕ ಭಿನ್ನಾಂಶಗಳು ಜೊತೆಗೆ ಪ್ರಸ್ತುತ ವಿದ್ಯಮಾನಗಳಿಂದಾಗಿ ಬಳ್ಳಾರಿ ದ್ವಿಭಾಷಾ ಪರಿಸರದಲ್ಲಿ ಆಗುತ್ತಿರುವ ಬದಲಾವಣೆಗಳಲ್ಲಿ ದ್ವಿಭಾಷಿಕರ ಬಳಕೆಯ ನೆಲೆಗಳಲ್ಲಿ ಎರಡು ಭಾಷೆಯ ಕಾರ್ಯ ಯಾವ ರೀತಿಯ

ಪಾತ್ರವಹಿಸುತ್ತಿದೆ ಎನ್ನುವುದನ್ನು ವಿಶ್ಲೇಷಣೆ ಮಾಡಲಾಗಿದೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ದಾಖಲಿಸಿಕೊಂಡ ಸೂಕ್ಷ್ಮ ವಿವರಗಳನ್ನು ಬರವಣಿಗೆಯ ಸಂದರ್ಭಕ್ಕೆ ತಕ್ಕಂತೆ ಬಳಸಿಕೊಳ್ಳಲಾಗಿದೆ.

## ಅಧ್ಯಯನದಲ್ಲಿ ಬಳಸಿರುವ ಪರಿಕಲ್ಪನೆಗಳನ್ನು ಕುರಿತು

### ಮನೆಯಭಾಷೆ ಅಥವಾ ಸ್ವಭಾಷೆ

ಈ ಅಧ್ಯಯನದಲ್ಲಿ 'ಮಾತೃಭಾಷೆ' ಎಂಬ ಪರಿಕಲ್ಪನೆಯ ಬದಲಾಗಿ ಮನೆಮಾತು ಅಥವಾ ಕನ್ನಡ ಸ್ವಭಾಷಿಕರು, ತೆಲುಗು ಸ್ವಭಾಷಿಕರು ಎಂಬುದನ್ನು ಬಳಸಲಾಗಿದೆ. ಕೆಲವು ಸಂದರ್ಭಗಳಲ್ಲಿ ವಲಸೆಯಿಂದಾಗಿ ಅಥವಾ ಇನ್ನಿತರ ಕಾರಣಗಳಿಂದಾಗಿ ವ್ಯಕ್ತಿ ತಾನು ಬಾಲ್ಯದಲ್ಲಿ ಕಲಿತ ಮನೆಮಾತು ಅಥವಾ ಪ್ರಥಮ ಭಾಷೆಯನ್ನು ಸಂಪೂರ್ಣವಾಗಿ ಬಿಟ್ಟು ಪರಿಸರದ ಅನೇಕ ಭಾಷೆಗಳನ್ನು ಕಲಿತು ಸಂದರ್ಭಾನುಸಾರವಾಗಿ ಬೇರೆ - ಬೇರೆ ಭಾಷೆಗಳನ್ನು ಪ್ರಧಾನ - ಗೌಣ ಎಂಬ ವಿಂಗಡನೆ ಸಾಧ್ಯವಾಗದಂತೆ ಬಳಸುತ್ತಿರಬಹುದು. ಇಂತಹ ಸಂದರ್ಭದಲ್ಲಿ ಮಾತೃಭಾಷೆ ಎಂಬ ಕಲ್ಪನೆ ಎಂಬ ಕಲ್ಪನೆ ಅರ್ಥಹೀನವಾಗುತ್ತದೆ. ವೈವಾಹಿಕ ಸಂದರ್ಭದಲ್ಲಿ ಗಂಡ - ಹೆಂಡತಿಯರಿಗೆ ಬೇರೆ ಬೇರೆ ಭಾಷೆಗಳಿದ್ದರೂ, ಮಕ್ಕಳು ತಂದೆ ಮತ್ತು ಅವರ ಸಂಬಂಧಿಕರಿಂದ ಒಂದು ಭಾಷೆಯನ್ನು ತಾಯಿ ಮತ್ತು ಅವರ ಸಂಬಂಧದಿಂದ ಮತ್ತೊಂದು ಭಾಷೆಯನ್ನು ಏಕಕಾಲದಲ್ಲಿ ಕಲಿತಿರಬಹುದು ಅಥವಾ ಕ್ರಮವಾಗಿ ಕಲಿಯಬಹುದು. ಆಗ ಮಗುವಿಗೆ ಎರಡೂ ಮನೆ ಭಾಷೆ ಗೊತ್ತಿದ್ದರೂ ತಂದೆ ಮಾತನಾಡುವ ಭಾಷೆಯೆ ಪ್ರಧಾನವಾಗಿ ಪರಿಗಣಿಸಲಾಗುತ್ತದೆ. ಆದ್ದರಿಂದ ಕೆಲವು ಮಕ್ಕಳಿಗೆ ಮದರ್‌ಟಂಗ್ ಯಾವುದು ಎಂದರೆ ತೆಲುಗು ಎಂದೂ, ಫಾದರ್ ಟಂಗ್ ಯಾವುದು ಎಂದರೆ ಕನ್ನಡ ಎಂದೂ ಉತ್ತರಿಸಿರುವುದು ಕೆಲವೆಡೆಗಳಲ್ಲಿ ಕಾಣಲಾಗಿದೆ. ಆದ್ದರಿಂದ ಪ್ರಥಮ ಭಾಷೆ ಅಥವಾ ಮನೆಭಾಷೆ ಎಂಬ ಪರಿಭಾಷೆಯನ್ನು ಮೇಲಿನ ಅರ್ಥದಲ್ಲಿ ಬಳಸಲಾಗಿದೆ. ರೋಮೆನ್ (1992:22) ರವರು ಹೇಳುವಂತೆ "ಮಾತೃಭಾಷೇ ಎಂಬುದು ಒಂದು ಸಾಪೇಕ್ಷವಾದ ಪರಿಕಲ್ಪನೆ, ಒಬ್ಬ ವ್ಯಕ್ತಿಯ ಜೀವಿತ ಅವಧಿಯಲ್ಲಿ ಮಾತೃಭಾಷೆ ಬದಲಾಗಲೂಬಹುದು."

### ಆವರಣ

ಜೋಷುವ ಫಿಶ್‌ಮನ್ (1965) ರವರು ಬಳಸಿದ 'ಆವರಣ' ಎನ್ನುವ ಪರಿಕಲ್ಪನೆಯನ್ನು ಇಲ್ಲಿಯೂ ಹಾಗೆಯೇ ಬಳಸಲಾಗಿದೆ. "ಒಂದು ಸಾಮಾನ್ಯ ನಡವಳಿಕೆಯ ನಿಯಮಾವಳಿಯಿಂದ ನಿರ್ಬಂಧಿತವಾದ ಸಾಮಾಜಿಕ ಸಂದರ್ಭಗಳ ಗೊಂಚಲನ್ನು" ಫಿಶ್‌ಮನ್‌ರವರು 'ಆವರಣ' ಎಂದು ಬಳಸಿದ್ದಾರೆ. ದ್ವಿಭಾಷಿಕ ಸಮುದಾಯದಲ್ಲಿನ ಭಾಷಾ ಆಯ್ಕೆಗಳ ಮಾದರಿಯನ್ನು ವಿವರಿಸಲು ಈ ಪರಿಕಲ್ಪನೆಯನ್ನು ಹುಟ್ಟುಹಾಕಿದ್ದು, ಮೂಲಭೂತವಾಗಿ 'ಆವರಣ' ವಿಶ್ಲೇಷಣೆ

ಸಾಮಾಜಿಕ ವಿಶ್ಲೇಷಣೆಯನ್ನು ಹೊಂದಿರುವ ಸೂಕ್ಷ್ಮ ಅಧ್ಯಯನ. ಏಕೆಂದರೆ ಭಾಷಿಕ ನಡವಳಿಕೆಯನ್ನು ಆತ / ಆಕೆಯ ಮೇಲಿರುವ ಸಾಮಾಜಿಕ ವ್ಯವಸ್ಥೆಗಳು ರೂಪಿಸುತ್ತವೆ.

## ಭಾಷಾಪಲ್ಲಟ ಮತ್ತು ಭಾಷಾ ಸಂಗೋಪನೆ

ಸಾಮಾಜಿಕ ಭಾಷಾಶಾಸ್ತ್ರದ ಹಿನ್ನೆಲೆಯಲ್ಲಿ ದ್ವಿ-ಬಹುಭಾಷಿಕತೆಯ ಬಗೆಗೆ ಅಧ್ಯಯನಗಳನ್ನು ಮಾಡುವ ಸಂದರ್ಭದಲ್ಲಿ ಗುರುತಿಸಲಾದ ಪರಿಕಲ್ಪನೆಗಳಲ್ಲಿ ಭಾಷಾ ಪಲ್ಲಟ ಮತ್ತು ಭಾಷಾ ಸಂಗೋಪನೆಗಳು ಪ್ರಮುಖವಾಗಿವೆ. ಇಂಗ್ಲಿಶ್‌ನ Language maintenance ಎನ್ನುವುದರ ಸಂವಾದಿಯಾಗಿ ಭಾಷಾ ಸಂಗೋಪನೆ ಎಂತಲೂ, Language shift ಎನ್ನುವುದರ ಸಂವಾದಿಯಾಗಿ ಭಾಷಾ ಪಲ್ಲಟ ಎಂದೂ ಸಧ್ಯದ ಸಾಮಾಜಿಕ ಭಾಷಾಶಾಸ್ತ್ರದ ಬರಹಗಳಲ್ಲಿ ಬಳಸಲಾಗುತ್ತಿದೆ. ಅದೇ ಅರ್ಥದಲ್ಲಿ ಇಲ್ಲಿಯೂ ಈ ಪರಿಕಲ್ಪನೆಗಳನ್ನು ಬಳಸಲಾಗಿದೆ.

## ಭಾಷಾನಡವಳಿಕೆ ಮತ್ತು ಭಾಷಾಮನೋಭಾವ

ದ್ವಿಭಾಷಾ ಪರಿಸರದಲ್ಲಿ ಭಾಷಾ ಬಳಕೆಯ ನೆಲೆಗಳಲ್ಲಿ ಸಂದರ್ಭಗಳು ಬದಲಾದಂತೆ ಭಾಷಿಕರ ನಡವಳಿಕೆಗಳಲ್ಲಾಗುವ ಬದಲಾವಣೆಗಳನ್ನು ಒಟ್ಟಾಗಿ ಭಾಷಾ ನಡವಳಿಕೆಗಳೆಂದು ಬಳಸಲಾಗಿದೆ. ಹಾಗೆಯೆ, ದ್ವಿಭಾಷಿಕರಾದವರಲ್ಲಿ ಎರಡು ಭಾಷೆಗಳ ಬಗೆಗಿರುವ ಧೋರಣೆಗಳನ್ನು ಅಥವಾ ಭಾಷೆಯ ಬಗೆಗಿನ ಮನಸ್ಥಿತಿಯನ್ನು ಒಟ್ಟಾಗಿ ಭಾಷಾ ಮನೋಭಾವ ಎನ್ನುವ ಅರ್ಥದಲ್ಲಿ ಬಳಸಲಾಗಿದೆ.

## ನುಡಿಪಲ್ಲಟ ಮತ್ತು ನುಡಿಮಿಶ್ರಣ

ದ್ವಿಭಾಷಿಕ ಸನ್ನಿವೇಶಗಳಲ್ಲಿ ಭಾಷಿಕರ ವ್ಯವಹಾರದಲ್ಲಿ ಕಂಡುಬರುವ ಮುಖ್ಯ ಭಾಷಿಕ ಪ್ರಕ್ರಿಯೆಗಳಾಗಿ ನುಡಿಪಲ್ಲಟ ಮತ್ತು ನುಡಿಮಿಶ್ರಣವನ್ನು ಗುರುತಿಸಲಾಗಿದೆ. ಒಂದು ಭಾಷೆಯಲ್ಲಿ ಮೌಖಿಕವಾಗಿ ಮತ್ತು ಲಿಖಿತವಾಗಿ ಇನ್ನೊಂದು ಭಾಷೆಯ ಭಾಷಾಂಶಗಳನ್ನು ಬೆರಸುವುದು ನುಡಿ ಮಿಶ್ರಣವಾದರೆ, ನುಡಿಪಲ್ಲಟದಲ್ಲಿ ಒಂದು ವಾಕ್ಯವನ್ನು ಒಂದು ಭಾಷೆಯ ನಿಯಮಾನುಸಾರ ರಚಿಸಿ ಮುಗಿಸಿ ಅನಂತರ ಹೊಸ ವಾಕ್ಯವನ್ನು ಇಡಿಯಾಗಿ ಇನ್ನೊಂದು ಭಾಷೆಯಲ್ಲಿ ರಚಿಸಿ ಬಳಸಲಾಗುತ್ತದೆ. ಈ ಅರ್ಥದಲ್ಲಿ ನುಡಿಪಲ್ಲಟ ಮತ್ತು ನುಡಿಮಿಶ್ರಣದ ಪರಿಕಲ್ಪನೆಗಳನ್ನು ಬಳಸಲಾಗಿದೆ.

## ಭಾಷಾದ್ವೀಪ

ದ್ವಿ - ಬಹುಭಾಷಿಕ ಸಮುದಾಯಗಳಲ್ಲಿ ಬೇರೆ - ಬೇರೆ ಭಾಷೆಗಳನ್ನಾಡುವ ಭಾಷಿಕರು ಇತರೆಡೆಗಳಿಂದ ವಲಸೆ ಬಂದು ನೆಲೆಸಿರುತ್ತಾರೆ. ಇಂತಹ ಭಾಷಿಕರು ಬಹುಸಂಖ್ಯಾತ ಭಾಷಿಕ ಸಮುದಾಯವೊಂದರಲ್ಲಿ ಭೌಗೋಳಿಕವಾಗಿ ಒಂದೆಡೆ ಬೇರೆಯಾಗಿ ನೆಲೆಸುವುದೇ ಅಲ್ಲದೆ, ಪ್ರತಿನಿತ್ಯದ ಸಾಮಾಜಿಕ ಸಂದರ್ಭಗಳಲ್ಲಿ ತಮ್ಮ ಮನೆಮಾತುಗಳನ್ನು ಸಂಗೋಪನೆ ಮಾಡುತ್ತಿರುತ್ತಾರೆ. ಇಂತಹ ಸಂದರ್ಭದಲ್ಲಿರುವ ಭಾಷಿಕರಿಗೆ ಬಹುಸಂಖ್ಯಾತ ಭಾಷಿಕರೊಂದಿಗಿನ ಸಂಬಂಧಗಳು, ಸಂಪರ್ಕಗಳು ಗಾಢವಾಗಿ ಇರುವುದಿಲ್ಲ. ಉದ್ಯೋಗ ಮುಂತಾದ ಕಾರಣಗಳಿಗಾಗಿ ಬಹುಸಂಖ್ಯಾತ ಭಾಷಿಕರೊಡನೆ ವ್ಯವಹರಿಸುವ ಸಂದರ್ಭಗಳಿದ್ದರೂ ಅಂತಹ ಸಂದರ್ಭಗಳಲ್ಲಿ ಕೇವಲ ಆಂಶಿಕ ಪಲ್ಲಟವನ್ನು ಮಾತ್ರ ಬಹುಸಂಖ್ಯಾತರ ಭಾಷೆಯ ಕಡೆಗೆ ಮಾಡುತ್ತಿರುತ್ತಾರೆ. ಆದ್ದರಿಂದ ಹೆಚ್ಚಿನ ಸಂದರ್ಭದಲ್ಲಿ ತಮ್ಮ ಮನೆಮಾತುಗಳು ಇವರಲ್ಲಿ ಉಳಿದಿರುವುದೇ ಅಲ್ಲದೆ, ಒಳಗುಂಪುಗಳಲ್ಲಿ, ಸಂಬಂಧಿಕರು, ಸ್ನೇಹಿತರು, ನೆರೆಹೊರೆಯ ಆವರಣಗಳಲ್ಲಿ ಹೆಚ್ಚಾಗಿ ತಮ್ಮ ಮನೆಮಾತುಗಳನ್ನು ಬಳಸುತ್ತಿರುತ್ತಾರೆ. ಧಾರವಾಹಿ, ಸಿನಿಮಾ, ಚಿತ್ರಗೀತೆಗಳು, ಮುಂತಾದ ಮನರಂಜನೆ ಕಾರ್ಯಕ್ರಮಗಳನ್ನು ನೋಡುವುದು ಮತ್ತು ಕೇಳುವ ಗ್ರಹಿಕೆಯ ನೆಲೆಗಳು ಸ್ವಭಾಷೆಯಲ್ಲೆ ಹೆಚ್ಚಾಗಿ ಉಳಿದಿರುತ್ತವೆ. ಆದ್ದರಿಂದ ಇಂತಹ ಸಂದರ್ಭವೊಂದನ್ನು ಭಾಷಾದ್ವೀಪವೆಂದು ಕರೆಯಲಾಗಿದೆ. ಬಳ್ಳಾರಿ ಜಿಲ್ಲೆಗೆ ವಲಸೆ ಬಂದಿರುವ ಬಹುಪಾಲು ವಲಸಿಗರಲ್ಲಿ ಬಹಳಷ್ಟು ಜನ ತೆಲುಗು ಭಾಷಿಕರು ಒಂದೇ ಕಡೆಗಳಲ್ಲಿ ನೆಲೆಸಿರುವುದೇ ಅಲ್ಲದೆ ಹೆಚ್ಚಿನ ತೆಲುಗು ಭಾಷೆಯ ಸಾಮಾಜಿಕ ಸಂದರ್ಭಗಳಲ್ಲಿ ಇವರ ದಿನನಿತ್ಯದ ಬದುಕು ನಡೆಯುತ್ತಿದ್ದು, ಬಹಳಷ್ಟು ಭಾಷಿಕರು ಮೌಖಿಕ ನೆಲೆಗಳಲ್ಲಿ ತಮ್ಮ ಮನೆಮಾತುಗಳನ್ನು ಸಂಗೋಪನೆ ಮಾಡುತ್ತಿದ್ದಾರೆ. ಇಂತಹ ಭಾಷಿಕರು ನೆಲೆಸಿರುವ ಪ್ರದೇಶಗಳನ್ನು ತೆಲುಗು ಕ್ಯಾಂಪ್‌ಗಳೆಂದೇ ಕರೆಯಲಾಗುತ್ತಿದೆ. ಇನ್ನು ಹಲವೆಡೆಗಳಲ್ಲಿಯೂ ಇವರೆಲ್ಲರೂ ಒಟ್ಟಿಗೆ ನೆಲೆಸಿದ್ದಾರೆ. ಇಂತಹ ಸಂದರ್ಭವನ್ನು ಗುರುತಿಸಿ ಭಾಷಾದ್ವೀಪ ಎಂದು ಕರೆಯಲಾಗಿದೆ. ಅನೇಕ ದ್ವಿ - ಬಹುಭಾಷಿಕ ಸಂದರ್ಭಗಳಲ್ಲಿ ಇಂತಹ ಭಾಷಾದ್ವೀಪಗಳು ಇರುವುದನ್ನು ಗಮನಿಸಬಹುದಾಗಿದೆ.

## ಏಕಭಾಷಿಕರು

ಕನ್ನಡ - ತೆಲುಗು ದ್ವಿಭಾಷಾ ಸಂದರ್ಭದಲ್ಲಿ ನೆಲೆಸಿರುವವರಲ್ಲಿ ಯಾರಿಗೆ ದ್ವಿಭಾಷಿಕರಾಗುವ ಅವಶ್ಯಕತೆಗಳು ಇವೆಯೋ ಅವರಷ್ಟೇ ದ್ವಿಭಾಷಿಕರಾಗಿರುತ್ತಾರೆ. ಮಿಕ್ಕಂತೆ ಅನೇಕ ಏಕಭಾಷಿಕರು ದ್ವಿಭಾಷಾ ಸಂದರ್ಭದಲ್ಲಿರುವುದನ್ನು ಕಾಣಲಾಗಿದೆ. ಈ ದ್ವಿಭಾಷಾ ಸಂದರ್ಭದಲ್ಲಿ ಕೇವಲ ಕನ್ನಡ ಭಾಷೆಯಷ್ಟೆ ಗೊತ್ತಿರುವ ಭಾಷಿಕರನ್ನು, ಕೇವಲ ತೆಲುಗು ಭಾಷೆಯಷ್ಟೆ ಗೊತ್ತಿರುವ ಭಾಷಿಕರನ್ನು ಏಕಭಾಷಿಕರೆಂದು ಕರೆಯಲಾಗಿದೆ.

## ದ್ವಿಭಾಷಿಕರು

ಕನ್ನಡ - ತೆಲುಗು ಎರಡೂ ಭಾಷೆಗಳನ್ನು ಮಾತನಾಡಲು ಮತ್ತು ಅರ್ಥಮಾಡಿಕೊಳ್ಳಲು ಬರುವಂತಹ ಭಾಷಿಕರನ್ನು ದ್ವಿಭಾಷಿಕರೆಂದು ಕರೆಯಲಾಗಿದೆ. ಕೆಲವೊಮ್ಮೆ ಕನ್ನಡ - ತೆಲುಗು ಭಾಷೆಗಳಲ್ಲಿ ಕೇವಲ ಮೌಖಿಕ ನೆಲೆಯಲ್ಲಷ್ಟೆ ಅಲ್ಲದೆ ಸಾಕ್ಷರತೆಯ ನೆಲೆಗಳಲ್ಲೂ ಎರಡೂ ಭಾಷೆಗಳನ್ನು ಬಳಸುತ್ತಿರುವವರೂ ಇದ್ದಾರೆ. ಹೆಚ್ಚಿನ ಸಂದರ್ಭಗಳಲ್ಲಿ ಮೌಖಿಕ ನೆಲೆಯಲ್ಲಿ ಎರಡೂ ಭಾಷೆಗಳು ಗೊತ್ತಿರುವವರು ಕಂಡುಬಂದಿರುವುದರಿಂದ ಇಂತಹವರನ್ನು ದ್ವಿಭಾಷಿಕರೆಂದು ಗುರುತಿಸಲಾಗಿದೆ.

## ಅರೆದ್ವಿಭಾಷಿಕತೆ ಮತ್ತು ಅರೆದ್ವಿಭಾಷಿಕರು

ಎರಡು ಭಿನ್ನಭಾಷೆಗಳ ಸಂಪರ್ಕದಿಂದ ಉಂಟಾದ ದ್ವಿಭಾಷಾ ಸಂದರ್ಭದಲ್ಲಿ ನೆಲೆಸಿರುವ ಅನೇಕ ಭಾಷಿಕರಿಗೆ ತಮ್ಮ ಮನೆಭಾಷೆಯ ಜೊತೆಗೆ ಬೇರೊಂದು ಭಾಷೆಯನ್ನು ಗ್ರಹಿಸುವ ಓದಿದ್ದನ್ನು ಅರ್ಥಮಾಡಿಕೊಳ್ಳುವ ಕೌಶಲ ಮಾತ್ರ ಇರುತ್ತದೆ, ಇಂತಹವರನ್ನು ಅರೆದ್ವಿಭಾಷಿಕರೆಂದು, ಇಂತಹ ಸಂದರ್ಭವೊಂದನ್ನು ಅರೆದ್ವಿಭಾಷಿಕತೆಯ ಸಂದರ್ಭವೆಂದೂ ಕರೆಯಲಾಗಿದೆ. ಬಳ್ಳಾರಿ ಕನ್ನಡ - ತೆಲುಗು ದ್ವಿಭಾಷಾ ಸಂದರ್ಭದಲ್ಲಿ ಅರೆದ್ವಿಭಾಷಿಕತೆಯು ಹೆಚ್ಚಾಗಿ ಕಾಣುತ್ತಿದೆ. ತೆಲುಗು ಭಾಷೆಯನ್ನು ಗ್ರಹಿಸುವ ಕೌಶಲವೊಂದು ಬಹುಸಂಖ್ಯಾತ ಕನ್ನಡಿಗರಿಗೆ ಇರುವುದನ್ನು ಕಾಣಲಾಗಿದೆ. ಆದರೆ ಕನ್ನಡಿಗರು ಮೌಖಿಕ ನೆಲೆಗಳಲ್ಲಿ ತೆಲುಗು ಭಾಷೆಯನ್ನು ಬಳಸುವುದು ಕಡಿಮೆ. ಹಾಗೆಯೇ ತೆಲುಗರಲ್ಲಿ ಕೆಲವರು ಮಾತ್ರ ಕನ್ನಡವನ್ನು ಗ್ರಹಿಕೆಯ ನೆಲೆಯಲ್ಲಿ ಪಡೆದಿದ್ದಾರೆ. ಹೆಚ್ಚಿನ ತೆಲುಗು ಭಾಷಿಕರು ಕನ್ನಡವನ್ನು ಮೌಖಿಕ ನೆಲೆಗಳಲ್ಲಿ ಬಳಸುತ್ತಾರೆ. ಬಹುಭಾಷಿಕ ಭಾರತದಲ್ಲಿ ಬಹಳಷ್ಟು ಸಂಖ್ಯೆಯಲ್ಲಿ ಯಾವುದೇ ಭಾಷೆಯ ಭಾಷಿಕರು ತಮ್ಮ ಮನೆಭಾಷೆಯ ಜೊತೆಗೆ ಅನೇಕ ಭಾಷೆಗಳನ್ನು ಗ್ರಹಿಸುತ್ತಿರುತ್ತಾರೆ. ಇದಕ್ಕೆ ಪೂರಕವಾಗಿ ಸಾಂಪ್ರದಾಯಿಕ ಆಚರಣೆಗಳು, ಹಬ್ಬಗಳು, ಸಮೂಹ ಮಾಧ್ಯಮಗಳು, ಶಿಕ್ಷಣದ ಸಂದರ್ಭಗಳು, ಸಿನಿಮಾಗಳು, ನೆರೆಹೊರೆ ಮುಂತಾದವುಗಳು ಅನೇಕ ಭಾಷೆಗಳನ್ನು ಕಿವಿಯ ಮೇಲೆ ಹಾಕುವುದರಿಂದ ಗ್ರಹಿಕೆಯ ನೆಲೆಗಳಲ್ಲಿ ಅರೆ ದ್ವಿಭಾಷಿಕತೆಯನ್ನು ಗುರುತಿಸಬಹುದಾಗಿದೆ.

## ಅಧ್ಯಯನದಲ್ಲಿ ಬಳಸಲಾಗಿರುವ ಸಾಮಾಜಿಕ ಭಿನ್ನಾಂಶಗಳನ್ನು ಕುರಿತು

ಲಿಂಗ - ಮಹಿಳೆಯರು, ಪುರುಷರು

ಶಿಕ್ಷಣ - ವಿದ್ಯಾವಂತರು, ಅವಿದ್ಯಾವಂತರು

ವರ್ಗ - ಉನ್ನತ - ಮಾಸಿಕ ಆದಾಯ 25 ಸಾವಿರಕ್ಕೂ ಹೆಚ್ಚು ಇರುವವರು

ಮೇಲ್‌ಮಧ್ಯಮ - ಮಾಸಿಕ ಆದಾಯ 10 ರಿಂದ 20 ಸಾವಿರ

ಮಧ್ಯಮ - ಮಾಸಿಕ ಆದಾಯ 5 ರಿಂದ 10 ಸಾವಿರದ ಒಳಗಿರುವವರು

ಕೆಳಮಧ್ಯಮ - ಮಾಸಿಕ ಆದಾಯ 2 ಸಾವಿರದ ಒಳಗಿರುವವರು

ಕೆಳವರ್ಗ - ಮಾಸಿಕ ಆದಾಯ 1ಸಾವಿರದ ಒಳಗಿರುವವರು

ಕುಟುಂಬ : ಅವಿಭಕ್ತ - ಅಣುಕುಟುಂಬ

ತಂದೆ - ತಾಯಿ, ಮಗು ಅಥವಾ ಮಕ್ಕಳು ಮಾತ್ರ ಇರುವ ಕುಟುಂಬವನ್ನು ಅಣುಕುಟುಂಬವೆಂದು, ತಂದೆ - ತಾಯಿ, ಮಕ್ಕಳ ಜೊತೆಗೆ ಕುಟುಂಬದ ಇತರ ಸದಸ್ಯರು ಇರುವ ಕುಟುಂಬಗಳನ್ನು ಅವಿಭಕ್ತ ಎಂದು ಬಳಸಲಾಗಿದೆ.

ವಯಸ್ಸು - 45 ರಿಂದ 60 ಒಂದನೇ ತಲೆಮಾರು

- 25 ರಿಂದ 45 ಎರಡನೇ ತಲೆಮಾರು

- 12 ರಿಂದ 25 ಮೂರನೇ ತಲೆಮಾರುಗಳೆಂದು ಪರಿಗಣಿಸಲಾಗಿದೆ.

### ಜಾತಿ

ಈ ಕೆಳಕಂಡ ಜಾತಿಗಳ ಪಟ್ಟಿ ಸಾಮಾಜಿಕ ತಿಳುವಳಿಕೆಯಲ್ಲಿನ ಶ್ರೇಣೀಕರಣವಲ್ಲ. ಕ್ಷೇತ್ರಕಾರ್ಯದಲ್ಲಿ ದೊರೆತ ಮಾಹಿತಿಯಿಂದ ಕಂಡುಬಂದಿರುವ ಜಾತಿಗಳಲ್ಲಿ ದ್ವಿಭಾಷಿಕತೆಯ ಸಂರಚನೆಯ ಸ್ವರೂಪವನ್ನು ತಿಳಿಯಲು ಅಧ್ಯಯನದಲ್ಲಿ ಕೆಳಕಂಡಂತೆ ಬಳಸಲಾಗಿದೆ. ಸರ್ಕಾರವು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡವೆಂದು ಗುರುತಿಸಿರುವ ಜಾತಿಗಳನ್ನು ಇಲ್ಲಿಯೂ ಅದೇ ಪರಿಭಾಷೆಯಲ್ಲಿ ಬಳಸಲಾಗಿದೆ.

1. ಲಿಂಗಾಯತ (ಬಣಜಿಗ, ಜಂಗಮ, ವೀರಶೈವ, ಲಿಂಗಾಯತ)
2. ಕುರುಬ
3. ಬ್ರಾಹ್ಮಣ
4. ನೇಕಾರರು (ಪದ್ಮಸಾಲಿ, ದೇವಾಂಗ)
5. ವೈಶ್ಯ (ಕೋಮುಟಿಗರು, ಶೆಟ್ಟರು, ಆರ್ಯವೈಶ್ಯ)
6. ಒಕ್ಕಲಿಗ (ಕಮ್ಮರೆಡ್ಡಿ, ಕಾಪುರೆಡ್ಡಿ, ಗೌಡ)

7. ಪರಿಶಿಷ್ಟ ಜಾತಿ (ಮಾದಿಗರು, ವಡ್ಡರು, ಭಜಂತ್ರಿ, ದಾಸರು)

8. ಪರಿಶಿಷ್ಟ ಪಂಗಡ (ನಾಯಕರು)

9. ಇತರೆ ಜಾತಿಗಳು (ಅಗಸ,ಉಪ್ಪಾರ, ವಿಶ್ವಕರ್ಮ, ಕುಂಬಾರ, ಬಲಜಿಗ, ಈಡಿಗ)



ಅಧ್ಯಾಯ : ಮೂರು

# ಸಾಮಾಜಿಕ ಭಾಷಾಶಾಸ್ತ್ರ ಮತ್ತು ದ್ವಿಭಾಷಿಕತೆಯನ್ನು ಕುರಿತು

೧. ಸಾಮಾಜಿಕ ಭಾಷಾಶಾಸ್ತ್ರದ ನೆಲೆಗಳು

೨. ಸಾಮಾಜಿಕ ಭಾಷಾಶಾಸ್ತ್ರದ ನೆಲೆಯಲ್ಲಿ ಕನ್ನಡದ ಬಗೆಗೆ ನಡೆದಿರುವ ಅಧ್ಯಯನಗಳು

೩. ದ್ವಿಭಾಷಿಕತೆ ಎಂದರೇನು?

೪. ದ್ವಿಭಾಷಿಕತೆಯ ಸ್ವರೂಪ ಮತ್ತು ವಿಧಗಳು

೫. ದ್ವಿಭಾಷಾ ಪರಿಸರಗಳು ಮತ್ತು ಅವುಗಳ ಪರಿಣಾಮಗಳು

೬. ದ್ವಿಭಾಷಿಕತೆಯ ಅಧ್ಯಯನ ಬೆಳೆದುಬಂದ ದಾರಿ
(ಪಶ್ಚಿಮದ ಸಂದರ್ಭದಲ್ಲಿ ಮತ್ತು ಭಾರತದ ಸಂದರ್ಭಗಳನ್ನು ಆಧರಿಸಿ)

೭. ಕರ್ನಾಟಕದಲ್ಲಿ ದ್ವಿಭಾಷಿಕತೆ

ಅಧ್ಯಾಯ : ಮೂರು

# ಸಾಮಾಜಿಕ ಭಾಷಾಶಾಸ್ತ್ರ ಮತ್ತು ದ್ವಿಭಾಷಿಕತೆಯನ್ನು ಕುರಿತು

## ಸಾಮಾಜಿಕ ಭಾಷಾಶಾಸ್ತ್ರದ ನೆಲೆಗಳು

ಭಾಷೆ ಒಂದು ಸಾಮಾಜಿಕ ಪ್ರಕ್ರಿಯೆ, ಸಮಾಜದ ಸ್ತರ ವಿಸ್ತಾರಗಳಲ್ಲಿ ಕಾಲ, ದೇಶ, ಪರಿಸರಕ್ಕನುಸಾರವಾಗಿ ಅಭಿವ್ಯಕ್ತಿ ಮಾಧ್ಯಮವಾಗಿ ನಿಲ್ಲಬಲ್ಲ ಸಾಧನ. ಸಮಾಜದಲ್ಲಿ ಮಾನವನ ವೈಯಕ್ತಿಕ ಸಿದ್ಧಿ ಸಾಧನೆಗಳಲ್ಲಿ ಭಾಷಾ ಸಿದ್ಧಿ ವಿಶಿಷ್ಟ ಹಾಗೂ ಗುರುತರವಾದುದು. ವ್ಯಕ್ತಿಯ ಪ್ರತಿನಿತ್ಯದ ವ್ಯವಹಾರದಲ್ಲೂ ಭಾಷೆಯ ಪಾತ್ರಮಹತ್ವದ್ದು. ಇದು ಉಸಿರಿನಷ್ಟೆ ಅವಶ್ಯಕ. ವ್ಯಕ್ತಿಯ ಬೌದ್ಧಿಕ ಚಟುವಟಿಕೆ, ಅನಿಸಿಕೆ, ಅನುಭವ, ಭಾವನೆ ಹಾಗೂ ಪ್ರತಿಕ್ರಿಯೆಗಳನ್ನು ಯುಕ್ತ ರೀತಿಯಲ್ಲಿ ಸಂವಹಿಸುವ ಸಾಮಾಜಿಕ ಮಾಧ್ಯಮ, ವ್ಯಕ್ತಿಯ ಸಾಮಾಜಿಕ, ಸಾಂಸ್ಕೃತಿಕ, ಔದ್ಯೋಗಿಕ, ಪ್ರಾದೇಶಿಕ ವೈಶಿಷ್ಟ್ಯಗಳನ್ನು ಗುರುತಿಸುವುದು ವ್ಯಕ್ತಿಯಾಡುವ ಮಾತಿನಿಂದಲೆ. ಜಗತ್ತಿನಲ್ಲಿ ಭಾಷೆಯಿಲ್ಲದ ಸಮಾಜವಿಲ್ಲವಾದ್ದರಿಂದ ಭಾಷೆಯೊಂದನ್ನು ಬಳಸದ ಮಾನವ ಸಮುದಾಯವನ್ನು ಕಾಣುವುದು ಅಸಾಧ್ಯ. ಒಂದು ಪ್ರದೇಶದ ಭಾಷಾ ಬಳಕೆ ಆ ಪ್ರದೇಶದ ಸಾಮಾಜಿಕ ಸ್ಥಿತಿ ಗತಿಗಳನ್ನು ಅವಲಂಬಿಸಿರುತ್ತದೆ.

ಸಮಾಜ ಮತ್ತು ಭಾಷೆ ಇವೆರಡರ ಆಂತರಿಕ ಸಂಬಂಧ ವಿಶಿಷ್ಟವಾದುದು. ಭಾಷೆಯಿಂದ ಸಮಾಜದ ರಚನಾ ವ್ಯವಸ್ಥೆಯನ್ನು ಬಹು ಸುಲಭವಾಗಿ ಅರಿಯಬಹುದು. ಸಮಾಜದಲ್ಲಿ ವ್ಯಕ್ತಿ ತನ್ನಷ್ಟಕ್ಕೆ ಸರ್ವಸ್ವತಂತ್ರನಾಗಿರದೆ ಆಯಾ ಸಮುದಾಯದ ಅವಿಚ್ಛಿನ್ನ ಘಟಕವಾಗಿರುವನು. ವ್ಯಕ್ತಿಯನ್ನು ಸಮಾಜದಿಂದ ಯಾವುದೇ ಕಾರಣದಿಂದಲೂ ಬೇರ್ಪಡಿಸಲಾಗದು. "ಭಾಷೆ ಸಮಾಜದ ಎಲ್ಲ ಚಟುವಟಿಕೆಯ ಕೇಂದ್ರ. ಸಮಾಜದ ಬೆಳವಣಿಗೆಗೆ ಹಾಗೂ ಬದಲಾವಣೆಗೆ ಭಾಷೆ ಅನಿವಾರ್ಯ. ಭಾಷೆಯನ್ನು ಸಮಾಜದ ಹಿನ್ನೆಲೆಯಲ್ಲಿಗಮನಿಸದೆ ಅಧ್ಯಯನ ಮಾಡಿದರೆ ಭಾಷೆಯ ಸಂಪೂರ್ಣ ವೈಜ್ಞಾನಿಕ ವಿಶ್ಲೇಷಣೆ ಮಾಡಿದಂತಾಗುವುದಿಲ್ಲ" ಎಂಬ ಪೀಟರ್ ಟ್ರೆಡ್ಗಿಲ್ (1978) ಅವರ ಅಭಿಪ್ರಾಯ ಭಾಷೆ

ಮತ್ತು ಸಮಾಜದ ಗಾಢ ಸಂಬಂಧ ಮತ್ತು ಮಹತ್ವವನ್ನು ಸ್ಪಷ್ಟಪಡಿಸುವುದು.

ಸಮಾಜದಲ್ಲಿ ವ್ಯಕ್ತಿ ಭಾಷಾ ಕ್ರಿಯೆಗಳ ಮೂಲಕ ಭಾಷಾ ಸಾಮರ್ಥ್ಯವನ್ನು ಪಡೆಯುವ ಕ್ರಿಯೆ ಜೀವಂತ ಪ್ರಕ್ರಿಯೆ. ಕ್ರಿಯೆಯ ಉದ್ದೇಶಕ್ಕೆ ಅನುಗುಣವಾಗಿ ಭಾಷೆ ಸಮಾಜದಲ್ಲಿ ಬಳಕೆಯಾಗುತ್ತಿರುತ್ತದೆ. ಸಂದರ್ಭಕ್ಕೆ ತಕ್ಕಂತೆ ಭಾಷಿಕರು ಭಾಷೆಯನ್ನು ಬಳಸುತ್ತಿರುತ್ತಾರೆ. ದಿನನಿತ್ಯದ ಜೀವನ ಕ್ರಮದಲ್ಲಿ ಇದು ಒಪ್ಪಿತವಾದದ್ದು ಎನ್ನುವ ನಿಯಮಗಳೇನೂ ಇರುವುದಿಲ್ಲ. ಯಾವುದೇ ಒಂದು ಭಾಷಾ ಸಮುದಾಯದ ಭಾಷಾ ಕಲಿಕೆ ಮತ್ತು ಬಳಕೆಯ ಪ್ರಕ್ರಿಯೆಗಳನ್ನು ಅರ್ಥಮಾಡಿಕೊಳ್ಳಲು ಸಮಾಜೋಭಾಷಿಕ ಅಂಶಗಳ ಪರಿಜ್ಞಾನದ ಅಗತ್ಯವಿದೆ. ಒಂದು ಸಮುದಾಯದಲ್ಲಿ ಬಳಸುವ ಭಾಷಾ ಸಂಕೀರ್ಣ ಅದು ಹಲವಾರು ಭಾಷಾ ವೈವಿಧ್ಯತೆ ಮತ್ತು ವಿವಿಧ ವ್ಯವಸ್ಥೆಗಳ ಸಂಗಮ. ಸಮುದಾಯದಲ್ಲಿ ಬೇಕಾದಷ್ಟು ಮಾತಿನ ಶೈಲಿಗಳಿರುತ್ತವೆ. ಅವುಗಳು ಒಂದೇ ಸಮನಾಗಿರುವುದಿಲ್ಲ. ವ್ಯಕ್ತಿಯಲ್ಲಿ ಕೂಡ ಭಾಷಾ ಬಳಕೆ ಸಮನಾಗಿ ಇರುವುದಿಲ್ಲ. ಭಾಷಾ ವ್ಯವಹಾರ ಒಂದಕ್ಕೊಂದು ಸಂಬಂಧವಿರುವ ಒಂದು ಮಾನಸಿಕ ಕ್ರಿಯೆ ಸಾಮಾಜಿಕ ಅಂಶಗಳು ದಿನನಿತ್ಯದ ಭಾಷಾ ಬಳಕೆಯನ್ನು ನಿಯಂತ್ರಿಸುತ್ತಿರುತ್ತವೆ. ಸಾಮಾಜಿಕ ಗುಂಪು ಭಾಷೆಯನ್ನು ಪಡೆಯುವ ಕ್ರಿಯೆ ಜೀವನ ಪೂರ್ತಿ ನಡೆಯುತ್ತಿರುತ್ತದೆ. ಭಾಷೇತರ ಉಪಕರಣ ಭಾಷೆಯ ಜೊತೆಗೆ ಸಮ್ಮಿಲಿತವಾಗಿ ಭಾಷಾ ಪ್ರಕ್ರಿಯೆ ನಡೆಯುತ್ತಿರುತ್ತದೆ. ಆದ್ದರಿಂದ ಸಮಾಜಕ್ಕೂ ಭಾಷೆಗೂ ಇರುವ ಎಲ್ಲ ತೆರನಾದ ಸಂಬಂಧಗಳನ್ನು ಕುರಿತು ಶಾಸ್ತ್ರೀಯವಾಗಿ ಅಧ್ಯಯನ ಮಾಡುವ ಭಾಷಾಶಾಸ್ತ್ರದ ಅನ್ವಯಿಕ ಶಾಖೆಯಾಗಿ ಸಾಮಾಜಿಕ ಭಾಷಾಶಾಸ್ತ್ರ ಅಸ್ತಿತ್ವಕ್ಕೆ ಬಂದಿದೆ.

ಸಾಮಾಜಿಕ ಭಾಷಾಶಾಸ್ತ್ರದ ಅಧ್ಯಯನ ಮುಖ್ಯವಾಗಿ ಸಮಾಜ ಮತ್ತು ಭಾಷೆಯ ನಡುವಿನ ಸಂಬಂಧಗಳ ಬಗೆಗಿನ ಅಧ್ಯಯನವಾಗಿದೆ. ಭಾಷೆಯನ್ನು ಸಾಮಾಜಿಕ ಪರಿಸರದ ಹಿನ್ನೆಲೆಯಲ್ಲಿ ವಿಶ್ಲೇಷಿಸುವ ನಿಟ್ಟಿನಲ್ಲಿ ಭಾಷಾಶಾಸ್ತ್ರಜ್ಞರು, ಸಮಾಜಶಾಸ್ತ್ರಜ್ಞರು, ಮಾನವ ಶಾಸ್ತ್ರಜ್ಞರು ಕೈಗೊಂಡ ಶ್ರಮದ ಫಲವಾಗಿ ಸಾಮಾಜಿಕ ಭಾಷಾಶಾಸ್ತ್ರ ಎಂಬ ಶಾಖೆ ಭಾಷಾಶಾಸ್ತ್ರದಲ್ಲಿ ಅಸ್ತಿತ್ವಕ್ಕೆ ಬಂದಿದೆ. ಪರ್ತ್ (1950), ಹಡ್‌ಸ್ನ್ (1939), ಹ್ಯಾವರ್ ಸಿ. ಕ್ಯೂರಿ (1956) ಇವರುಗಳು ಸಮಾಜ ಮತ್ತು ಸಂಸ್ಕೃತಿಗಳಲ್ಲಿ ಅಡಕವಾಗಿರುವ ಮಾನವ ಭಾಷೆಯ ಅಧ್ಯಯನಕ್ಕೆ ಸಾಮಾಜಿಕ ಭಾಷಾಶಾಸ್ತ್ರ ಎನ್ನುವ ಪರಿಭಾಷೆಯನ್ನು ಬಳಸಲು ಆರಂಭಿಸಿದರು. ಈ ಅಧ್ಯಯನ ಒಂದು ಶಿಸ್ತಾಗಿ ರೂಪುಗೊಂಡದ್ದು ಪಶ್ಚಿಮ ರಾಷ್ಟ್ರಗಳಲ್ಲಿ. 1950 ರ ದಶಕಗಳಿಗೆ ಮುಂಚೆ ಆಂಥ್ರೋಪಾಲಜಿ ಮತ್ತು ಯಥ್ನೋಲಿಗ್ವಿಸ್ಟಿಕ್‌ಗಳಲ್ಲಿ ಈ ಅಧ್ಯಯನ ಅಂಶಗಳು ಒಳಗೊಂಡಿತ್ತು. ಈಗ ಅವು ಸಾಮಾಜಿಕ ಭಾಷಾಶಾಸ್ತ್ರದಲ್ಲಿ ಸೇರ್ಪಡೆಯಾಗಿವೆ. ಹೀಗಾಗಿ ಸಾಮಾಜಿಕ ಭಾಷಾಶಾಸ್ತ್ರ ಇಂದು ತನ್ನ ಸೈದ್ಧಾಂತಿಕ ಹೊಸ ಪರಿಯಿಂದಷ್ಟೆ ಅಲ್ಲ, ಅನ್ವಯಿಕವಾಗಿ ತನ್ನ ತಾಂತ್ರಿಕ ನೈಪುಣ್ಯದಿಂದಲೂ ಭಾಷಾಶಾಸ್ತ್ರದ ಇತ್ತೀಚಿನ ಪ್ರವೃತ್ತಿಗಳಲ್ಲಿ ಮಹತ್ತರ ಶಾಖೆ ಎನಿಸಿದೆ.

ಐವತ್ತರ ದಶಕಕ್ಕಿಂತ ಹಿಂದೆ ಭಾಷೆಯನ್ನು ಸಮಾಜ ಮತ್ತು ಸಂಸ್ಕೃತಿಯ ಹಿನ್ನೆಲೆಯಲ್ಲಿ ಅಧ್ಯಯನ ಮಾಡಿಯೇ ಇರಲಿಲ್ಲ ಎಂದು ಹೇಳಲು ಬರುವುದಿಲ್ಲ. ಇಂಥ ಅಧ್ಯಯನಗಳು ನಡೆದಿದ್ದರೂ ಅವುಗಳಿಗೆ ಈ ಹೆಸರು ಇರಲಿಲ್ಲ ಎಂಬುದು ಗಮನಾರ್ಹ. ಪ್ರಾರಂಭದಲ್ಲಿ ಇದಕ್ಕೆ ಬೇಕಾದ ಅಧ್ಯಯನ ಕ್ರಮವಾಗಲೀ, ವಿಧಾನವಾಗಲೀ ಸೈದ್ಧಾಂತಿಕ ಚೌಕಟ್ಟಾಗಲಿ ವ್ಯವಸ್ಥಿತ ರೂಪದಲ್ಲಿ ಇರಲಿಲ್ಲ. ಕ್ರಮೇಣ ಈ ಎಲ್ಲವನ್ನು ರೂಪಿಸಿಕೊಳ್ಳುವುದೆ ಅಲ್ಲದೆ ಇತರ ಜ್ಞಾನಶಾಖೆಗಳ ಸಹಾಯದಿಂದ ಸಾಮಾಜಿಕ ಭಾಷಾಶಾಸ್ತ್ರವು ಅಂತರ್‌ಶಿಸ್ತಿನ ಅಧ್ಯಯನವಾಗಿ ರೂಪುಗೊಂಡಿತು. ಇದು ರಚನಾತ್ಮಕ ಭಾಷಾಶಾಸ್ತ್ರದಂತೆ ಭಾಷೆಯನ್ನು 'ವಿಕಲ್ಪಗಳಿಲ್ಲದ ಏಕರೂಪೀ ವ್ಯವಸ್ಥೆ' ಎಂದೇನೂ ಪರಿಗಣಿಸಲಿಲ್ಲ. ಒಂದು ಭಾಷಿಕ ಸಮುದಾಯದಲ್ಲಿ ಕಂಡುಬರುತ್ತಿದ್ದ ನುಡಿರೂಢಿಗಳ ವ್ಯತ್ಯಯಗಳ ಸರಿಯಾದ ಹಿನ್ನೆಲೆ ಗಮನಿಸಿ ವಿಶ್ಲೇಷಿಸಲಾಗದೆ ಸ್ವಚ್ಛಂದ ಪರಿವರ್ತನೆಗಳೆಂದು ಕರೆದು ಕೈ ತೊಳೆದುಕೊಳ್ಳುತ್ತಿದ್ದ ಸಂದರ್ಭದಲ್ಲಿ ಸಾಮಾಜಿಕ ಭಾಷಾಶಾಸ್ತ್ರ 'ಈ ವಿಕಲ್ಪಗಳಿಗೂ ಸಾಮಾಜಿಕ ವಿಕಲ್ಪಗಳಿಗೂ ನಿಯಮಿತವಾದ ಸಂಬಂಧಗಳಿವೆ' ಎಂದು ಪ್ರತಿಪಾದಿಸಿ 'ಭಾಷಾ ವೈವಿಧ್ಯತೆ'ಯನ್ನು ತನ್ನ ಅಧ್ಯಯನದ ವಿಷಯವಾಗಿ ಮಾಡಿಕೊಂಡಿತು.

ಈ ಕ್ಷೇತ್ರದಲ್ಲಿ ಕೆಲಸ ಮಾಡಿರುವ ಭಾಷಾವಿಜ್ಞಾನಿಗಳು ಭಾಷಿಕ ಪರಿಮಾಣಗಳನ್ನು ಸಾಮಾಜಿಕ ಪರಿಮಾಣಗಳೊಂದಿಗೆ ಹೊಂದಿಸಲು ನಿರ್ದಿಷ್ಟವಾದ, ವ್ಯವಸ್ಥಿತವಾದ, ಸ್ವತಂತ್ರ ವೈಜ್ಞಾನಿಕ ದೃಷ್ಟಿಕೋನವನ್ನು ಕೊಡುವುದರ ಮೂಲಕ ಈ ಕ್ಷೇತ್ರಕ್ಕೊಂದು ಹೊಸರೀತಿಯಾದ ಅಸ್ತಿತ್ವವನ್ನು ಕೊಟ್ಟರು. ಭಾಷೆಯ ರಚನೆಯಲ್ಲಿ ಧ್ವನಿ, ಪದ, ವಾಕ್ಯ, ಅರ್ಥ, ಮುಂತಾದ ಅಂಶಗಳಿರುವಂತೆ ಸಾಮಾಜಿಕ ರಚನೆಯಲ್ಲಿ ಮನುಷ್ಯನಿಗೆ ಲಿಂಗ, ವರ್ಗ, ಜಾತಿ, ಶಿಕ್ಷಣ, ಕುಟುಂಬ ಮುಂತಾದ ಅಂಶಗಳಿವೆ. ಇವು ಸಾಮಾಜಿಕ ರಚನೆಯಲ್ಲಿ ನೇರವಾಗಿ ಸಂಬಂಧಪಟ್ಟ ಭಾಷೆಯ ರಚನಾಂಶಗಳ ವ್ಯತ್ಯಯಕ್ಕೆ ಕಾರಣವಾಗುತ್ತವೆ ಎಂಬುದನ್ನು ಗಮನಿಸದ ಭಾಷಾಶಾಸ್ತ್ರಜ್ಞರು ಸಾಮಾಜಿಕ ರಚನೆಯಲ್ಲಿ ಮನುಷ್ಯನಿಗೆ ಇರುವ ಭಿನ್ನಾಂಶಗಳಿಂದಾಗಿ ಹೇಗೆ ಭಾಷೆಯಲ್ಲಿ ವ್ಯತ್ಯಾಸಗಳು, ಬದಲಾವಣೆಗಳು ಉಂಟಾಗುತ್ತವೆ ಎಂಬುದನ್ನು ತಿಳಿಯಲು ಸಾಮಾಜಿಕ ಬದುಕು - ಕೊಡುಕೊಳ್ಳುವಿಕೆಯ ಕಾರ್ಯ - ಯಾರು - ಯಾರೊಂದಿಗೆ ಮಾತನಾಡುತ್ತಾರೆ, ಯಾವ ಸಾಮಾಜಿಕ ಆವರಣದಲ್ಲಿ ಭಾಷಿಕ ಕ್ರಿಯೆ ನಡೆಯುತ್ತಿದೆ, ಸಂದರ್ಭಗಳು ಬದಲಾದಂತೆ ಭಾಷಿಕರು ಭಾಷೆಯನ್ನು ಹೇಗೆ ಬಳಸುತ್ತಾರೆ, ಭಾಷಿಕರಲ್ಲಿ ಭಾಷೆಗಳ ಬಗೆಗಿರುವ ಭಾಷಾ ಮನೋಭಾವವೇನು, ಭಾಷಾ ಸಂದರ್ಭಗಳು ಬದಲಾದಂತೆ ಹೇಗೆ ಭಾಷಾ ನಡವಳಿಕೆಗಳು ಭಿನ್ನವಾಗಿರುತ್ತವೆ ಎನ್ನುವ ಸಂಗತಿಗಳನ್ನು ಸಾಮಾಜಿಕ ಭಾಷಾಶಾಸ್ತ್ರ ಸೂಕ್ಷ್ಮವಾಗಿ ಗಮನಿಸಿ ಅಧ್ಯಯನ ನಡೆಸುವುದರ ಮೂಲಕ ಉತ್ತರಗಳನ್ನು ಕಂಡುಕೊಳ್ಳುತ್ತಿರುತ್ತದೆ. ಹೀಗೆ ಅಧ್ಯಯನ ನಡೆಸುವ ಸಂದರ್ಭಗಳಲ್ಲಿ ಹಲವು ಜ್ಞಾನಶಾಖೆಗಳ ನೆರವಿನೊಂದಿಗೆ ಅಂತರ್‌ಶಿಸ್ತೀಯವಾಗಿಯೂ ಅಧ್ಯಯನ ಮಾಡುತ್ತದೆ. ಇದರಿಂದ ಪ್ರಸ್ತುತ ವಿದ್ಯಮಾನಗಳ ಬಗೆಗಿನ ತಿಳುವಳಿಕೆಯನ್ನು ವಿಸ್ತರಿಸುವಲ್ಲಿಯೂ ಸಮಾಜೋಭಾಷಿಕ ಅಧ್ಯಯನಗಳು ಸಹಾಯಕವಾಗುತ್ತವೆ. ಸಮಾಜದಲ್ಲಿ ಭಾಷೆಯ ಪಾತ್ರ, ಸಮಾಜ ಮತ್ತು ಭಾಷೆಯ

ಸಂಬಂಧಗಳನ್ನು ಕುರಿತಂತೆ ಉಲ್‌ಫ್ರಾಮ್ ಮತ್ತು ಫಸೋಲ್ಡ್ (1978), ಟ್ರಡ್ಗಿಲ್ (1978) (1986), ಚಾಮ್‌ಬೆರ್ಸ್ ಮತ್ತು ಟ್ರಡ್ಗಿಲ್ (1980), ರೈನ್ ಮತ್ತು ಗಿಲ್ಸ್ (1982), ಹಾರ್‌ವರ್ತ್ (1985), ಉಲ್‌ಫ್ರಾಮ್ ಮತ್ತು ಕ್ರಿಸ್ಟೈನ್ (1989), ಫಸೋಲ್ಡ್ (1990), ಆರ್.ಎ.ಹಡ್ಸನ್ (1980), ಮಾಡಿರುವ ಚರ್ಚೆಗಳು ಭಾಷೆ ಮತ್ತು ಸಮಾಜವನ್ನು ಕುರಿತಂತೆ ಅಧ್ಯಯನಗಳಿಗೆ ವಿಭಿನ್ನವಾದ ದೃಷ್ಟಿಕೋನಗಳನ್ನು ಒದಗಿಸಿಕೊಡುತ್ತವೆ. 1960 ರ ದಶಕದಿಂದ ಈಚೆಗೆ ಸಾಮಾಜಿಕ ಭಾಷಾಶಾಸ್ತ್ರದ ನೆಲೆಯಲ್ಲಿ ಹಲವು ದೃಷ್ಟಿಕೋನಗಳಲ್ಲಿ ನಡೆದ ಅಧ್ಯಯನಗಳು 70-80ರ ದಶಕಗಳಲ್ಲಿನ ಸಮಾಜ ಸಿದ್ಧಾಂತಗಳ ಬೆಳವಣಿಗೆಗಳಲ್ಲಿ ಹೊಸ ದಾರಿಗಳನ್ನು ತೋರಿವೆ. ಈ ನಿಟ್ಟಿನಲ್ಲಿ ಪಶ್ಚಿಮ ರಾಷ್ಟ್ರಗಳಲ್ಲಿ ಕೆಲಸ ಮಾಡಿರುವ ಭಾಷಾ ವಿಜ್ಞಾನಿಗಳಲ್ಲಿ ಪ್ರಮುಖರೆಂದರೆ ವೆನ್‌ರಿಖ್, ಮ್ಯಾಕೆ, ಜೋಷುವ ಫಿಶ್‌ಮನ್, ಗುಂಫರ್ಜ್, ವಿಲಿಯಂ ಲೆಬೋ, ಸ್ಕೂಟ್‌ನಬ್ ಕಾಂಗಸ್, ಫರ್ಗೂಸನ್, ಡೆಲ್ ಹೈಮ್ಸ್, ಇವರುಗಳ ಸಂಶೋಧನೆ ಸಾಮಾಜಿಕ ಭಾಷಾಶಾಸ್ತ್ರಕ್ಕೆ ಮುಂದಿನ ದಾರಿಗಳನ್ನು ತೋರಿದೆ.

ಸಾಮಾಜಿಕ ಭಾಷಾಶಾಸ್ತ್ರವನ್ನು ಕುರಿತಂತೆ 1964 ರಲ್ಲಿ ಅಮೆರಿಕಾದ ಲಾಸ್ ಏಂಜಲ್ಸ್‌ನ ಕ್ಯಾಲಿಫೋರ್ನಿಯಾ ವಿಶ್ವವಿದ್ಯಾಲಯದಲ್ಲಿ ಸಮ್ಮೇಳನವೊಂದು ನಡೆಯಿತು. ಅದೇ ವರ್ಷ ಡೆಲ್‌ಹೈಮ್ಸ್‌ರವರ 'Language in Culture and Society' ಕೃತಿಯು ಪ್ರಕಟವಾಯಿತು. ಇದು ಸಾಮಾಜಿಕ ಭಾಷಾಶಾಸ್ತ್ರಕ್ಕೆ ಸಂಬಂಧಿಸಿದ ಪ್ರಾರಂಭಿಕ ಬರಹಗಳನ್ನು ಒಳಗೊಂಡಿರುವ ಕೃತಿಯಾಗಿದ್ದು ಪರಾಮರ್ಶನ ಸಾಮಾಗ್ರಿಯ ದೃಷ್ಟಿಯಿಂದ ಈ ಕೃತಿಯನ್ನು ಸಾಮಾಜಿಕ ಭಾಷಾಶಾಸ್ತ್ರದ ಮೈಲುಗಲ್ಲೆಂದು ಕರೆಯಲಾಗಿದೆ. ಈ ಕೃತಿಯಲ್ಲಿ ಭಾಷೆ ಮತ್ತು ಸಮಾಜ ಹೇಗೆ ಪರಸ್ಪರ ಪೂರಕವಾಗಿವೆ ಎನ್ನುವುದರ ಬಗೆಗೆ ಸುದೀರ್ಘವಾಗಿ ಚರ್ಚಿಸಿದ್ದಾರೆ. ಅಲ್ಲದೆ ಮಾನವಶಾಸ್ತ್ರದ ಹಿನ್ನೆಲೆಯಲ್ಲಿ ಭಾಷೆ ಮತ್ತು ಸಂಸ್ಕೃತಿಯ ವಿಶ್ಲೇಷಣೆಯನ್ನು ಮಾಡಲಾಗಿದೆ. ಸಾಮಾಜಿಕ ಭಾಷಾಶಾಸ್ತ್ರದ ನೆಲೆಯಲ್ಲಿ ನಡೆದ ವಿಲಿಯಂ ಲೆಬೋವ್ ಅವರ 'The Social Stratification of English in New York city (1964) ಅಧ್ಯಯನವು ಹೆಚ್ಚು ವ್ಯಾಪಕವಾದ ಚರ್ಚೆ ಹಾಗೂ ಪ್ರಾಯೋಗಿಕ ಪರಿಶೀಲನೆಗೆ ಒಳಗಾಗಿದೆ.

ಸಾಮಾಜಿಕ ಭಾಷಾಶಾಸ್ತ್ರ ಎಂದರೇನು ಎನ್ನುವ ಪ್ರಶ್ನೆಗೆ ಒಂದೇ ವಾಕ್ಯದಲ್ಲಿ ವ್ಯಾಖ್ಯಾನಿಸಬಹುದಾದರೂ ಹಲವು ಸಾಮಾಜಿಕ ಭಾಷಾಶಾಸ್ತ್ರಜ್ಞರ ವ್ಯಾಖ್ಯೆಗಳು ಇಂತಿವೆ. "ಭಾಷಾ ವಿಜ್ಞಾನದ ಒಂದು ಶಾಖೆ ಭಾಷೆಯಲ್ಲಿ ಹುದುಗಿರುವ ಸಾಮಾಜಿಕ ಅಂಶಗಳ ವಿವರಗಳನ್ನು ಒದಗಿಸುತ್ತದೆಯೋ ಅದೇ ಸಾಮಾಜಿಕ ಭಾಷಾಶಾಸ್ತ್ರ" ಎಂದು ಹಾ.ಮಾ.ನಾಯಕರು ಅಭಿಪ್ರಾಯಪಟ್ಟಿದ್ದರೆ, "ಭಾಷಾ ವಿಜ್ಞಾನದ ಯಾವ ಭಾಗ ಭಾಷೆಯನ್ನು ಸಾಮಾಜಿಕ ಹಾಗೂ ಸಾಂಸ್ಕೃತಿಕ ಸಂಬಂಧಿಯಾಗಿ ನೋಡುತ್ತದೆಯೋ ಅದೇ ಸಾಮಾಜಿಕ ಭಾಷಾಶಾಸ್ತ್ರ" ಎಂದು ಪೀಟರ್ ಟ್ರಡ್ಗಿಲ್ ವ್ಯಾಖ್ಯಾನಿಸಿದ್ದಾರೆ. "ಸಮಾಜದೊಂದಿಗಿನ ಭಾಷೆಯ ಸಂಬಂಧದ ಅಧ್ಯಯನವೇ ಸಾಮಾಜಿಕ ಭಾಷಾಶಾಸ್ತ್ರವೆಂದಿದ್ದಾರೆ

ಹಡ್ಸನ್ (1980) ರವರು. ವಿಲಿಯಂ ಬ್ರೈಟ್ (1966) ರವರು "ಭಾಷೆಗೂ ಮತ್ತು ಸಾಮಾಜಿಕ ರಚನೆಗೂ ಇರುವ ವ್ಯವಸ್ಥಿತವಾದ ಸಂಬಂಧವನ್ನು ತೋರಿಸುವುದೇ ಸಾಮಾಜಿಕ ಭಾಷಾಶಾಸ್ತ್ರ" ಎಂದಿದ್ದಾರೆ. ಫ್ರಾಕ್ಲಿಂಗ್ ಸೌತ್‌ವರ್ತ್ (1975) ಅವರು "ಸಂಕುಚಿತಾರ್ಥದಲ್ಲಿ ಸಾಮಾಜಿಕ ಭಾಷಾಶಾಸ್ತ್ರವನ್ನು ನಿರ್ವಚಿಸುವುದಾದರೆ ಅದು ಭಾಷಾ ವ್ಯವಸ್ಥೆಯ ಸ್ವರೂಪದಲ್ಲಾಗುವ ಬದಲಾವಣೆಗಳ ಕುರುಹುಗಳ ಕಡೆಗೂ, ಭಾಷಿಕ ವ್ಯತ್ಯಾಸಗಳ ಪ್ರಕ್ರಿಯೆಗಳ ಕಡೆಗೂ ವಿಶೇಷ ಗಮನಹರಿಸುತ್ತದೆ. ವಿಶಾಲಾರ್ಥದಲ್ಲಿ ಸಾಮಾಜಿಕ ಭಾಷಾಶಾಸ್ತ್ರವನ್ನು ನಿರ್ವಹಿಸುವುದಾದಲ್ಲಿ ಅದು ಸಾಮಾಜಿಕ ಅಥವಾ ಸಾಂಸ್ಕೃತಿಕ ಭಿತ್ತಿಯೊಳಗಡೆ ನಡೆಸುವ ಭಾಷೆಯ ಕುರಿತ ಅಧ್ಯಯನವಾಗುತ್ತದೆ. ಒಂದರ್ಥದಲ್ಲಿ ಸಾಮಾಜಿಕ ಭಾಷಾವಿಜ್ಞಾನವು ಭಾಷೆಯ ಸಮಾಜಶಾಸ್ತ್ರ, ಮತ್ತು ಡೆಲ್ ಹೈಮ್ಸ್ ಹೇಳುವಂತೆ ಸಂವಹನ ಮಾನವಕಾಲಶಾಸ್ತ್ರ" ಹೀಗೆ ಎರಡು ಬಗೆಯ ಅಧ್ಯಯನಗಳನ್ನು ಒಳಗೊಂಡಿರುತ್ತದೆ.

ದಕ್ಷಿಣ ಭಾರತಕ್ಕೆ ಸಂಬಂಧಿಸಿದಂತೆ ಸಮಾಜೋಭಾಷಿಕ ಅಧ್ಯಯನವು ನಡೆದಿದೆಯಾದರೂ ಕನ್ನಡದಲ್ಲಿ ಈ ಅಧ್ಯಯನ ಶಿಸ್ತಿನ ಹಿನ್ನೆಲೆಯಲ್ಲಿ ನಡೆದಿರುವ ಅಧ್ಯಯನಗಳು ಬೆರಳೆಣಿಕೆಯಷ್ಟು ಮಾತ್ರ. ದಕ್ಷಿಣ ಏಷ್ಯಾವು ಭಾಷಾ ವ್ಯತ್ಯಾಸಗಳ ಅಧ್ಯಯನಕ್ಕೆ ಸಂಬಂಧಿಸಿದಂತೆ ಮಹತ್ವದ ಮಾಹಿತಿಯನ್ನು ಒದಗಿಸಿಕೊಟ್ಟಿದೆ. ಅದೇ ರೀತಿ ಸಾಮಾಜಿಕ ಭಾಷಾಶಾಸ್ತ್ರ ಕ್ಷೇತ್ರಕ್ಕೂ ದಕ್ಷಿಣ ಏಷ್ಯಾದ ಭಾಷಾ ಅಧ್ಯಯನಗಳಿಂದಲೇ ಪ್ರಾರಂಭಿಕ ಪ್ರೇರಣೆ ದೊರೆಯಿತೆನ್ನಬಹುದು. 'ಲಿಂಗ್ವಿಸ್ಟಿಕ್ ಡೈವರ್ಸಿಟಿ ಇನ್ ಸೌತ್ ಏಷಿಯಾ' ಎಂಬ ಸಂಪುಟವು ದ್ರಾವಿಡ ಭಾಷೆಗಳಾದ ತಮಿಳು ಮತ್ತು ಕನ್ನಡವೂ ಸೇರಿದಂತೆ ಪ್ರಾರಂಭಿಕ ಘಟ್ಟದ ಅಸಂಖ್ಯ ಅಧ್ಯಯನಗಳನ್ನು ಒಳಗೊಂಡಿದೆ. ಭಾರತದಲ್ಲಿ ಸರ್ ಜಾರ್ಜ್ ಗ್ರಿಯರ್ಸನ್ ಸ್ಮರಣೀಯ ಕೃತಿಯಾದ 'ಲಿಂಗ್ವಿಸ್ಟಿಕ್ ಸರ್ವೇ ಆಫ್ ಇಂಡಿಯಾ' (1906) ದ ಮೂಲಕ ಉಪಭಾಷಾ ಅಧ್ಯಯನವು ಪ್ರಾರಂಭವಾಯಿತೆನ್ನಬಹುದು. ಆತನು ಭಾರತದ ಹಲವು ಪ್ರಮುಖ ಭಾಷೆಗಳಲ್ಲಿನ ಉಪಭಾಷೆಗಳ ಮಾದರಿಗಳನ್ನೂ ವ್ಯಾಕರಣಾತ್ಮಕ ನಕ್ಷೆಗಳನ್ನೂ ಈ ಕೃತಿಯಲ್ಲಿ ನೀಡಿದ್ದಾನೆ. ದಕ್ಷಿಣ ಭಾರತದಲ್ಲಿ ಸಾಮಾಜಿಕ ಉಪಭಾಷೆಗಳಿಗೆ ಸಂಬಂಧಿಸಿದಂತೆ ನಡೆದಿರುವ ಬಹುಪಾಲು ಅಧ್ಯಯನಗಳು ಬ್ರಾಹ್ಮಣ ಮತ್ತು ಬ್ರಾಹ್ಮಣೇತರ ಭಾಷೆಗಳ ಧ್ವನಿಮಾ, ಆಕೃತಿಮಾ ಮತ್ತು ಶಬ್ದಕೋಶಗಳಿರುವ ತೀಕ್ಷ್ಣ ವ್ಯತ್ಯಾಸಗಳನ್ನು ತೋರಿಸುತ್ತದೆ.

ಭಾರತದಲ್ಲಿ ಸಾಮಾಜಿಕ ಭಾಷಾಶಾಸ್ತ್ರದ ನೆಲೆಯಲ್ಲಿ ದ್ರಾವಿಡ ಭಾಷೆಗಳಿಗೆ ಸಂಬಂಧಿಸಿದಂತೆ ತಮಿಳುನಾಡು ವಿಶ್ವವಿದ್ಯಾಲಯದ ಭಾಷಾಶಾಸ್ತ್ರ ವಿಭಾಗಗಳು, ಕೇರಳ ವಿಶ್ವವಿದ್ಯಾಲಯದ ಭಾಷಾಶಾಸ್ತ್ರ ವಿಭಾಗ, ಆಂಧ್ರಪ್ರದೇಶ ವಿಶ್ವವಿದ್ಯಾಲಯದ ಭಾಷಾಶಾಸ್ತ್ರ ವಿಭಾಗಗಳು, ಕರ್ನಾಟಕ ವಿಶ್ವವಿದ್ಯಾನಿಲಯ, ಮೈಸೂರಿನ ಭಾರತೀಯ ಭಾಷೆಗಳ ಕೇಂದ್ರ ಸಂಸ್ಥೆಯಡಿಯಲ್ಲಿ ನಡೆದಿರುವ ಅಧ್ಯಯನಗಳು ಮರಾಠಿ, ಉರ್ದು ಮತ್ತು ಕನ್ನಡಕ್ಕೆ ಸಂಬಂಧಿಸಿದಂತೆ ಪುಣೆಯ ಡೆಕ್ಕನ್ ಕಾಲೇಜು ಮಾಡಿರುವ ಕೆಲವು ಅಧ್ಯಯನಗಳನ್ನು ಹೆಸರಿಸಬಹುದಾಗಿದೆ. ಈ ನಿಟ್ಟಿನಲ್ಲಿ ಗುಂಫರ್ಜ್, ವಿಲ್‌ಸನ್,

ಮೆಕ್‌ಕೋರ್ಮಾರ್ಕ್, ಬ್ರೈಟ್, ರಾಮಾನುಜನ್, ಡಿ.ಎನ್.ಶಂಕರಭಟ್ಟ, ಯು.ಪಿ.ಉಪಾಧ್ಯಾಯ, ಎಂ.ಎಸ್.ಪಿಳ್ಳೆ, ಪಿ.ಬಿ.ಪಂಡಿತ್, ಎಂ.ಎಲ್.ಆಪ್ಟೆ, ಉಣ್ಣಿ ಮುಂತಾದವರು ಸಾಮಾಜಿಕ ಭಾಷಾಶಾಸ್ತ್ರವನ್ನು ಭಾರತದಲ್ಲಿ ಪ್ರಾರಂಭಿಕ ಹಂತದ ಅಧ್ಯಯನಗಳನ್ನು ಮಾಡಿ ಮುಂದಿನ ಸಾಮಾಜಿಕ ಭಾಷಾಶಾಸ್ತ್ರದ ಅಧ್ಯಯನಗಳಿಗೆ ದಾರಿ ತೋರಿದ್ದಾರೆ. 1972ರಲ್ಲಿ ಭಾರತೀಯ ಭಾಷೆಗಳ ಕೇಂದ್ರ ಸಂಸ್ಥೆಯು ಆಯೋಜಿಸಿದ್ದ ಸಾಮಾಜಿಕ ಭಾಷಾಶಾಸ್ತ್ರದ ಸಂಶೋಧನ ಕಮ್ಮಟ ಮತ್ತು ಚರ್ಚೆಗಳ ಸಂದರ್ಭದಲ್ಲಿ ಮಂಡಿತವಾದ ಹಲವು ವಿಚಾರಗಳು ಸಂಶೋಧನೆಗೆ ಮುಂದಿನ ದಾರಿಗಳನ್ನು ತೋರಿವೆ. ಅಲ್ಲದೆ ಇಂಡಿಯನ್ ಲಿಂಗ್ವಿಸ್ಟಿಕ್ಸ್ DAL - 1971, IJDL - 1972, ISDL - 1977 ಭಾಷಿಕ ಪತ್ರಿಕೆಗಳು, ಭಾರತೀಯ ಭಾಷೆಗಳ ಕೇಂದ್ರ ಸಂಸ್ಥೆಯ ಯೋಜನೆಯಡಿಯಲ್ಲಿ ಪ್ರಕಟವಾಗಿರುವ ಹಲವು ಲೇಖನಗಳು, ಪುಸ್ತಕಗಳು, ಅಲ್ಲದೆ ಕನ್ನಡ ಭಾಷೆಯ ಸಂದರ್ಭದಲ್ಲಿ ಪ್ರಕಟಗೊಳ್ಳುತ್ತಿರುವ 'ನಮ್ಮ ಕನ್ನಡ' ಪತ್ರಿಕೆ ಸಾಮಾಜಿಕ ಭಾಷಾಶಾಸ್ತ್ರದ ಸಂಶೋಧನೆಗೆ ದಾರಿದೀಪಗಳಾಗಿವೆ.

ಭಾರತದಲ್ಲಿ ಅನೇಕ ಜಾತಿ - ಉಪಜಾತಿಗಳು, ಧರ್ಮಗಳು, ಅನೇಕ ಭಾಷೆ ಭಾಷಾಪ್ರಭೇದಗಳು ಇರುವುದರಿಂದ ಪ್ರತಿಯೊಂದು ಜಾತಿ - ಉಪಜಾತಿ, ಧರ್ಮಗಳಲ್ಲಿನ ಭಾಷಿಕರ ಆಚಾರ - ವಿಚಾರ, ಸಂಪ್ರದಾಯ, ನಂಬಿಕೆಗಳು, ಸಾಮಾಜಿಕ ಪದ್ಧತಿಗಳು ಎಲ್ಲವೂ ಸಹ ಭಾಷೆಯೊಂದರ ಕಲಿಕೆ - ಬಳಕೆಯ ನೆಲೆಗಳ ಮೇಲೆ ಪ್ರಭಾವ ಬೀರುತ್ತಿರುತ್ತದೆ. ಇದರಿಂದಾಗಿ ಭಾರತದಲ್ಲಿ ಅನೇಕ ಭಾಷೆ - ಭಾಷಾ ಪ್ರಭೇದಗಳ ಜೊತೆಗೆ ಅಸಂಖ್ಯಾತ ವ್ಯಕ್ತಿ ಭಾಷೆಗಳು ಇವೆ. ಇವು ಪ್ರತಿಯೊಂದು ವ್ಯಕ್ತಿಯಿಂದ - ವ್ಯಕ್ತಿಗೆ ಕಲಿಕೆ - ಬಳಕೆಯ ನೆಲೆಯಲ್ಲಿ ಭಿನ್ನವಾಗಿದ್ದು ಭಾಷೆಯ ರಚನೆಯ ಮೇಲೆ ಅನೇಕ ರೀತಿಯ ಪ್ರಭಾವವನ್ನು ಉಂಟುಮಾಡುತ್ತಿರುತ್ತವೆ. ಜೊತೆಗೆ ಅನೇಕ ಭಾಷೆ ಭಾಷಾ ಪ್ರಭೇದಗಳು ಭಾರತದಲ್ಲಿರುವುದರಿಂದ ಭಾಷಿಕರು ಬದುಕುವ ಸಾಮಾಜಿಕ ಪರಿಸರದಲ್ಲಿ ಹಲವು ಭಾಷೆಗಳನ್ನು ಸಹಜವಾಗಿ ಕಲಿತು ಬಳಸುತ್ತಿರುತ್ತಾರೆ. ಇಂತಹ ಸಂದರ್ಭಗಳಿಂದಾಗಿ ಒಂದಕ್ಕಿಂತ ಹೆಚ್ಚು ಭಾಷೆಗಳನ್ನು ಕಲಿತು ಬಳಸುವುದರಿಂದ ದ್ವಿಭಾಷಿಕ - ಬಹುಭಾಷಿಕ ಪರಿಸರಗಳು ನಿರ್ಮಾಣವಾಗಿರುವುದಲ್ಲದೆ ದ್ವಿಭಾಷಿಕ - ಬಹುಭಾಷಿಕ ವ್ಯಕ್ತಿಗಳು ಬಳಸುವ ಭಾಷೆಗಳಿಂದಾಗಿ ದ್ವಿ-ಬಹುಭಾಷಿಕ ಸಂದರ್ಭಗಳಲ್ಲಿ ಅನೇಕ ಭಾಷಿಕ ಪ್ರಕ್ರಿಯೆಗಳು, ಭಾಷಾ ಸನ್ನಿವೇಶಗಳು ಉಂಟಾಗಿರುವುದರಿಂದ ಇದು ವ್ಯಕ್ತಿಗತ ನೆಲೆಯಲ್ಲಿ ಮತ್ತು ಸಾಮುದಾಯಿಕ ನೆಲೆಯಲ್ಲಿ ವಿಭಿನ್ನವಾದ ಪರಿಣಾಮಗಳನ್ನು ಉಂಟುಮಾಡುತ್ತಿರುತ್ತದೆ. ಅಲ್ಲದೆ ವ್ಯಕ್ತಿಯ ಮಾನಸಿಕ, ಬೌದ್ಧಿಕ ಬೆಳವಣಿಗೆಯಲ್ಲಿ, ದೇಶದ ಅಭಿವೃದ್ಧಿಯಲ್ಲಿ, ಶೈಕ್ಷಣಿಕ ಕ್ಷೇತ್ರದಲ್ಲಿ ಆಡಳಿತದಲ್ಲಿ ಇತರೆಡೆಗಳಲ್ಲಿ ಇದರ ಪರಿಣಾಮ ಹಲವು ರೀತಿಯಲ್ಲಿ ಭಿನ್ನವಾಗಿರುವುದರಿಂದ ಭಾರತದಲ್ಲಿ ದ್ವಿ - ಬಹುಭಾಷಿಕ ಸಂದರ್ಭಗಳ ಅಧ್ಯಯನ ಅನಿವಾರ್ಯ, ಅಗತ್ಯವಿದೆ. ಎಲ್ಲಕ್ಕಿಂತ ಮುಖ್ಯವಾಗಿ ಭಾಷೆಯನ್ನು ಕಲಿಯುವುದು ಮತ್ತು ಬಳಸುವುದು ಸಮಾಜದಲ್ಲೇ ಆದ್ದರಿಂದ ಸಮಾಜದಲ್ಲಿನ ಯಾವುದೇ ಭಾಷಿಕರು ಇತರ ಭಾಷಿಕರೊಂದಿಗೆ ಸಂವಹಿಸುವ ಸಂದರ್ಭಗಳು ಎಲ್ಲಾ ಸಮಯದಲ್ಲೂ ಒಂದೇ ರೀತಿ ಇರುವುದಿಲ್ಲ. ಸಂದರ್ಭಕ್ಕೆ

ತಕ್ಕಂತೆ ಭಾಷೆ ಬಳಕೆಯಾಗುತ್ತಿರುತ್ತದೆಯಲ್ಲದೆ ಭಾಷಿಕರ ಭಾಷಾ ಆಯ್ಕೆ ಹಲವು ಅಂಶಗಳನ್ನು ಒಳಗೊಂಡಿರುತ್ತದೆ. ಆದ್ದರಿಂದ ಸಮಾಜ ಮತ್ತು ಭಾಷೆಯ ಬಗೆಗಿನ ಅಧ್ಯಯನದಿಂದಾಗಿ ಒಂದು ಭಾಷಾ ಸಮುದಾಯದ ಬಗೆಗೆ ಹಲವು ರೀತಿಯ ಸಂಗತಿಗಳ ಸ್ವರೂಪಗಳನ್ನು ತಿಳಿಯಬಹುದಾಗಿದೆ. ಇದು ಕೇವಲ ಒಂದು ಸಮಾಜ, ಒಂದು ಭಾಷೆಯ ಬಗೆಗಿನ ಅಧ್ಯಯನವಾಗಿರದೆ ಸಮಾಜದಲ್ಲಿನ ಭಾಷಿಕರು ಇತರ ಭಾಷಿಕರೊಂದಿಗೆ ಅಥವಾ ಅನ್ಯಭಾಷಿಕರೊಂದಿಗೆ ಸಂವಹಿಸುವ ಸಂದರ್ಭಗಳಲ್ಲಿನ ಭಾಷಾ ಬಳಕೆಯನ್ನು ಸಮಾಜೋಭಾಷಿಕ ಅಂಶಗಳಿಂದ ನೋಡಿದಾಗ ಸಮಾಜ ಮತ್ತು ಭಾಷೆಯ ಬಗೆಗಿನ ಸಂಬಂಧದಲ್ಲಿ ಹಲವು ಸಂಗತಿಗಳಿರುವುದು ತಿಳಿಯುತ್ತದೆ. ಇದರಿಂದ ದ್ವಿ - ಬಹುಭಾಷಿಕ ರಾಜ್ಯಗಳಿಗೆ, ರಾಷ್ಟ್ರಗಳಿಗೆ ಶಿಕ್ಷಣ ಯೋಜನೆಗಳನ್ನು ರೂಪಿಸುವ ಸಂದರ್ಭದಲ್ಲಿ ಸಮಾಜೋಭಾಷಿಕ ನೆಲೆಯಲ್ಲಾಗುವ ಅಧ್ಯಯನಗಳ ಉಪಯುಕ್ತತೆ ಇದ್ದೇ ಇದೆ. ಶಿಕ್ಷಣದಲ್ಲಿ ಯಾವ ಯಾವ ಪ್ರದೇಶಗಳಲ್ಲಿ ಹೇಗೆ ಭಾಷೆಯನ್ನು ಪಠ್ಯಗಳಿಗೆ ಅಳವಡಿಸಬೇಕು, ಯಾವ ಮಾಧ್ಯಮದ ಶಾಲೆಗಳ ಅಗತ್ಯ ದ್ವಿ - ಬಹುಭಾಷಾ ಪ್ರದೇಶಗಳಲ್ಲಿ ಹೆಚ್ಚಿನ ಅವಶ್ಯವಿದೆ. ಶಿಕ್ಷಕರ ನೇಮಕಾತಿಯಲ್ಲಿ ಒಂದಕ್ಕಿಂತ ಹೆಚ್ಚು ಭಾಷೆಯನ್ನು ಬಲ್ಲ ಶಿಕ್ಷಕರನ್ನು ನೇಮಿಸುವ ಅವಶ್ಯವಿದೆಯೇ ಎಂಬ ಹಲವು ಸಂಗತಿಗಳಿಗೆ ಯೋಜನೆಗಳನ್ನು ರೂಪಿಸುವಾಗ ಸಮಾಜೋಭಾಷಿಕ ನೆಲೆಯಲ್ಲಿ ನಡೆಯುವ ಅಧ್ಯಯನದ ಅವಶ್ಯಕತೆ ಇದ್ದೇ ಇದೆ. ಜೊತೆಗೆ ರಾಜ್ಯ ರಾಜ್ಯಗಳಲ್ಲಿ, ರಾಷ್ಟ್ರದಲ್ಲಿ ಭಾಷಿಕ ಯೋಜನೆಗಳನ್ನು ರೂಪಿಸುವ ಸಂದರ್ಭದಲ್ಲೂ ಇದರ ಅಗತ್ಯತೆ ಇದೆ. ಭಾರತದಂತಹ ರಾಷ್ಟ್ರಕ್ಕೆ ಭಾಷಿಕ ಯೋಜನೆಯನ್ನು ರೂಪಿಸುವುದು ಒಂದು ದೊಡ್ಡ ಸವಾಲು. ಏಕೆಂದರೆ ಅನೇಕ ಭಾಷೆಗಳನ್ನಾಡುವ ಭಾಷಿಕರು ಬಹುಸಂಖ್ಯೆಯಲ್ಲಿರುವಾಗ ಯಾವ ಯಾವ ಭಾಷೆಗಳನ್ನು ಎಷ್ಟು ಎಲ್ಲಿ ಹೇಗೆ ಯೋಜಿಸಬೇಕು ಎಂಬುದು ಸವಾಲಾಗಿದೆ. ಆದ್ದರಿಂದ ಭಾರತದಲ್ಲಿ ಸಾಮಾಜಿಕ ಭಾಷಾಶಾಸ್ತ್ರದ ನೆಲೆಯಲ್ಲಿ ಭಾಷಾಧ್ಯಯನಗಳನ್ನು ಕೈಗೊಳ್ಳುವ ಅಗತ್ಯವಿದೆ. ಜೊತೆಗೆ ಭಾರತ ದೇಶವೇ ಸಾಮಾಜಿಕ ಭಾಷಾಶಾಸ್ತ್ರಕ್ಕೊಂದು ಶ್ರೀಮಂತ ಪ್ರಯೋಗಶಾಲೆ. ಈ ದೃಷ್ಟಿಯಿಂದಲೇ ಎಂ.ಬಿ. ಎಮಿನೋ (1956) ಅವರು ಸಮಗ್ರ ಭಾರತವನ್ನು ಒಂದು ಭಾಷಾ ಕ್ಷೇತ್ರವೆಂದು ಕರೆದಿರುವರು.

ಭಾರತದಲ್ಲಿ ಸಾಮಾಜಿಕ ಭಾಷಾಶಾಸ್ತ್ರದ ಅಧ್ಯಯನಕ್ಕೆ ವಿಪುಲವಾದ ಸಾಮಗ್ರಿಗಳನ್ನು ಒಳಗೊಂಡಿದ್ದರೂ ಸಹ ಸಮಾಜೋಭಾಷಿಕ ಅಧ್ಯಯನ ವಿಪುಲವಾಗಿ ಬೆಳೆದಿಲ್ಲ. ಇದಕ್ಕೆ ಹಲವು ಭಿನ್ನವಾದ ಕಾರಣಗಳಿರಬಹುದು. ಅದನ್ನು ಇಲ್ಲಿ ವಿವರಿಸಲು ಹೆಚ್ಚಿನ ಅಧ್ಯಯನದ ಅಗತ್ಯವಿದೆ. ಆದ್ದರಿಂದ ಇಂತಹುದೆ ಕಾರಣಗಳಿರಬಹುದೆಂದು ಹೇಳುವುದು ಕಷ್ಟ. ಯಮುನ ಕಾಛ್ರು (1995:14) ರವರು ಹೇಳುವಂತೆ ಭಾರತದಲ್ಲಿನ ಭಾಷಾಧ್ಯಯನಗಳಲ್ಲಿ ಭಾಷೆಯನ್ನು ಒಂದು ವಸ್ತುವನ್ನಾಗಿ ನೋಡುತ್ತಿದ್ದಾರೆಯೇ ವಿನಹ ಸಮಾಜದಲ್ಲಿ ಭಾಷೆಯ ಬಳಕೆಯ ನೆಲೆಗಳನ್ನು ಕುರಿತಂತೆ ಅಧ್ಯಯನಗಳಾಗುತ್ತಿಲ್ಲವೆಂದಿದ್ದಾರೆ. ಸಮಾಜದಲ್ಲಿ ಭಾಷೆಯ ಬಳಕೆಯನ್ನು ಕುರಿತಂತೆ ಮಾಡುವ ಅಧ್ಯಯನ ಸಾಮಾಜಿಕ ಭಾಷಾಶಾಸ್ತ್ರಕ್ಕೆ ಸಂಬಂಧಿಸಿದ್ದಾಗಿದೆ. ಆದರೆ ಭಾರತದಲ್ಲಿ ಬಹುಪಾಲು ಭಾಷಾಧ್ಯಯನಗಳು ವರ್ಣನಾತ್ಮಕ

ನೆಲೆಯಲ್ಲೇ ಆಗಿರುವುದರಿಂದಲೂ, ವರ್ಣನಾತ್ಮಕ ಭಾಷಾಧ್ಯಯನದ ಸಿದ್ಧಮಾದರಿಗಳು ಇರುವುದರಿಂದಲೂ ವರ್ಣನಾತ್ಮಕ ನೆಲೆಯಲ್ಲಿ ಆಗಿರುವಷ್ಟು ಭಾಷಾಧ್ಯಯನಗಳು ಸಾಮಾಜಿಕ ಶಾಸ್ತ್ರದ ನೆಲೆಯಲ್ಲಿ ನಡೆದಿಲ್ಲ. ಆದಕಾರಣ ವರ್ಣನಾತ್ಮಕ ಭಾಷಾಶಾಸ್ತ್ರ ಹೆಮ್ಮರವಾಗಿ ಬೆಳೆದಿದ್ದರೆ, ಸಾಮಾಜಿಕ ಭಾಷಾಶಾಸ್ತ್ರ ಇನ್ನೂ ಕೂಸು ಎಂದರೆ ತಪ್ಪಾಗಲಾರದು. ಜೊತೆಗೆ ಸಾಮಾಜಿಕ ಭಾಷಾಶಾಸ್ತ್ರದ ಅಧ್ಯಯನಗಳಿಗೆ ತಕ್ಕಂತಹ ಅಧ್ಯಯನ ವಿಧಿವಿಧಾನಗಳಾಗಲಿ, ಸೈದ್ಧಾಂತಿಕ ಚೌಕಟ್ಟಾಗಲಿ, ಕ್ಷೇತ್ರಕಾರ್ಯದ ಹೊಸರೀತಿಯ ತಂತ್ರಗಳಾಗಲಿ ನಮ್ಮ ಸಂದರ್ಭದಲ್ಲಿ ರೂಪುಗೊಳ್ಳದೆ ಇರುವುದೂ ಸಹ ಕಾರಣವಾಗಿರಬಹುದು. ಇದಕ್ಕಿರುವ ಕೆಲವು ಕಾರಣಗಳನ್ನು ಕುರಿತಂತೆ ಆಪ್ಟೆ ಮತ್ತು ಮೆಹರೋತ್ರರವರು (1998) ಲೇಖನವೊಂದರಲ್ಲಿ ಭಾರತದಲ್ಲಿ ಸಾಮಾಜಿಕ ಭಾಷಾಶಾಸ್ತ್ರ ಒಂದು ಶಿಸ್ತಾಗಿ ರೂಪುಗೊಳ್ಳದೆ ಇರುವುದಕ್ಕೆ ಇರುವ ಕಾರಣಗಳನ್ನು ಕುರಿತು ಕೆಲವು ವಿಚಾರಗಳನ್ನು ಚರ್ಚಿಸಿದ್ದಾರೆ. ಆಪ್ಟೆ (1998:51) ರವರು ಹೇಳುವಂತೆ "ಭಾರತೀಯ ಬಹುಭಾಷಿಕತೆಯಲ್ಲಿ ಭಾರತೀಯವಾದ್ದನ್ನು ಪ್ರಶ್ನಿಸುತ್ತಾರೆ. ಭಾರತ ಸಂಕೀರ್ಣವಾದ ಸಂದರ್ಭಗಳನ್ನು ಒಳಗೊಂಡಿದೆ. ಭಾರತದ ಚರಿತ್ರೆಯಲ್ಲಿ ಉಪಖಂಡದ ವಿಭಜನೆ ಕೋಮುಗಲಭೆಗಳಿಗೆ ಕಾರಣವಾಗಿ ಭಾಷೆಯ ವಲಯವನ್ನು ಪ್ರವೇಶಿಸಿ ಪ್ರಭಾವಿಸುತ್ತಿದೆ. ರಾಷ್ಟ್ರಪ್ರಭುತ್ವ ಹೊಸತಾದ ರಾಜಕೀಯ, ಸಾಮಾಜಿಕ ವ್ಯವಸ್ಥೆಗಳನ್ನು ಹುಟ್ಟುಹಾಕಿದಾಗ ಹೊಸ ಸಮಸ್ಯೆಗಳಿಗೆ ಕಾರಣೀಭೂತವಾಗಿ, ಸಾಮಾಜಿಕ ಚಾರಿತ್ರಿಕ ದೃಷ್ಟಿಕೋನ ಸಮಾಜೋಭಾಷಿಕ ಅಧ್ಯಯನದಲ್ಲಿ ದೃಷ್ಟಿಹರಿಸಿಲ್ಲ. ಹೊಸರೀತಿಯ ಸಮಸ್ಯೆಗಳು ಅದರ ಉಪಕರಣಗಳ ಅಧ್ಯಯನಗಳ ಮುಖಾಂತರ 'ಭಾರತೀಯತೆ' ಏನು ಎಂದು ಗೊತ್ತಾಗುವುದು. ಇದಕ್ಕೆ ಬೇಕಾದಂತಹ ಸೈದ್ಧಾಂತಿಕ ಚೌಕಟ್ಟು, ಸಂಶೋಧನ ವಿನ್ಯಾಸಗಳನ್ನು ಬೆಳೆಸುವ ಕ್ಷೇತ್ರದಲ್ಲಿ ಕೆಲಸ ಆಗಿಲ್ಲ" ಎಂದಿದ್ದಾರೆ. ಮೆಹರೋತ್ರ (1998:53-54) ರವರು "ಭಾರತದಲ್ಲಿರುವ ಸಮಾಜೋಭಾಷಿಕ ಅಧ್ಯಯನ ತಮ್ಮ ಗುರುತಿನ ಹುಡುಕಾಟದಲ್ಲಿದೆ. ಅಧ್ಯಯನ ಮಾದರಿಗಳನ್ನು ಸಿದ್ಧಾಂತಗಳನ್ನು ಇಲ್ಲಿನ ಅಧ್ಯಯನಗಳು ರೂಪಿಸಿಕೊಂಡಿಲ್ಲ. ಇದಕ್ಕೆ ಕಾರಣಗಳೇನಿರಬಹುದೆಂಬ ಪ್ರಶ್ನೆಗೆ ಊಹೆಗಳನ್ನು ಮಾಡಿಕೊಂಡು ಲಕ್ಷಣಗಳನ್ನು ಗುರುತಿಸಿದ್ದಾರೆ. ನಿರ್ದಿಷ್ಟವಾದ ವಿಶೇಷವಾದ ಅಧ್ಯಯನಗಳು ಇಡೀ ಪ್ರಕ್ರಿಯೆಯ ಒಟ್ಟು ರೂಪವನ್ನು ಕಡೆಗಣಿಸಿದೆ. ಸಮಾಜೋಭಾಷಿಕ ಸಿದ್ಧಾಂತಗಳ ವಿಧಿ - ವಿಧಾನಗಳು ಗೊತ್ತಿರಬೇಕು. ಬೇರೆ ದೇಶದಲ್ಲೂ ಈ ಸಮಸ್ಯೆ ಇದೆ. ಆದರೆ ಇಲ್ಲಿ ಯಾವುದೇ ಅಂಕಿ - ಅಂಶಗಳನ್ನು ಸಂಗ್ರಹಿಸದೆ ಸಾಧಾರಣಗೊಳಿಸುವುದು ಅಧ್ಯಯನದ ಚೌಕಟ್ಟಿಲ್ಲದೆ ಸ್ಫೂರ್ತಿಗೊಳಗಾಗಿ ಸಾಮಾನ್ಯಗೊಳಿಸುವುದು. ಸ್ಥಿತಿಯ ಸ್ವರೂಪ, ಬಾಹುಳ್ಯತೆ, ಸಂಕೀರ್ಣ ಸ್ವರೂಪಗಳು ಅರಿತಿಲ್ಲದಿರುವುದು, ವೈವಿಧ್ಯತೆಗಳ ಪ್ರತಿರೂಪ ಅವುಗಳ ಜೊತೆಗೆ ಇರುವಂಥದ್ದು ಸಮಾಜೋಭಾಷಿಕ ಪರಿಕಲ್ಪನೆಗಳನ್ನು ರೂಪಿಸಿಕೊಳ್ಳದೆ ಇರುವುದು" ಎಂಬ ವಿಚಾರಗಳನ್ನು ಚರ್ಚಿಸಿದ್ದಾರೆ.

ಇಂದು ಸಾಮಾಜಿಕ ಭಾಷಾಶಾಸ್ತ್ರ ಆನ್ವಯಿಕ ಭಾಷಾಶಾಸ್ತ್ರದ ಒಂದು ಪ್ರಮುಖ ಅಂಗ. ಭಾಷೆಯನ್ನು ಆಧುನೀಕರಣ ಸೌಲಭ್ಯಗಳಿಗೆ ಅಳವಡಿಸಿಕೊಳ್ಳಲು ಯತ್ನಿಸಿದಂತೆಲ್ಲ ಭಾಷಾಶಾಸ್ತ್ರಜ್ಞರಿಗೆ ಫಲಾಫಲ ನಿರ್ಧಾರಕ್ಕೆ

ಸಾಮಾಜಿಕ ಭಾಷಾಶಾಸ್ತ್ರ ಅನಿವಾರ್ಯವಾಗಿದೆ. ಯಾವುದೇ ರಾಷ್ಟ್ರದ ಭಾಷಿಕ ಸಮಸ್ಯೆಗಳ ಹಿನ್ನೆಲೆಯಲ್ಲಿ ಸಾಮಾಜಿಕ ಭಾಷಾಶಾಸ್ತ್ರದ ಪಾತ್ರ ಅತ್ಯಂತ ಮಹತ್ವದ್ದು. ಭಾಷೆಯನ್ನು ಆಧುನಿಕ ದೃಷ್ಟಿಕೋನಗಳಿಗೆ, ಸವಲತ್ತುಗಳಿಗೆ ತಕ್ಕಂತೆ ಬೆಳೆಸುವುದು, ಅಳವಡಿಸುವುದು, ಆಧುನೀಕರಣಗೊಳಿಸುವುದು ಮೊದಲಾದ ಉದ್ದೇಶಗಳನ್ನು ಸಾಮಾಜಿಕ ಭಾಷಾಶಾಸ್ತ್ರ ಇಟ್ಟುಕೊಂಡಿದೆ. ಬಹುಭಾಷಿಕ ರಾಷ್ಟ್ರಗಳಲ್ಲಿ ಬಹುಸಂಖ್ಯಾತ ಮತ್ತು ಅಲ್ಪಸಂಖ್ಯಾತರ ಭಾಷಿಕ ಸಮಸ್ಯೆಗಳನ್ನು ಪರಿಶೀಲಿಸುವಲ್ಲಿ ಶಿಕ್ಷಣ, ಆಡಳಿತಕ್ಕೆ ಅನುಗುಣವಾಗಿ ಅಧಿಕೃತ ಭಾಷೆಯೊಂದನ್ನು ನಿಯೋಜಿಸುವುದರಲ್ಲಿ ಇದರ ಪಾತ್ರ ಮಹತ್ತರವಾದುದು. ಜೊತೆಗೆ ಭಾಷೆಯ ಶಿಷ್ಟೀಕರಣ, ಲಿಪಿ ಸುಧಾರಣೆ, ಭಾಷಿಕ ಯೋಜನೆ ಇತ್ಯಾದಿ ಸಂದರ್ಭಗಳಲ್ಲಿ ಸಾಮಾಜಿಕ ಭಾಷಾಶಾಸ್ತ್ರದ ಅಗತ್ಯ ಇದಕ್ಕೆ ಇದೆ. ಸೋಮಶೇಖರ ಗೌಡ (2000:23)

## ಸಾಮಾಜಿಕ ಭಿನ್ನಾಂಶಗಳು

ಯಾವುದೇ ಭಾಷಿಕ ಸಮುದಾಯವೊಂದರಲ್ಲಿ ಭಾಷಿಕರು ಬಳಸುವ ಭಾಷೆಯಲ್ಲಿ ಹಲವು ವ್ಯತ್ಯಾಸಗಳಿರುವುದು ಕಾಣುತ್ತದೆ. ಈ ವ್ಯತ್ಯಾಸಗಳು ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿರುತ್ತವೆ. ಈ ಭಿನ್ನತೆಯನ್ನು ಗುರುತಿಸಲು ಬಳಸುವ ಅಂಶಗಳನ್ನು ಸಾಮಾಜಿಕ ಭಿನ್ನಾಂಶಗಳೆಂದು ಕರೆಯಲಾಗಿದೆ. ಸಾಮಾಜಿಕ ಭಾಷಾಶಾಸ್ತ್ರದ ಅಧ್ಯಯನದಲ್ಲಿ ಈ ಸಾಮಾಜಿಕ ಭಿನ್ನಾಂಶ ಬಹುಮುಖ್ಯವಾದದ್ದು. ವಿಲಿಯಂ ಲೆಬೋವ್ ಅವರು 'ಸಾಮಾಜಿಕ ಭಿನ್ನಾಂಶ' ಎಂಬ ಪರಿಕಲ್ಪನೆಯನ್ನು ಹುಟ್ಟುಹಾಕಿದ್ದಲ್ಲದೆ ಅಮೇರಿಕಾದ ಪೆಟೋರಿಕನ್ಸ್ ಅಧ್ಯಯನದಲ್ಲಿ ಸಾಮಾಜಿಕ ಭಿನ್ನಾಂಶದಿಂದಾಗಿ ಭಾಷಾ ಬಳಕೆಯಲ್ಲಿ ಉಂಟಾಗುವ ಹಲವು ಅಂಶಗಳನ್ನು ದಾಖಲಿಸಿದ್ದಾರೆ. ಪಶ್ಚಿಮದಲ್ಲಿ ನಡೆದ ಅನೇಕ ಭಾಷಾಧ್ಯಯನಗಳಲ್ಲಿ ಹಲವು ಬಗೆಯ ಸಾಮಾಜಿಕ ಭಿನ್ನಾಂಶಗಳು ಹೇಗೆ ಭಾಷಿಕ ವ್ಯತ್ಯಾಸಕ್ಕೆ ಕಾರಣವಾಗುತ್ತವೆ, ಭಾಷೆಯ ಬಳಕೆಯ ನೆಲೆಗಳ ಮೇಲೆ ಯಾವ ರೀತಿಯ ಪರಿಣಾಮ ಬೀರುತ್ತವೆ ಎನ್ನುವ ಹಲವು ವಿಚಾರಗಳನ್ನು ಭಾಷಾಧ್ಯಯನಗಳಲ್ಲಿ ತಿಳಿದುಕೊಳ್ಳಲಾಗಿದೆ. ಭಾರತದಲ್ಲಿ ನಡೆದಿರುವ ಬಹುಪಾಲು ಭಾಷಾಧ್ಯಯನಗಳಲ್ಲಿ ಮುಖ್ಯವಾದ ಅಧ್ಯಯನಗಳೆಲ್ಲ ಜಾತಿಯನ್ನು ಸಾಮಾಜಿಕ ಭಿನ್ನಾಂಶವಾಗಿ ನೋಡಲಾಗಿದೆ. ಇನ್ನು ಕೆಲವು ಅಧ್ಯಯನಗಳಲ್ಲಿ ಲಿಂಗ, ವಯಸ್ಸು, ಶಿಕ್ಷಣವನ್ನು ಒಂದೊಂದೇ ಭಿನ್ನಾಂಶವನ್ನು ಸಾಮಾಜಿಕ ಭಿನ್ನಾಂಶವಾಗಿಟ್ಟುಕೊಂಡು ಅಧ್ಯಯನ ಮಾಡಿದ್ದಾರೆ. ಇವುಗಳ ಜೊತೆಗೆ ನಗರ, ಗ್ರಾಮೀಣ, ವರ್ಗ, ಅವಿಭಕ್ತ ಅಣುಕುಟುಂಬಗಳೆಂಬ ಇನ್ನು ಕೆಲವು ಸಾಮಾಜಿಕ ಭಿನ್ನಾಂಶಗಳನ್ನು ತೆಗೆದುಕೊಂಡು ಅಧ್ಯಯನ ಮಾಡಿದರೆ ಹೆಚ್ಚಿನ ಸಂಗತಿಗಳನ್ನು ಭಾಷೆಯ ಕಲಿಕೆ - ಬಳಕೆಯ ನೆಲೆಗಳಲ್ಲಿ ತಿಳಿಯಬಹುದಾಗಿದೆ. ಅಲ್ಲದೆ, ಭಾಷಾಧ್ಯಯನದ ಮೂಲಕ ಸಮಾಜದ ಸಂರಚನೆಯ ಸ್ವರೂಪವನ್ನು ತಿಳಿಯಬಹುದಾಗಿದೆ.

ಲಿಂಗ

ಭಾಷೆಯನ್ನು ಬಳಸುವಾಗ ಸ್ತ್ರೀ, ಮತ್ತು ಪುರುಷರ ಭಾಷೆಯ ಬಳಕೆಯ ನೆಲೆಗಳಲ್ಲಿ ವ್ಯತ್ಯಾಸಗಳಿರುತ್ತವೆ. ಹಾಗೆಯೇ ಭಾಷೆಯ ಕಲಿಕೆಯ ನೆಲೆಯಲ್ಲಿಯೂ ಹೆಣ್ಣು ಮಗುವೊಂದು ಭಾಷೆಯನ್ನು ಕಲಿಯುವುದಕ್ಕೂ, ಗಂಡು ಮಗುವೊಂದು ಭಾಷೆಯನ್ನು ಕಲಿಯುವುದಕ್ಕೂ ಹಲವು ಅಂತರಗಳಿವೆ. ದ್ವಿಭಾಷಾ ಸಂದರ್ಭಗಳಲ್ಲಿ ಸ್ತ್ರೀ ಪುರುಷರ ಕಲಿಕೆ ಬಳಕೆಯ ನೆಲೆಗಳನ್ನು ಆಧರಿಸಿದ ಅಧ್ಯಯನಗಳು ಈ ಭಿನ್ನಾಂಶವನ್ನು ಗುರ್ತಿಸಿವೆ. ಆದ್ದರಿಂದ ಇದೊಂದು ಪ್ರಮುಖ ಸಾಮಾಜಿಕ ಭಿನ್ನಾಂಶವಾಗಿದೆ.

ವಯಸ್ಸು

ತಲೆಮಾರುಗಳಲ್ಲಿ ಆಗುತ್ತಿರುವ ಭಾಷಿಕ ಬದಲಾವಣೆಗಳನ್ನು ಗುರುತಿಸಲು ವಯಸ್ಸನ್ನು ಸಾಮಾಜಿಕ ಭಿನ್ನಾಂಶವಾಗಿ ಬಳಸಲಾಗುತ್ತದೆ. ಸಾಮಾನ್ಯವಾಗಿ ಮಕ್ಕಳು ಭಾಷೆಗಳನ್ನು ಕಲಿತು - ಬಳಸುವಂತೆ ವಯಸ್ಕರರು ಭಾಷೆಯನ್ನು ಕಲಿತು ಬಳಸುವಲ್ಲಿ ಹಲವು ರೀತಿಯ ಭಿನ್ನತೆಗಳಿರುತ್ತವೆ. ಚಿಕ್ಕ ವಯಸ್ಸಿನಲ್ಲಿ ಭಾಷೆಯೊಂದನ್ನು ಕಲಿತು - ಬಳಸುವಷ್ಟು ಸಹಜವಾಗಿ ವಯಸ್ಕರು ಭಾಷೆಯೊಂದನ್ನು ಸಹಜವಾಗಿ ಕಲಿಯಲು ಆಗುವುದಿಲ್ಲ. ಗ್ರಹಿಕೆಯ ನೆಲೆಗಳಲ್ಲಿ, ಕಲಿಕೆ - ಬಳಕೆಯ ನೆಲೆಗಳಲ್ಲಿ ತೊಡಕುಗಳಿರುತ್ತವೆ. ಆದ್ದರಿಂದ ವಯಸ್ಕ ಭಾಷಾ ಕಲಿಕೆಯು ಭಿನ್ನವಾಗಿದ್ದು, ಬಳಸುವ ನೆಲೆಗಳಲ್ಲಿ ಭಾಷಾ ಮಿಶ್ರಣ, ಭಾಷಿಕ ಪ್ರಕ್ರಿಯೆಗಳು ಕಾಣಿಸುವುದು ಕಾಣುತ್ತದೆ. ಹಾಗೆಯೇ ವೃದ್ಧರು ಭಾಷಾ ಕಲಿಕೆಯ ಸಂದರ್ಭಗಳು ಇನ್ನೂ ಭಿನ್ನವಾಗಿದ್ದು ಬಹುಮಟ್ಟಿಗೆ ಭಾಷಾ ಕಲಿಕೆಯ ಸಾಮರ್ಥ್ಯ ಕಡಿಮೆ ಇರುವುದರಿಂದ ಕೇವಲ ಗ್ರಹಿಕೆಯ ನೆಲೆಯಲ್ಲೇ ಇನ್ನೊಂದು ಭಾಷೆಯನ್ನು ಪಡೆದಿರಬಹುದು. ಆದ್ದರಿಂದ ಭಾಷಾಧ್ಯಯನದಲ್ಲಿ ವಯಸ್ಸು ಪ್ರಮುಖವಾದ ಸಾಮಾಜಿಕ ಭಿನ್ನಾಂಶವಾಗಿದೆ.

ಶಿಕ್ಷಣ

ಭಾಷಿಕ ಬದಲಾವಣೆಯಲ್ಲಿ ಶಿಕ್ಷಣದ ಪಾತ್ರ ಮಹತ್ವವಾದದ್ದು. ಸಾಮಾಜಿಕ ಭಿನ್ನಾಂಶಗಳಲ್ಲಿ ಇದೊಂದು ಪ್ರಮುಖ ಅಂಶ. ಶಿಕ್ಷಣದಿಂದಾಗಿ ಹಲವು ಭಾಷಾಧ್ಯಯನಗಳಲ್ಲಿ ಹೆಚ್ಚಿನ ಭಿನ್ನತೆಗಳಿರುವುದನ್ನು ಗುರುತಿಸಲಾಗಿದೆ. ಈ ಭಿನ್ನಾಂಶದಲ್ಲಿ ವಿದ್ಯಾವಂತ - ಅವಿದ್ಯಾವಂತ ಎಂಬ ಎರಡು ವಿಭಾಗಗಳಿಂದ ವಿದ್ಯಾವಂತರ ಅವಿದ್ಯಾವಂತರ ಭಾಷೆಯ ಕಲಿಕೆ - ಬಳಕೆಯ ನಡುವೆ ಇರುವ ವ್ಯತ್ಯಾಸವನ್ನು ಗುರುತಿಸಬಹುದಾಗಿದೆ. ವಿದ್ಯಾವಂತರಲ್ಲಿ ಆಡುಭಾಷೆ ಹೆಚ್ಚು ಪ್ರಮಾಣ ಭಾಷೆಗೆ ಹತ್ತಿರವಿರಬಹುದು. ಅವಿದ್ಯಾವಂತರು ಬಳಸುವ ಭಾಷೆಯಲ್ಲಿ ಪ್ರಾದೇಶಿಕ ಭಾಷೆ ಅಥವಾ ಸಾಮಾಜಿಕ ಪ್ರಭೇದ ಭಾಷೆಗೆ ಹತ್ತಿರವಿರಬಹುದು. ವಿದ್ಯಾವಂತರು ಸಂದರ್ಭಗಳಿಗೆ ತಕ್ಕಂತೆ ಭಾಷೆಗಳನ್ನು ಬಳಸುವ ಹಾಗೆ ಅವಿದ್ಯಾವಂತರು ಬಳಸದೇ ಇರಬಹುದು. ಇದನ್ನು ಅಧ್ಯಯನದ ಮೂಲಕ ನೋಡಬಹುದಾಗಿದೆ. ವಿದ್ಯಾವಂತರು

ಪ್ರಜ್ಞಾಪೂರ್ವಕವಾಗಿ ಭಾಷೆಯೊಂದನ್ನು ಬಳಸಿದಂತೆ ಅವಿದ್ಯಾವಂತರು ಬಳಸದೇ ಇರಬಹುದು. ಇಲ್ಲವೆ ಕೆಲವೊಮ್ಮೆ ಬಳಸಲೂಬಹುದು. ಹಾಗೆಯೇ ವಿದ್ಯಾವಂತರು ಭಾಷೆಯೊಂದನ್ನು ಕಲಿತಷ್ಟು ಬೇಗ ಅವಿದ್ಯಾವಂತರು ಕಲಿಯಲು ಆಗದೇ ಇರಬಹುದು. ಇದರಿಂದಾಗಿ ವಿದ್ಯಾವಂತರು ಮತ್ತು ಅವಿದ್ಯಾವಂತರು ಬಳಸುವ ಭಾಷೆಯಲ್ಲಿ ಹಲವು ವ್ಯತ್ಯಾಸಗಳು ಉಂಟಾಗಿರುತ್ತದೆ. ಇದನ್ನು ಅಧ್ಯಯನದ ಮೂಲಕ ತಿಳಿಯಬಹುದಾಗಿದೆ.

**ವೃತ್ತಿ**

ವಿವಿಧ ವೃತ್ತಿಗಳನ್ನು ಮಾಡುವವರಲ್ಲಿಯೂ ಭಾಷಾ ಬಳಕೆ ಒಂದೇ ಬಗೆಯದಾಗಿರುವುದಿಲ್ಲ. ಖಾಸಗಿ ಮತ್ತು ಸರ್ಕಾರಿ ವಲಯಗಳಲ್ಲಿ ಕೆಲಸ ಮಾಡುವವರಲ್ಲಿ ಭಿನ್ನತೆಯನ್ನು ಗುರುತಿಸಬಹುದಾಗಿದೆ. ಕೆಲವು ಸಂದರ್ಭಗಳಲ್ಲಿ ವೃತ್ತಿಯಿಂದ ಮತ್ತೊಂದು ವೃತ್ತಿಗೆ ಪಲ್ಲಟವಾದಾಗ ಭಾಷೆಯಲ್ಲೂ ಪಲ್ಲಟವಾಗಬಹುದು. ಕೆಲವು ವೃತ್ತಿಗಳಿಂದಾಗಿಯೇ ಭಾಷಾ ಸಂಗೋಪನೆಯ ಸಂದರ್ಭಗಳು ಹೆಚ್ಚು ಇರಬಹುದು. ಇನ್ನು ಕೆಲವು ಸಂದರ್ಭಗಳು ಉದ್ಯೋಗಗಳಿಗಾಗಿಯೇ ಹೆಚ್ಚಿನ ಭಾಷಾ ಪಲ್ಲಟಗಳು ಉಂಟಾಗಬಹುದು. /ಯಾವುದೇ ವ್ಯಾಪಾರ ಮಾಡುವಂತಹ ಸಂದರ್ಭಗಳಲ್ಲಿ ವ್ಯಾಪಾರಸ್ಥರಿಗೆ ಸಮಾಜದಲ್ಲಿನ ಎಲ್ಲಾ ಭಾಷೆಯ ಜನರೊಡನೆಯೂ, ವ್ಯವಹರಿಸುವ ಅವಶ್ಯಕತೆ ಇರುತ್ತದೆಯಾದ್ದರಿಂದ ವ್ಯಾಪಾರಸ್ಥರು ಹಲವಾರು ಭಾಷೆಗಳನ್ನು ಕಲಿತು - ಬಳಸುತ್ತಿರುತ್ತಾರೆ. ಕೆಲವೊಮ್ಮೆ ಪೂರ್ತಿ ಭಾಷೆಯನ್ನು ಕಲಿಯಲು ಆಗದೇ ಇದ್ದರೂ ಆಂಶಿಕ ಪಲ್ಲಟವನ್ನು ಹಲವು ಭಾಷೆಗಳಿಗೆ ಮಾಡುತ್ತಿರುತ್ತಾರಾದ ಕಾರಣ ನುಡಿಜಿಗಿತ, ನುಡಿಮಿಶ್ರಣದ ಭಾಷಿಕ ಪ್ರಕ್ರಿಯೆಗಳನ್ನು ಇವರಲ್ಲಿ ಹೆಚ್ಚಾಗಿ ಗುರುತಿಸಬಹುದಾಗಿದೆ. ಕೃಷಿಯನ್ನು ಆಧರಿಸಿದವರಲ್ಲಿ ಹೆಚ್ಚಾಗಿ ಬೇರೊಂದು ಭಾಷೆಯನ್ನು ಕಲಿಯುವ ಅವಶ್ಯಕತೆಗಳು ಬರದೇ ಇರಬಹುದು. ದಿನನಿತ್ಯದ ಕೆಲಸ ಕಾರ್ಯಗಳು ಹೊಲಗದ್ದೆಗಳಲ್ಲೆ ನಡೆಯುವುದರಿಂದ ಬೇರೊಂದು ಭಾಷೆಯನ್ನು ಬಳಸುವ ಅವಕಾಶಗಳು ಇರುವುದಿಲ್ಲ. ಕೃಷಿ ಕೂಲಿಗಳು ಜಮೀನುದಾರನೊಂದಿಗೆ, ಜಮೀನ್ನುದಾರರು ಕೃಷಿಕೂಲಿಗಳೊಂದಿಗೆ ವ್ಯವಹರಿಸುವ ಸಂದರ್ಭಗಳಲ್ಲಿಯೂ ಯಾವುದಾದರೊಂದೇ ಭಾಷೆಯಲ್ಲಿ ವ್ಯವಹರಿಸಬಹುದು. ಹಲವು ಭಾಷೆಗಳಲ್ಲಿ ವ್ಯವಹರಿಸುವ ಅವಶ್ಯಕತೆಗಳು ಕಲಿತು - ಬಳಸುವ ಕಡಿಮೆ ಸಂದರ್ಭಗಳಲ್ಲಿ ಇವರಿರುವುದರಿಂದ ಏಕಭಾಷಿಕರನ್ನು ಇಂತಹ ವೃತ್ತಿಗಳಲ್ಲಿ ಹೆಚ್ಚಾಗಿ ಕಾಣಬಹುದಾಗಿದೆ. ಖಾಸಗಿ ಕ್ಷೇತ್ರಕಾರ್ಯಗಳಲ್ಲಿ ವೃತ್ತಿಯನ್ನು ಮಾಡುವವರು ಹಲವು ಭಾಷೆಗಳಲ್ಲಿ ವ್ಯವಹರಿಸುವುದು ಅವಶ್ಯಕತೆಗಳಿರುತ್ತದೆ. ಖಾಸಗಿ ಕ್ಷೇತ್ರಗಳಲ್ಲಿ ಗ್ರಾಹಕರನ್ನು ಆಕರ್ಷಿಸುವಲ್ಲಿ, ಸಮಾಜದ ಇತರರೊಂದಿಗೆ ವ್ಯವಹರಿಸುವಲ್ಲಿ ಭಾಷೆಯೊಂದು ಅತ್ಯಂತ ಪ್ರಮುಖವಾದ ಸಂವಹನ ಸಾಧನವಾಗಿರುತ್ತದೆ. ಹಾಗೆಯೇ ಸರ್ಕಾರದ ಉದ್ಯೋಗಗಳಲ್ಲಿರುವ ಹಲವರಲ್ಲಿ ಡಾಕ್ಟರು, ಶಿಕ್ಷಕರು, ವಕೀಲರು, ಇಂಜಿನಿಯರ್‌ಗಳು, ಉನ್ನತ ಮಟ್ಟದ ಅಧಿಕಾರಿಗಳು ಶಿಕ್ಷಣದ ಸಂದರ್ಭದಲ್ಲೆ ಹಲವು ಭಾಷೆಗಳನ್ನು ಕಲಿತಿರುವುದಲ್ಲದೆ, ಸಮಾಜದಲ್ಲಿನ ಇತರರೊಂದಿಗೆ ವ್ಯವಹರಿಸುವ ಸಂದರ್ಭಗಳಲ್ಲಿ ಅನೇಕ ಭಾಷೆಗಳನ್ನು ಬಳಸುವ ಅವಶ್ಯಕತೆ ಇರುತ್ತದೆ. ಇವರುಗಳು ಔಪಚಾರಿಕ

ಸಂದರ್ಭಗಳಲ್ಲಿ, ಪ್ರಮಾಣ ಭಾಷೆ ಅಥವಾ ಆಪಳಿತ ಭಾಷೆಯೊಂದನ್ನು ಬಳಸುತ್ತಿದ್ದರೂ, ಅವಿದ್ಯಾವಂತ ಏಕಭಾಷಿಕರೊಂದಿಗೆ ವ್ಯವಹರಿಸುವ ಸಂದರ್ಭಗಳಲ್ಲಿ ಅವರ ಭಾಷೆಯಲ್ಲೆ ವ್ಯವಹರಿಸಬೇಕಾದ ಪ್ರಸಂಗಗಳು ಇರುತ್ತವೆ. ಇನ್ನು ಕುಲಕಸುಬುಗಳನ್ನು, ಸ್ವಉದ್ಯೋಗಗಳನ್ನು ಮಾಡುವವರಲ್ಲಿ ಹೆಚ್ಚಿನ ಮನೆಮಾತುಗಳು ಉಳಿದಿರುತ್ತವೆ. ಕಾರಣ ಹೊರ ಆವರಣಗಳಲ್ಲಿ ಉದ್ಯೋಗ ಮಾಡುವ ಪ್ರಸಂಗಗಳು ಕಡಿಮೆ ಇರುವುದರಿಂದಲೂ, ಇತರರ ಕೈಕೆಳಗೆ ಕೆಲಸ ಮಾಡುವ ಸಂದರ್ಭಗಳು ಇಲ್ಲದೆ ಇರುವುದರಿಂದಲೂ ಕೇವಲ ಆಂಶಿಕವಾದ ಪಲ್ಲಟವನ್ನು ಮಾತ್ರ ಬೇರೆ ಭಾಷೆಗೆ ಮಾಡುತ್ತಿರುತ್ತಾರೆ. ಹೆಚ್ಚಿನ ಸಂದರ್ಭದಲ್ಲಿ ಸ್ವಭಾಷೆಯನ್ನು ಉಳಿಸಿಕೊಂಡಿರುತ್ತಾರೆ. ಉದಾ: ಅಗಸರು, ಕ್ಷೌರಿಕರು, ನೇಕಾರರು, ಇನ್ನು ಮುಂತಾದವರು, ಕೆಲವು ಸಾಂಪ್ರದಾಯಿಕ ವೃತ್ತಿಗಳಿಂದ ಇತರೆ ವೃತ್ತಿಗಳಿಗೆ ಪಲ್ಲಟಗೊಂಡವರಲ್ಲಿ ಭಾಷಾ ಪಲ್ಲಟವೂ ಉಂಟಾಗುತ್ತದೆ. ಉದಾಹರಣೆಗೆ ಬೇಟೆಯಾಡುತ್ತಿದ್ದವರು, ಕುರಿಕಾಯುತ್ತಿದ್ದವರು, ನೇಯ್ಗೆ ಮಾಡುತ್ತಿದ್ದವರು, ಪುರೋಹಿತ್ಯ ಕಾರ್ಯವನ್ನು ಮಾಡುತ್ತಿದ್ದವರು ಹೀಗೆ ಅನೇಕ ಸಾಂಪ್ರದಾಯಿಕ ವೃತ್ತಿಗಳಲ್ಲಿ ನಿರತರಾಗಿದ್ದವರು, ಇತರೆ ವೃತ್ತಿಗಳಿಗೆ ಪಲ್ಲಟವಾದಾಗ ಶಿಕ್ಷಣದ ಸಂದರ್ಭಗಳಿಗೆ ಒಳಗಾಗಿ ಸಮಾಜದಲ್ಲಿ ಉನ್ನತವಾದ ಆರ್ಥಿಕ, ಸಾಮಾಜಿಕ ಮತ್ತು ಅಧಿಕಾರದ ಸ್ಥಾನಮಾನಗಳನ್ನು ಪಡೆಯಲು ಬೇರೊಂದು ಭಾಷೆಗೆ ಪಲ್ಲಟವಾಗಿರುವುದನ್ನು ವೃತ್ತಿಪಲ್ಲಟದ ಸಂದರ್ಭಗಳಲ್ಲಿ ಕಾಣಬಹುದಾಗಿದೆ. ಇದು ತಲೆಮಾರುಗಳಲ್ಲಿ ಮನೆಭಾಷೆಯ ಪೂರ್ಣ ಭಾಷಾ ಪಲ್ಲಟಕ್ಕೂ ಕಾರಣವಾಗುತ್ತದೆ. ಸಾಮಾನ್ಯವಾಗಿ ಉದ್ಯೋಗಗಳಿಗಾಗಿ, ಸಮಾಜದಲ್ಲಿನ ಉನ್ನತವಾದ ಸ್ಥಾನಮಾನಗಳನ್ನು ಪಡೆಯಲು ಭಾಷಾ ಪಲ್ಲಟಗಳು ಉಂಟಾಗಿರುತ್ತವೆ. ಹಾಗೆಯೇ ಸಾಮಾಜಿಕ ಚಹರೆಯನ್ನು ಭಾಷಿಕ ಚಹರೆಯ ಮೂಲಕ ತೋರಿಸಿಕೊಳ್ಳಲು ವೃತ್ತಿಗನುಸಾರವಾಗಿ ಭಾಷಾ ಸಂಗೋಪನಾ ಕಾರ್ಯಗಳು ಭಾಷಿಕರಲ್ಲಿ ನಡೆಯುತ್ತಿರುತ್ತವೆ. ಇದನ್ನು ಗುರುತಿಸಲು ಈ ಸಾಮಾಜಿಕ ಭಿನ್ನಾಂಶವನ್ನು ಅಧ್ಯಯನಗಳಲ್ಲಿ ಬಳಸಲಾಗುತ್ತದೆ.

**ವರ್ಗ**

ಭಾಷೆಯ ಸಾಮಾಜಿಕ ಚಹರೆಯನ್ನು ಹೊರಗೆಡಹುವ ಪ್ರಮುಖ ಅಂಶಗಳಲ್ಲಿ ಶ್ರೇಣೀಕೃತ ವ್ಯವಸ್ಥೆ ಅಥವಾ ವರ್ಗಗಳಲ್ಲಿನ ಮಾನವ ಸಮಾಜ ವಿಭಜನೆಯಾಗಿರುವ ರೀತಿಯೂ ಒಂದು. 'ವರ್ಗ' ಎಂದರೆ ಸಮಾನ ಸಾಮಾಜಿಕ ಮತ್ತು ಆರ್ಥಿಕ ಲಕ್ಷಣಗಳನ್ನು ಹೊಂದಿರುವ ಜನ ಸಮೂಹ ಎಂದೂ ಸ್ಥೂಲವಾಗಿ ಹೇಳಬಹುದಾದರೂ ಸಮಾಜಶಾಸ್ತ್ರದಲ್ಲಿ 'ವರ್ಗ' ಎನ್ನುವ ವಿಷಯವೇ ಚರ್ಚಾಸ್ಪದವಾಗಿದೆ. ಕೌಟುಂಬಿಕ ಪರಂಪರೆ, ಶ್ರೇಣಿ, ಉದ್ಯೋಗ, ಒಡೆತನದಂತಹ ಅಂಶಗಳು ಇದನ್ನು ಗೊಂದಲದಲ್ಲಿರಿಸುತ್ತವೆ. ಇಂತಹ ಸಂದರ್ಭದಲ್ಲಿ 'ವರ್ಗ' ಎನ್ನುವ ವಿಷಯದ ವಿವರಣೆ ಸುಲಭವಾಗಿರದೆ ವಿಭಿನ್ನ ಮಾನದಂಡಗಳಿಂದ ವಿವರಿಸಿಕೊಳ್ಳಬೇಕಾಗುತ್ತದೆ. ಪಶ್ಚಿಮದ ರಾಷ್ಟ್ರಗಳಲ್ಲಿ ವರ್ಗ ಮುಖ್ಯವಾದ ಸಾಮಾಜಿಕ ಭಿನ್ನಾಂಶವಾದರೆ ಭಾರತದಲ್ಲಿ ಜಾತಿ, ವರ್ಗ ಕಲ್ಪನೆಯನ್ನು ಇಂತಿಷ್ಟೆ ಎಂದು ನೋಡಲಾಗದು. ಪ್ರತಿಯೊಂದು ಭಾಷಿಕ ಸಂದರ್ಭಗಳ ಅಧ್ಯಯನದಲ್ಲಿ ಪರಿಸ್ಥಿತಿಯ ಅನುಕೂಲಕ್ಕೆ ತಕ್ಕಂತೆ ವರ್ಗ ಭಿನ್ನಾಂಶವನ್ನು

ಬಳಸಲಾಗುತ್ತದೆ. ಮುಖ್ಯವಾಗಿ ಆದಾಯ, ಆಸ್ತಿ, ಅಂತಸ್ತು, ಅಧಿಕಾರ ಇತ್ಯಾದಿಗಳನ್ನು ಆಧಾರವಾಗಿಟ್ಟುಕೊಂಡು ಪ್ರತಿಯೊಂದು ವರ್ಗದಿಂದ - ವರ್ಗಕ್ಕೆ ಇರುವ ಭಾಷಿಕ ವ್ಯತ್ಯಾಸವನ್ನು, ಪ್ರತಿಯೊಂದು ವರ್ಗದ ಭಾಷಿಕರ ಕಲಿಕೆ - ಬಳಕೆಯ ನೆಲೆಗಳು ಭಿನ್ನವಾಗಿರುವುದನ್ನು ಗುರುತಿಸುವಲ್ಲಿ ಇದೊಂದು ಉಪಯುಕ್ತವಾದ ಸಾಮಾಜಿಕ ಭಿನ್ನಾಂಶ.

**ಜಾತಿ**

ಪಾಶ್ಚಿಮಾತ್ಯ ಸಮಾಜದಲ್ಲಿ ವರ್ಗಪ್ರಜ್ಞೆ ಭಾಷಿಕ ಭಿನ್ನತೆಯನ್ನು ಉಂಟುಮಾಡುವಲ್ಲಿ ಪ್ರಮುಖ ಪಾತ್ರವಹಿಸಿದರೆ, ಭಾರತದಲ್ಲಿ ವರ್ಗಪ್ರಜ್ಞೆಗಿಂತ ಜಾತಿಪ್ರಜ್ಞೆ ಜಟಿಲವಾಗಿರುವಂಥದ್ದು. ಹೀಗಾಗಿ ಭಾಷಿಕ ಭಿನ್ನತೆಯ ಸ್ವರೂಪವನ್ನು ಭಾರತದ ಜಾತಿ ಭಾಷೆಗಳಲ್ಲಿ ಕಾಣಬಹುದು. ಭಾರತದಲ್ಲಿ ಜಾತಿ ಸಾಮಾಜಿಕ ಭಿನ್ನಾಂಶವನ್ನು ಬಳಸಿಕೊಂಡು ಬಹುಪಾಲು ಭಾಷಾಧ್ಯಯನಗಳು ನಡೆದಿರುವಂಥದ್ದು. ಭಾರತದಲ್ಲಿರುವ ಪ್ರತಿಯೊಂದು ಜಾತಿ ಉಪಜಾತಿಗಳ ಆಚಾರ - ವಿಚಾರ, ಉಡುಗೆ - ತೊಡುಗೆ, ನಂಬಿಕೆ, ಸಂಪ್ರದಾಯ, ಜೀವನ ಕ್ರಮ ಎಲ್ಲವೂ ವಿಭಿನ್ನವಾಗಿರುವುದರಿಂದ ಪ್ರತಿಯೊಂದು ಜಾತಿ - ಉಪಜಾತಿಗಳಲ್ಲಿನ ಭಾಷಿಕರ ಭಾಷೆಯ ಕಲಿಕೆ - ಬಳಕೆಯ ನೆಲೆಯಲ್ಲಿ ವಿಭಿನ್ನತೆ ಇದೆ. ಇದನ್ನು ಪ್ರತಿಯೊಂದು ಜಾತಿ ಉಪಜಾತಿಗಳನ್ನು ಆಧಾರವಾಗಿಟ್ಟುಕೊಂಡು ನೋಡಿದಾಗ ಹಲವು ಸಂಗತಿಗಳು ತಿಳಿದುಬರುತ್ತವೆ. ಮೇಲ್‌ಜಾತಿಯಲ್ಲಿನ ಭಾಷಿಕರಿಗಿಂತ ಕೆಳಜಾತಿಯಲ್ಲಿನ ಭಾಷಿಕರ ಕಲಿಕೆ - ಬಳಕೆಯ ನೆಲೆಗಳಲ್ಲಿ ಭಿನ್ನತೆ ಇರುತ್ತದೆ. ಈ ಭಿನ್ನತೆಯು ಭಾಷಿಕರ ಭಾಷಾ ಕಲಿಕೆ - ಬಳಕೆಯ ನೆಲೆಗಳಲ್ಲಿ ಕಾಣಿಸಿಕೊಳ್ಳುತ್ತಿರುತ್ತದೆ.

**ಕುಟುಂಬ**

ಕುಟುಂಬ ವಿಧಾನದಲ್ಲಿ ಅವಿಭಕ್ತ - ಅಣುಕುಟುಂಬಗಳೆಂಬ ಎರಡು ವಿಧಾನಗಳಿಂದ ನೋಡಬಹುದಾಗಿದೆ. ಅವಿಭಕ್ತ ಕುಟುಂಬದಲ್ಲಿರುವ ಭಾಷಿಕರಲ್ಲಿ ಭಾಷೆಯ ಸಂಗೋಪನಾ ನೆಲೆಗಳು ಹೆಚ್ಚಿದ್ದರೆ, ಅಣು ಕುಟುಂಬಗಳಲ್ಲಿ ಅವು ಪಲ್ಲಟಗಳಿಗೆ ಒಳಗಾಗುತ್ತಿರಬಹುದು. ಇದಕ್ಕಾಗಿ ಕುಟುಂಬ ವಿಧಾನವೂ ಸಾಮಾಜಿಕ ಭಿನ್ನಾಂಶವಾಗಿದೆ.

**ಗ್ರಾಮ ಮತ್ತು ನಗರ**

ಭಾಷಿಕ ವ್ಯತ್ಯಾಸಗಳು ಲಿಂಗ, ಜಾತಿ, ವರ್ಗ, ಶಿಕ್ಷಣ, ವೃತ್ತಿಗಳಲ್ಲೇ ಅಲ್ಲದೆ ನಗರ - ಗ್ರಾಮ ಸಂದರ್ಭಗಳಲ್ಲಿ ವ್ಯತ್ಯಾಸವು ಅಧಿಕವಾಗಿರುತ್ತದೆ. ಈ ಅಂಶಗಳನ್ನು ಈ ಸಾಮಾಜಿಕ ಭಿನ್ನಾಂಶಗಳಿಂದ ಅಧ್ಯಯನ ಮಾಡುವುದರ ಮೂಲಕ ತಿಳಿಯಬಹುದಾಗಿದೆ. ಭಾಷಿಕರಿಗೆ ಗ್ರಾಮೀಣ ಸಂದರ್ಭಗಳಲ್ಲಿ ಒಂದಕ್ಕಿಂತ ಹೆಚ್ಚು ಭಾಷೆಗಳನ್ನು ಕಲಿಯುವ ಅವಕಾಶ ಅನಿವಾರ್ಯಗಳು ಕಡಿಮೆ ಇರುತ್ತದೆ. ನಗರ ಸಂದರ್ಭಗಳಲ್ಲಿ ಒಂದಕ್ಕಿಂತ ಹೆಚ್ಚು ಭಾಷೆಗಳನ್ನು ಕಲಿಯುವ ಸಂದರ್ಭಗಳ ಪ್ರಮಾಣ ಹೆಚ್ಚು ಇರುತ್ತವೆ. ಗ್ರಾಮ ಸಂದರ್ಭದಲ್ಲಿ ಮನೆಮಾತೊಂದನ್ನು ಭಾಷಿಕರು ಉಳಿಸಿಕೊಂಡಂತೆ,

ನಗರ ಸಂದರ್ಭದಲ್ಲಿ ಮನೆಮಾತುಗಳನ್ನು ಉಳಿಸಿಕೊಳ್ಳಲು ಆಗದೇ ಇರಬಹುದು. ಗ್ರಾಮಕ್ಕಿಂತ ನಗರ ಸಂದರ್ಭದಲ್ಲಿ ಭಾಷಾ ಪಲ್ಲಟಗಳು, ಇತರೆ ಭಾಷಿಕ ಪ್ರಕ್ರಿಯೆಗಳು ಹೆಚ್ಚು ಉಂಟಾಗಿರುತ್ತವೆ.

ಹೀಗೆ ಈ ಮೇಲಿನ ಎಲ್ಲಾ ಸಾಮಾಜಿಕ ಭಿನ್ನಾಂಶಗಳನ್ನು ಒಟ್ಟಿಗೆ ಅಧ್ಯಯನಗಳಲ್ಲಿ ಬಳಸಿದಾಗ ದೊರೆಯುವ ಫಲಿತಗಳಲ್ಲಿ ಹೆಚ್ಚಿನ ಸಂಗತಿಗಳನ್ನು ತಿಳಿಯಬಹುದಾಗಿದೆ. ಈ ಎಲ್ಲಾ ಸಾಮಾಜಿಕ ಭಿನ್ನಾಂಶಗಳೂ ಒಂದಕ್ಕೊಂದು ಕೊಂಡಿಯಂತೆ ಬೆಸೆದುಕೊಂಡಿರುತ್ತವೆ. ಒಂದನ್ನು ಹೊರತುಪಡಿಸಿ ಒಂದನ್ನು ಅಧ್ಯಯನ ಮಾಡಿದರೆ ಯಾವುದೇ ಭಾಷಾಧ್ಯಯನದಲ್ಲಿ ಹೆಚ್ಚಿನ ಫಲಿತಗಳನ್ನು ಕಾಣಲಾಗದು.

## ಸಾಮಾಜಿಕ ಭಾಷಾಶಾಸ್ತ್ರದ ನೆಲೆಯಲ್ಲಿ ಕನ್ನಡದ ಬಗೆಗೆ ನಡೆದಿರುವ ಅಧ್ಯಯನಗಳು

1950ರ ದಶಕಗಳಿಂದ ಈಚೆಗೆ ವ್ಯವಸ್ಥಿತವಾಗಿ ಸಾಮಾಜಿಕ ಭಾಷಾಶಾಸ್ತ್ರದ ನೆಲೆಯಲ್ಲಿ ಅಧ್ಯಯನಗಳು ಪ್ರಾರಂಭವಾಯಿತು. ಆದರೆ ಕನ್ನಡದ ಸಂದರ್ಭದಲ್ಲಿ ಈ ನೆಲೆಯಲ್ಲಾದ ಅಧ್ಯಯನಗಳು ಕಡಿಮೆ. ಬಹುಶಃ ವರ್ಣನಾತ್ಮಕ ನೆಲೆಯಲ್ಲೆ ಹೆಚ್ಚಿನ ಅಧ್ಯಯನ ಮಾದರಿಗಳು ಇದ್ದುದರಿಂದ, ಈ ಶಿಸ್ತಿನ ನೆಲೆಯಲ್ಲಿ ಅಧ್ಯಯನಗಳು ಮುಂದುವರೆಯಲು ಸಾಧ್ಯವಾಗದೆ ಇರಬಹುದು. ಈ ಶಿಸ್ತಿನ ನೆಲೆಯಲ್ಲಿ ಅಧ್ಯಯನ ಮಾಡುವಾಗ ಹಲವು ಸಮಸ್ಯೆಗಳನ್ನು ನಮ್ಮ (ಕನ್ನಡದ) ಸಂದರ್ಭದಲ್ಲಿ ಎದುರಿಸಬೇಕಿದೆ. 1. ಈ ಶಿಸ್ತಿನ ನೆಲೆಯಲ್ಲಿ ನಡೆಸುವ ಅಧ್ಯಯನಗಳು ಹೆಚ್ಚಿನ ಸಂದರ್ಭದಲ್ಲಿ ಸೂಕ್ಷ್ಮವಾದ ಕ್ಷೇತ್ರಕಾರ್ಯವನ್ನು ಬಯಸುವಂಥದ್ದು. 2. ಈ ಕ್ಷೇತ್ರಕಾರ್ಯಗಳಿಗೆ ಬೇಕಾದ ಕ್ಷೇತ್ರಕಾರ್ಯದ ವಿಧಿವಿಧಾನಗಳನ್ನು ನಮ್ಮಲ್ಲಿ ಇನ್ನೂ ರೂಪಿಸಿಕೊಂಡಿಲ್ಲದೇ ಇರುವುದು. 3. ಅನ್ಯ ಜ್ಞಾನಶಾಖೆಗಳೊಂದಿಗೆ ಇದು ನೆರವನ್ನು ಬಯಸುತ್ತದೆಯಾದ್ದರಿಂದ ಅನ್ಯಜ್ಞಾನ ಶಾಖೆಗಳ ಅರಿವಿನ ಅವಶ್ಯಕತೆ ಇದೆ. 4. ಅಧ್ಯಯನವನ್ನು ವಿಶ್ಲೇಷಣೆಗೆ ಒಳಪಡಿಸುವಾಗ ಕ್ಷೇತ್ರಕಾರ್ಯದ ಮಾಹಿತಿಯನ್ನು ಹೇಗೆ ಅಧ್ಯಯನ ಚೌಕಟ್ಟಿಗೆ ಬಳಸಬೇಕೆಂಬುದರಲ್ಲಿ ಸರಿಯಾದ ಮಾರ್ಗದರ್ಶನದ ಅಗತ್ಯವಿದೆ. 5. ಹೊಸರೀತಿಯ ತಂತ್ರಜ್ಞಾನಕ್ಕೆ ಈ ಅಧ್ಯಯನಗಳನ್ನು ಅಳವಡಿಸಿಕೊಳ್ಳುವ ಅನಿವಾರ್ಯವಿರುವುದರಿಂದ ತಂತ್ರಜ್ಞಾನದ ಅರಿವು ಸಂಶೋಧಕರಿಗೆ ಬೇಕಾಗುತ್ತದೆ. 6. ಈ ಎಲ್ಲದರ ಹಿನ್ನೆಲೆಯಲ್ಲಿ ಅಧ್ಯಯನ ನಡೆಸುವಾಗ ಆಯಾ ಕ್ಷೇತ್ರದಲ್ಲಿನ ಪ್ರಾಥಮಿಕ ತಿಳುವಳಿಕೆ, ಭಾಷಿಕ ಸ್ಥಿತಿಗತಿಗಳ ಬಗೆಗೆ ಅರಿವು ಮುಂತಾದ ಹಲವು ವಿಷಯಗಳಿಗೆ ಸಂಬಂಧಿಸಿದಂತೆ ಜ್ಞಾನದ ಅಗತ್ಯವಿರುವುದರಿಂದ ಈ ಕ್ಷೇತ್ರದಲ್ಲಿ ಸಂಶೋಧನೆ ಮಾಡಲು ತೊಡಕಿದೆ ಎನಿಸುತ್ತದೆ. ಕನ್ನಡದ ಸಂದರ್ಭದಲ್ಲಾದ ಕೆಲವೇ ಕೆಲವು ಅಧ್ಯಯನಗಳಲ್ಲಿ ಕೆಲವು ಮಾತ್ರ ಸಂಶೋಧನ ಪ್ರಬಂಧಗಳಾಗಿದ್ದು, ಮಿಕ್ಕಂತೆ ಸಾಮಾಜಿಕ ಭಾಷಾಶಾಸ್ತ್ರದ ಹಿನ್ನೆಲೆಯಲ್ಲಿ ಬರೆದಂತಹ ಲೇಖನಗಳು. ಇದರ ಜೊತೆಗೆ ಕನ್ನಡದ ಮಾಹಿತಿಯನ್ನು ಬಳಸಿ ರಾಷ್ಟ್ರೀಯ ಮತ್ತು ಅಂತರ್‌ರಾಷ್ಟ್ರೀಯ ಮಟ್ಟದಲ್ಲಿ ನಡೆದ ಕೆಲವು ಅಧ್ಯಯನಗಳನ್ನು ಗುರುತಿಸಬಹುದಾಗಿದೆ.

ಅಂತರರಾಷ್ಟ್ರೀಯ ಮಟ್ಟದಲ್ಲಿ ಕನ್ನಡದ ಮಾಹಿತಿಯನ್ನು ಬಳಸಿ ದ್ವಿಭಾಷಾ ಸಂದರ್ಭವನ್ನು ಕುರಿತಂತೆ ಮಾಡಿರುವ ಅಧ್ಯಯನಗಳಲ್ಲಿ ಗುಂಫರ್ಜ್ ಮತ್ತು ವಿಲ್ಸನ್ (1971) ರವರು ಕನ್ನಡ - ಮರಾಠಿ - ಉರ್ದು ಭಾಷಾ ಸನ್ನಿವೇಶವೊಂದನ್ನು ಕುರಿತು ಮಹಾರಾಷ್ಟ್ರದ ಸಾಂಗ್ಲಿ ಜಿಲ್ಲೆಯ ಕುಪ್ಪವಾರ್ ಗ್ರಾಮದ ಅಧ್ಯಯನ ಪ್ರಮುಖವಾಗಿದೆ. ಈ ಅಧ್ಯಯನ ಕನ್ನಡ ಭಾಷೆಯಲ್ಲಿನ ವ್ಯಾಕರಣ ಹಂತದ ಪ್ರಭಾವವನ್ನು ಭಿನ್ನವಾದ ನೆಲೆಯಲ್ಲಿ ತೋರಿಸಿಕೊಡುತ್ತದೆ. ಆದ್ದರಿಂದ ದ್ವಿಭಾಷಿಕತೆಯನ್ನು ವಿವರಿಸುವ ಬಹುಪಾಲು ಬರಹಗಳು ಈ ಅಧ್ಯಯನವನ್ನು ಮತ್ತೆ ಮತ್ತೆ ಉಲ್ಲೇಖಿಸುತ್ತವೆ. ಕಮಲ್ ಕೆ.ಶ್ರೀಧರ್ (1989) ರವರು ಭಾಷಾ ಸಂಗೋಪನೆ ಮತ್ತು ಭಾಷಾ ಪಲ್ಲಟ ಕುರಿತಂತೆ ನ್ಯೂಯಾರ್ಕ್‌ನಲ್ಲಿರುವ ಕನ್ನಡಿಗರ ಬಗೆಗಿನ ಅಧ್ಯಯನ, ಅಮೇರಿಕಾ ದೇಶಕ್ಕೆ ಹೋದ ಅನೇಕ ವಲಸಿಗರಲ್ಲಿ ಕನ್ನಡಿಗರು ಮಾತ್ರ ತಮ್ಮ ಭಾಷೆಯನ್ನು ಕೆಲವು ಆವರಣಗಳಲ್ಲಿ ಉಳಿಸಿಕೊಂಡಿರುವ ವಿಶಿಷ್ಟ ಮಹತ್ವದ ಬಗೆಗೆ ಅವರ ಅಧ್ಯಯನ ತಿಳಿಸುತ್ತದೆ. ರಾಷ್ಟ್ರೀಯ ಮಟ್ಟದಲ್ಲಿ ಕನ್ನಡದ ಮಾಹಿತಿಯನ್ನು ಬಳಸಿ ದ್ವಿಭಾಷಾ ಸಂದರ್ಭವೊಂದರಲ್ಲಿಅಧ್ಯಯನ ಮಾಡಿರುವವರಲ್ಲಿ ಹೆಸರಿಸಬಹುದಾದವರು ಟಿ.ಎಸ್.ಸತ್ಯನಾಥ್ (1982) ರವರ "ದೆಹಲಿಯ ಕನ್ನಡಿಗರು ಒಂದು ಸಮಾಜೋಭಾಷಿಕ ಅಧ್ಯಯನ" ಎನ್ನುವ ಸಂಶೋಧನ ಮಹಾಪ್ರಬಂಧದಲ್ಲಿ "ದೆಹಲಿಯಲ್ಲಿರುವ ಕನ್ನಡಿಗರು ಮನೆ ಮತ್ತು ಒಳಗುಂಪುಗಳಲ್ಲಿ ಕನ್ನಡವನ್ನು, ಸಾಂಸ್ಥಿಕವಲ್ಲದ ಆವರಣಗಳಲ್ಲಿ ಹಿಂದಿಯನ್ನೂ, ಸಂಸ್ಥೆಗಳಲ್ಲಿ ಇಂಗ್ಲಿಶ್‌ನ್ನು ಬಳಸುತ್ತಿದ್ದು, ಹೊಸ ತಲೆಮಾರಿನಲ್ಲಿ ಕನ್ನಡ ಬಳಸುವ ಮನೆ ಆವರಣವೂ ಸಹ ಇಂಗ್ಲಿಶ್ ಭಾಷೆ ಬಳಕೆಯಾಗಲು ಪ್ರಾರಂಭಿಸಿದೆಯಾದ್ದರಿಂದ ದೆಹಲಿಯಲ್ಲಿನ ಕನ್ನಡಿಗರಲ್ಲಾಗುತ್ತಿರುವ ಭಾಷಾ ಪಲ್ಲಟವನ್ನು ಅವರ ಅಧ್ಯಯನ ತಿಳಿಸುತ್ತದೆ".

ಎಸ್.ಎನ್.ಶ್ರೀಧರ್ (1995) ರವರು ಕನ್ನಡದ ಮಾಹಿತಿಯನ್ನು ಬಳಸಿ ಇಂಗ್ಲಿಷ್‌ನಲ್ಲಿ ಬರೆದಿರುವ ಲೇಖನಗಳನ್ನು ಕನ್ನಡಕ್ಕೆ ಅನುವಾದ ಮಾಡಿ 'ಇಂದಿನ ಕನ್ನಡ ರಚನೆ ಮತ್ತು ಬಳಕೆ' ಎಂಬ ಪುಸ್ತಕದ ಮೂಲಕ ಹೊರತರಲಾಗಿದೆ. ಈ ಪುಸ್ತಕದಲ್ಲಿ ಸಾಮಾಜಿಕ ಭಾಷಾಶಾಸ್ತ್ರದ ಬಗೆಗಿನ ಕೆಲವು ಪರಿಕಲ್ಪನೆಗಳನ್ನು ಕನ್ನಡದಲ್ಲಿ ಬಳಸಿರುವುದಲ್ಲದೆ ನುಡಿ ಮಿಶ್ರಣ - ನುಡಿಪಲ್ಲಟ, ಭಾಷಾ ಆಧುನೀಕರಣ, ಮುಂತಾದ ವಿಷಯಗಳಿಗೆ ಸಂಬಂಧಿಸಿದಂತಹ ವಿಚಾರಗಳ ಚರ್ಚೆಗಳನ್ನು ಮಾಡಲಾಗಿದೆ. ಮಂಗೇಶ್ ವಿ.ನಾಡಕರ್ಣಿ (1975) ಅವರು ಸಂಶೋಧನ ಲೇಖನದಲ್ಲಿ ಕೊಂಕಣಿ ಕನ್ನಡ ಭಾಷೆಯ ದ್ವಿಭಾಷಿಕತೆಯ ಪರಿಣಾಮಗಳಲ್ಲಿ ವ್ಯಾಕರಣ ಹಂತದಲ್ಲಾಗಿರುವ ಬದಲಾವಣೆಯನ್ನು ಮುಂದಿಟ್ಟಿದ್ದಾರೆ. ಮಾಕರ್‌ಮಾಕ್ (1960-68a) ರವರು ಧಾರವಾಡ ಕನ್ನಡದ ಬಗೆಗಿನ ಅಧ್ಯಯನದಲ್ಲಿ ಬ್ರಾಹ್ಮಣ ಬ್ರಾಹ್ಮಣೇತರ ಹರಿಜನರಲ್ಲಿನ ಭಾಷಿಕ ಭಿನ್ನತೆಗಳನ್ನು ಗುರುತಿಸಿದ್ದಾರೆ. ಡಿ.ಎನ್.ಶಂಕರಭಟ್ಟ (1967-68) ಅವರು ಮೈಸೂರು ಜಿಲ್ಲೆಯ ಜಾತಿ ಪ್ರಭೇದಗಳ ಬಗೆಗಿನ ಅಧ್ಯಯನದಲ್ಲಿ ಬ್ರಾಹ್ಮಣ ಅಸ್ಪೃಶ್ಯ ಮತ್ತು ಇತರ ಜಾತಿಗಳು ಭೌಗೋಳಿಕ ಪ್ರಭೇದಗಳನ್ನು ಭೇದಿಸುತ್ತದೆಂದು ಆದ್ದರಿಂದ ಪ್ರಭೇದಗಳ ಮಧ್ಯದ ಭಿನ್ನತೆಗಳನ್ನು ಶಂಕರಭಟ್ಟರು

ಪ್ರಭೇದ ಪ್ರತಿನಿಧಿಸುವ ನಿಯಮಗಳ ಮೇಲೆ ಕಾರ್ಯಪ್ರವೃತ್ತವಾಗುವ ಬದಲಾವಣೆಗಳ ಸರಣಿಯಾಗಿ ವಿವರಿಸಿದ್ದಾರೆ. ರಾಮಾನುಜಂ (1968) ರವರು ಮೈಸೂರು ನಗರದ ಕನ್ನಡದ ಬಗೆಗಿನ ಅಧ್ಯಯನದಲ್ಲಿ ಬ್ರಾಹ್ಮಣ ಮತ್ತು ಬ್ರಾಹ್ಮಣೇತರ ಪ್ರಭೇದಗಳು ಚಾರಿತ್ರಿಕವಾಗಿ ಹೇಗೆ ಬದಲಾಗಿವೆ ಎನ್ನುವುದನ್ನು ಹೇಳಿದ್ದಾರೆ. ಕೃಷ್ಣಪರಮೇಶ್ವರ ಭಟ್ಟ (1995) ರವರು ಕೋಲಾರ ಜಿಲ್ಲೆಯ ಕನ್ನಡ - ತೆಲುಗು ದ್ವಿಭಾಷಿಕತೆಯನ್ನು ಕುರಿತಂತೆ ಮಾಡಿರುವ ಅಧ್ಯಯನ ವರ್ಣನಾತ್ಮಕ ನೆಲೆಯಲ್ಲಾದ ಅಧ್ಯಯನವಾದರೂ, ಸಾಮಾಜಿಕ ಅಂಶಗಳು ಭಾಷಿಕರ ಭಾಷೆಗಳ ಸಮಾವೇಶದಲ್ಲಿ ಉಂಟುಮಾಡುವ ವ್ಯತ್ಯಾಸವನ್ನು ಬ್ರಾಹ್ಮಣ - ಬ್ರಾಹ್ಮಣೇತರ, ಪರಿಚಿತ - ಅಪರಿಚಿತ, ವಿದ್ಯಾವಂತ - ಅವಿದ್ಯಾವಂತ ಎಂಬ ಅಂಶಗಳಿಂದ ಅಧ್ಯಯನ ಮಾಡಿದ್ದಾರೆ.

ಎಂ.ಚಿದಾನಂದಮೂರ್ತಿಯವರ 'ವಾಗರ್ಥ' (1981) ಮುಖ್ಯವಾಗಿ ಸಾಮಾಜಿಕ ಭಾಷಾ ವಿಜ್ಞಾನದ ನೆಲೆಯಲ್ಲಿನ ಅಧ್ಯಯನವಾಗಿದೆ. ಸ್ಥಳನಾಮಗಳು ಹಾಗೂ ವಾರ್ಗಿಕವೆಂದು ವಿಭಾಗ ಮಾಡಿಕೊಂಡು ಈ ಎರಡೂ ಪ್ರಕಾರಗಳಿಂದ ಸ್ಥಳನಾಮವನ್ನು ಕುರಿತು ಅಧ್ಯಯನ ಮಾಡಿರುವುದಲ್ಲದೆ, ವ್ಯಕ್ತಿನಾಮಗಳನ್ನು ಕುರಿತು ಕುಲನಾಮ, ಜನ್ಮನಾಮ, ಊರಿನ ಹೆಸರು, ಉತ್ತರ ಕರ್ನಾಟಕದ ಕುಲನಾಮಗಳು ಜೊತೆಗೆ ಸಂಸ್ಕೃತೀಕರಣ, ನಗರೀಕರಣ ಪರಿಣಾಮದಿಂದ ನಾಮಗಳಲ್ಲಾಗಿರುವ ಬದಲಾವಣೆಗಳನ್ನು ಅಧ್ಯಯನ ಮಾಡಿದ್ದಾರೆ. ಇದು ಮುಖ್ಯವಾಗಿ ನಾಮ ನಿಷ್ಪತ್ತಿಯ ಬಗ್ಗೆ ನಡೆದಿರುವ ಅಧ್ಯಯನವಾಗಿದೆ. ಎಂ.ಎಂ.ಕಲಬುರ್ಗಿಯವರು ಕನ್ನಡ ನಾಮ ವಿಜ್ಞಾನ (1981) ದಲ್ಲಿ ನಾಮ ವಿಧಗಳನ್ನು ಕುರಿತಂತೆ ಅಧ್ಯಯನ ಮಾಡಿರುತ್ತಾರೆ. ಈ ರೀತಿಯ ಅಧ್ಯಯನಗಳು ಸಾಮಾಜಿಕ ಭಾಷಾಶಾಸ್ತ್ರದ ಒಂದೊಂದು ಅಂಶಗಳನ್ನು ಕುರಿತಂತೆ ನಡೆದ ಅಧ್ಯಯನಗಳಾಗಿವೆ. ಆದರೆ ಭಾಷೆ ಹಾಗೂ ನಾಮಗಳನ್ನು ಬಳಸುವಲ್ಲಿ ವ್ಯಕ್ತಿಯ ವಯಸ್ಸು ಶಿಕ್ಷಣ, ಉದ್ಯೋಗ, ವರಮಾನ, ಜಾತಿ, ಲಿಂಗ ಇವೇ ಮೊದಲಾದ ಅಂಶಗಳು ಭಾಷೆಯ ಬಳಕೆ ಹಾಗೂ ನಾಮ ಬಳಕೆಯಲ್ಲಿ ವಹಿಸುವ ಪಾತ್ರವನ್ನು ಕುರಿತಂತೆ ಕನ್ನಡದಲ್ಲಿ ಸಮಾಜೋಭಾಷಿಕ ನೆಲೆಯಲ್ಲಿ ಅಧ್ಯಯನಗಳು ನಡೆದಿಲ್ಲ. ಎಂ.ಟಿ.ರತಿ (1993) ಅವರು 'ಕೊಡಗು ಬಹುಭಾಷಿಕ ಜಿಲ್ಲೆ ಒಂದು ಅಧ್ಯಯನ' ಎನ್ನುವ ಸಂಶೋಧನ ಮಹಾಪ್ರಬಂಧದಲ್ಲಿ ಕನ್ನಡ ಕೊಡವ, ತುಳು, ಮಲೆಯಾಳಂ ಭಾಷೆಗಳ ಬಗೆಗಿನ ಭಾಷಾ ಬಳಕೆಯ ನೆಲೆಗಳನ್ನು ಭಾಷಿಕರ ಮನೋಭಾವ, ಭಾಷಾ ನಡವಳಿಕೆ, ಭಾಷಾ ಅನನ್ಯತೆ, ಭಾಷಾ ಪಲ್ಲಟ, ಭಾಷಾ ಸಂಗೋಪನೆ ಎಂಬಂತ ಪರಿಕಲ್ಪನೆಗಳಲ್ಲಿ ವಿಶ್ಲೇಷಿಸಿದ್ದಾರೆ. ಸಾಕಷ್ಟು ಕ್ಷೇತ್ರಕಾರ್ಯವನ್ನು ಆಧರಿಸಿದ ಈ ಅಧ್ಯಯನವು ಬಹುಭಾಷಿಕತೆಯನ್ನು ಕುರಿತಂತೆ ಕನ್ನಡದಲ್ಲಿ ನಡೆದ ಅಧ್ಯಯನವಾಗಿದ್ದು, ಸಾಮಾಜಿಕ ಭಾಷಾಶಾಸ್ತ್ರದ ನೆಲೆಯಲ್ಲಿ ಮಾಡಿರುವ ಉತ್ತಮವಾದ ಕೆಲಸ. ಸಿ.ಪಿ.ನಾಗರಾಜ (1994) ಅವರು 'ಕನ್ನಡ ಬಯ್ಗುಳಗಳ ಅಧ್ಯಯನ' ಎಂಬ ಮಹಾಪ್ರಬಂಧದಲ್ಲಿ ಮಂಡ್ಯ ಜಿಲ್ಲೆಯಲ್ಲಿರುವ ಕನ್ನಡ ಭಾಷಿಕರು ವಿವಿಧ ಸಾಮಾಜಿಕ ಸಂದರ್ಭಗಳಲ್ಲಿ ಕನ್ನಡ ಬಯ್ಗುಳಗಳನ್ನು ಹೇಗೆ ಬಳಸುತ್ತಾರೆ ಎಂಬುದನ್ನು ಸಾಮಾಜಿಕ ಭಿನ್ನಾಂಶಗಳಿಂದ ವಿಶ್ಲೇಷಣೆಗೆ ಒಳಪಡಿಸಿದ್ದಾರೆ. ಹಾ.ಮಾ.ನಾಯಕ (1967) ಅವರು

ತಮ್ಮ ಸಂಶೋಧನ ಮಹಾಪ್ರಬಂಧದಲ್ಲಿ ಶಿಕ್ಷಣ ಮತ್ತು ಜಾತಿ ಭಾಷಿಕ ವ್ಯತ್ಯಾಸಕ್ಕೆ ಮುಖ್ಯವಾಗಿ ಕಾರಣವಾಗಿದೆ ಎಂಬ ಭಿನ್ನಾಂಶವನ್ನು ಗುರುತಿಸಿದ್ದಾರೆ. ಕೆ.ಮುಥಾಲಿಕ್ (1998) ಅವರ ಸಂಶೋಧನ ಮಹಾಪ್ರಬಂಧದದಲ್ಲಿ 'ಬಾಗಲಕೋಟೆ ಕನ್ನಡ'ದಲ್ಲಿ ಕಂಡುಬರುವ ಭಾಷಿಕ ಭಿನ್ನತೆಗೆ ಶಿಕ್ಷಣ, ನಗರೀಕರಣ, ಲಿಂಗ, ಇತ್ಯಾದಿ ಸಾಮಾಜಿಕ ಭಿನ್ನಾಂಶಗಳು ಒಂದೇ ಜಾತಿ ವಲಯದಲ್ಲಿ ಭಾಷಿಕ ಭಿನ್ನತೆಗೆ ಕಾರಣವಾಗಿದೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಯು.ಪಿ.ಉಪಾಧ್ಯಾಯ ಅವರು 'ಬೀದರ್ ಕನ್ನಡದ ದ್ವಿಭಾಷಿಕತೆ' ಲೇಖನದಲ್ಲಿ ಕನ್ನಡದ ಮೇಲೆ ಉರ್ದುಭಾಷೆ ಪ್ರಭಾವವನ್ನು ಗುರುತಿಸಿದ್ದಾರೆ. ಕೆಲವು ಅಧ್ಯಯನಗಳಲ್ಲಿ ಈ ಅಧ್ಯಯನ ಶಿಸ್ತಿನ ಕೆಲವು ಅಂಶಗಳನ್ನು ಬಳಸಿಕೊಂಡು ಅಧ್ಯಯನಗಳಾಗಿವೆ. ಡಾ. ಪಿ.ಮಹಾದೇವಯ್ಯ (1999) ಅವರು ಮೈಸೂರು ನಗರದ ಮುಸ್ಲಿಂ ಕನ್ನಡದ ಬಗೆಗಿನ ಸಾಮಾಜಿಕ ಭಾಷಾ ವೈಜ್ಞಾನಿಕ ಅಧ್ಯಯನದಲ್ಲಿ ಲಿಂಗ, ಶಿಕ್ಷಣ, ವೃತ್ತಿ ಮತ್ತು ವಯಸ್ಸನ್ನು ಸಾಮಾಜಿಕ ಭಿನ್ನಾಂಶವಾಗಿಟ್ಟುಕೊಂಡು ಮುಸ್ಲಿಂ ಕನ್ನಡದ ರಚನೆಯ ಬಗೆಗೆ ವಿಶ್ಲೇಷಿಸಿದ್ದಾರೆ. ಎನ್. ಚಾಮರಾಜು ಅವರು ಚಾಮರಾಜನಗರ ಮತ್ತು ಕೊಳ್ಳೇಗಾಲದ ಗಡಿ ಪ್ರದೇಶದ ದ್ವಿಭಾಷಿಕತೆಯನ್ನು ಸಾಮಾಜಿಕ ಭಾಷಾಶಾಸ್ತ್ರದ ನೆಲೆಯಲ್ಲಿ ಅಧ್ಯಯನ ಮಾಡಿದ್ದಾರೆ.

'ಕಲಬುರ್ಗಿ ಮುಸಲ್ಮಾನರ ಕನ್ನಡ' (1991) ಸಂಗಮೇಶ ಸವದತ್ತಿಮಠ, 'ಕರ್ನಾಟಕದಲ್ಲಿ ಕನ್ನಡ - ಮರಾಠಿ ದ್ವಿಭಾಷಿಕತೆ' ಎಸ್.ಎಸ್.ಅಂಗಡಿ (1998), 'ಆಂಧ್ರ - ಕರ್ನಾಟಕ ಸರಹದ್ದಿನಲ್ಲಿ ಕನ್ನಡ' ಬಿ.ರಾಮಚಂದ್ರರಾವ್, ಶಾಲಿನಿ ರಘುನಾಥ ಅವರು 'ಹವ್ಯಕ ಮತ್ತು ಹಾಲಕ್ಕಿ ಜನಾಂಗಗಳ ಮೂಲ ಸಂಸ್ಕೃತಿ ಮತ್ತು ಭಾಷೆ' ಕುರಿತ ಸಂಶೋಧನೆಯಲ್ಲಿ ಲಿಂಗ, ವಯಸ್ಸು, ವೃತ್ತಿ ಶಿಕ್ಷಣ, ಗ್ರಾಮೀಣ ಮತ್ತು ನಗರ ಮುಂತಾದ ಸಾಮಾಜಿಕ ಭಿನ್ನಾಂಶಗಳೊಂದಿಗೆ ಭಾಷಿಕ ಅಂಶಗಳನ್ನು ತುಲನೆಮಾಡಿ ವಿಶ್ಲೇಷಣೆ ಮಾಡಿದ್ದಾರೆ. ಯು.ಪಿ.ಉಪಾಧ್ಯಾಯ ಅವರ 'ನಂಜನಗೂಡು ಕನ್ನಡ' (1968) ಸಂಶೋಧನಾ ವರದಿಯಲ್ಲಿ ಭಾಷಿಕ ವ್ಯತ್ಯಯಗಳನ್ನು ಜಾತಿ ಆಧಾರಿಸಿ ವಿವಿಧ ಭಾಷಿಕ ಹಂತಗಳಲ್ಲಿ ಗುರುತಿಸಿದ್ದಾರೆ. ಯು.ಪಿ.ಉಪಾಧ್ಯಾಯ (1976) ಅವರು ಸಂಶೋಧನ ಪ್ರಬಂಧದಲ್ಲಿ ಬೇರೆ ಬೇರೆ ಕನ್ನಡ ಪ್ರಾದೇಶಿಕ ಉಪಭಾಷೆಗಳನ್ನು ವಿವಿಧ ಭಾಷಿಕ ಹಂತಗಳಲ್ಲಿ ತೌಲನಿಕ ಅಧ್ಯಯನ ಮಾಡಿದ್ದಾರೆ.

## ದ್ವಿಭಾಷಿಕತೆಯನ್ನು ಕುರಿತು

ಭಾಷೆಗಳ ಹುಟ್ಟು ಎಂದು ಪ್ರಾರಂಭವಾಯಿತೆಂದು ಖಚಿತವಾಗಿ ಹೇಳುವುದು ಕಷ್ಟ. ಆದರೆ ಒಂದು ಸಮಾಜದಲ್ಲಿ ಒಂದು ಭಾಷೆಗಿಂತ ಹೆಚ್ಚು ಭಾಷೆಗಳು ಬಳಸುವ ಅನಿವಾರ್ಯ, ಅವಶ್ಯಕತೆ ವ್ಯಕ್ತಿ ವ್ಯಕ್ತಿಗಳ ನಡುವೆ ಎಂದು ಉಂಟಾಯಿತೋ ಅಂದೇ ದ್ವಿಭಾಷಿಕತೆಯ ಹುಟ್ಟು ಆಗಿರಬಹುದು. ಏಕೆಂದರೆ ಭಾಷೆ ಇಲ್ಲದ ಸಮುದಾಯವೊಂದನ್ನು ನಮ್ಮ ನಡುವೆ ಗುರುತಿಸಿಕೊಳ್ಳಲು ಸಾಧ್ಯವಿಲ್ಲ. ಆದರೆ ಹಲವು ಭಾಷೆಗಳನ್ನು ಬಳಸುವ ಭಾಷಾ ಸಮುದಾಯದಲ್ಲಿ

ದ್ವಿಭಾಷಿಕತೆಯ ಇರುವಿಕೆಯನ್ನು ಗುರುತಿಸಬಹುದಾಗಿದೆ. ದ್ವಿಭಾಷಿಕತೆ ಬಳಕೆಯಾಗುವ ಸಂದರ್ಭ ಭಿನ್ನವಾಗಿರಬಹುದು. ಒಂದು ಜಿಲ್ಲೆಯಿಂದ - ಜಿಲ್ಲೆಗೆ, ಭಾಷೆಯಿಂದ - ಭಾಷೆಗೆ, ಜಾತಿಯಿಂದ - ಜಾತಿಗೆ, ವರ್ಗದಿಂದ - ವರ್ಗಕ್ಕೆ, ತಲೆಮಾರಿನಿಂದ - ತಲೆಮಾರಿಗೆ ಒಟ್ಟಾರೆಯಾಗಿ ವ್ಯಕ್ತಿಯಿಂದ - ವ್ಯಕ್ತಿಗೆ ಭಿನ್ನವಾಗಿರುತ್ತದೆ. ಜೊತೆಗೆ ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ ಅಂಶಗಳು ಬೀರುವ ಪರಿಣಾಮದಿಂದಾಗಿ ದ್ವಿಭಾಷಿಕತೆಯ ಸ್ವರೂಪ ಮತ್ತು ಪರಿಣಾಮಗಳು ಎಲ್ಲೆಡೆಗಳಲ್ಲೂ ಭಿನ್ನವಾಗಿರಬಹುದು. ಇದು ಏಕಘನಾಕೃತಿಯ ಆಯಾಮವನ್ನು ಪಡೆದಿರದೆ ಬಹುಮುಖವುಳ್ಳದ್ದಾಗಿರುತ್ತದೆ.

ದ್ವಿಭಾಷಿಕತೆಯ ಸ್ವರೂಪ, ಪ್ರಮಾಣ, ಅವಶ್ಯಕತೆಗಳು ದ್ವಿಭಾಷಿಕತೆಯನ್ನು ನಿರ್ವಹಿಸುವ ನೆಲೆಯಲ್ಲೂ ಭಿನ್ನವಾಗಿರುತ್ತವೆ. ಕನ್ನಡ - ತೆಲುಗು ಭಾಷೆಗಳ ಸಂದರ್ಭದಲ್ಲಿ ಹೇಳುವುದಾದರೆ, ಬೀದರ್‌ನಿಂದ ಕೋಲಾರ ಜಿಲ್ಲೆಯವರೆಗಿನ ಕರ್ನಾಟಕ - ಆಂಧ್ರಗಡಿಯಲ್ಲಿರುವ ದ್ವಿಭಾಷಿಕತೆಯ ಸ್ವರೂಪದಲ್ಲಿ ಆಂಧ್ರದ ಗಡಿ ಭಾಗದ ಜಿಲ್ಲೆಗಳನ್ನು ಸಂಧಿಸುವ ಪ್ರತಿಯೊಂದು ಕರ್ನಾಟಕದ ಗಡಿ ಭಾಗದಲ್ಲಿರುವ ಜಿಲ್ಲೆಗಳ ಚಾರಿತ್ರಿಕ, ಸಾಂಸ್ಕೃತಿಕ, ರಾಜಕೀಯ ಭೌಗೋಳಿಕ ಹಿನ್ನೆಲೆಯಿಂದಾಗಿ ಕನ್ನಡ - ತೆಲುಗು ದ್ವಿಭಾಷಿಕರಲ್ಲಿ ವ್ಯತ್ಯಾಸಗಳಿವೆ. ಬಳಸುವ ಭಾಷೆಯ ನೆಲೆಯಲ್ಲಿ, ಭಾಷಿಕರ ನಡವಳಿಕೆಯ ನೆಲೆಯಲ್ಲಿ, ಬಳಕೆಯ ಆವರಣಗಳಲ್ಲಿ, ಭಾಷಾ ಧೋರಣೆಯ ನೆಲೆಯಲ್ಲಿ, ಭಾಷಾ ಪಲ್ಲಟ ಸಂಗೋಪನೆಯ ನೆಲೆಯಲ್ಲಿ ಒಟ್ಟಾರೆಯಾಗಿ ಕನ್ನಡ - ತೆಲುಗು ಭಾಷೆಗಳ ಸಂದರ್ಭಕ್ಕೆ ಭಾಷಿಕರು ತೆರೆದುಕೊಳ್ಳುವ ನೆಲೆಯಲ್ಲಿ ದ್ವಿಭಾಷಿಕತೆಯ ಪ್ರಮಾಣವು ವಿಭಿನ್ನವಾಗಿರುತ್ತದೆ. ಆದ್ದರಿಂದ ದ್ವಿಭಾಷಾ ಸನ್ನಿವೇಶಗಳ ಬಗೆಗೆ ಅಧ್ಯಯನಗಳನ್ನು ಕೈಗೊಳ್ಳುವಾಗ ಏಕಘನಾಕೃತಿಯಲ್ಲಿ ಒಂದು ದ್ವಿಭಾಷಾ ಸಂದರ್ಭವಿರುತ್ತದೆಂದಾಗಲಿ, ದ್ವಿಭಾಷಿಕರ ಭಾಷಾ ಬಳಕೆಯ ನೆಲೆಗಳು ಒಂದೇ ರೀತಿಯಲ್ಲಿ ಇರುತ್ತೆಂದಾಗಲಿ ತಿಳಿಯಲು ಬರುವುದಿಲ್ಲ.

ಸಮಾಜದಲ್ಲಿ ಮನುಷ್ಯನಿಗೆ ಉಂಟಾದ ಹಲವು ಅವಶ್ಯಕತೆಗಳಿಂದಾಗಿ ಮನೆಭಾಷೆಯಲ್ಲದ ಇತರ ಭಾಷೆಗಳನ್ನು ಕಲಿಯುವುದು ಅವಶ್ಯವಾದ ಚಟುವಟಿಕೆಯಾಗಿದೆ. ಯಾವುದೇ ಎರಡು ಭಿನ್ನ ಭಾಷಾ ಸಮಾಜಗಳು ಮುಖಾಮುಖಿಯಾದಾಗ ಅವುಗಳ ನಡುವಿನ ಕೊಡುಕೊಳೆ ಸಾಧ್ಯವಾಗಿರುವುದು ದ್ವಿಭಾಷಿಕರ ಮೂಲಕವೇ. ಅದರಲ್ಲಿಯೂ ಭಾರತದಂತಹ ಬಹುಭಾಷಿಕ ಸಮಾಜದಲ್ಲಿ ಇತರ ಭಾಷೆಗಳ ಜ್ಞಾನ ಮತ್ತು ಬಳಕೆ ಉಸಿರಾಟದಷ್ಟು ಸಹಜ. ಅಧಿಕೃತವಾಗಿಯೂ ನಮ್ಮ ಸಾಮಾನ್ಯ ಶಿಕ್ಷಣ ತ್ರಿಭಾಷಾ ಸೂತ್ರವನ್ನು ಅನುಸರಿಸುತ್ತದೆ. ಅಂದರೆ ಶಿಕ್ಷಣ ಪಡೆದ ಪ್ರತಿಯೊಬ್ಬ ಭಾಷಿಕನೂ ತನ್ನ ರಾಜ್ಯ ಭಾಷೆ, ರಾಷ್ಟ್ರ ಭಾಷೆ ಮತ್ತು ಅಂತರಾಷ್ಟ್ರೀಯ ಭಾಷೆಯಾದ ಇಂಗ್ಲಿಶ್ ಈ ಮೂರನ್ನೂ ಕಲಿಯುವ ಅವಕಾಶವಿದೆ. ಸಂವಿಧಾನದ ಎಂಟನೇ ಅನುಚ್ಛೇದದ ಪ್ರಕಾರ ಭಾರತದ 18 ಭಾಷೆಗಳಿಗೆ ಮಾನ್ಯತೆ ದೊರೆತಿದ್ದರೂ, ನಮ್ಮ ದೇಶದಲ್ಲಿ ಬಳಕೆಯಲ್ಲಿರುವ ಭಾಷೆಗಳ ಸಂಖ್ಯೆ 1600 ಕ್ಕೂ ಮೀರಿದೆ. ಅಲ್ಲದೆ

ನಮ್ಮಲ್ಲಿ ಎಷ್ಟೋ ಜನರಿಗೆ ಮನೆಮಾತು ರಾಜ್ಯಭಾಷೆ ಒಂದೇ ಆಗಿರುವುದಿಲ್ಲ. ಉದಾ : ಕರ್ನಾಟಕದಲ್ಲಿರುವ ಕೆಲವು ಭಾಷಿಕರು ಕೊಡವ, ತುಳು, ಕೊಂಕಣಿ, ಹವ್ಯಕ ಇವುಗಳನ್ನು ಮನೆಮಾತಾಗಿ ಬಳಸಿ ರಾಜ್ಯ ಭಾಷೆಯಾಗಿ ಕನ್ನಡ ಕಲಿಯುತ್ತಾರೆ. ಹಾಗೆಯೇ ಕರ್ನಾಟಕದ ಗಡಿಭಾಗಗಳಲ್ಲಿ ವಾಸಿಸುವವರಿಗೆ ಎರಡು, ಮೂರು ಭಾಷೆಗಳ ಒಡನಾಟ ಇದ್ದೇ ಇರುತ್ತೆ. ಆದ್ದರಿಂದ ದ್ವಿ - ಬಹುಭಾಷಿಕತೆಗಳು ನಮ್ಮ ಸಂದರ್ಭದಲ್ಲಿ ಸಹಜವಾಗಿವೆ.

20ನೇ ಶತಮಾನದಲ್ಲಿ ಉಂಟಾದ ಜಾಗತೀಕರಣ ಪ್ರಕ್ರಿಯೆಯಿಂದ ದ್ವಿಭಾಷಿಕತೆಯ ಸ್ವರೂಪ ಮತ್ತು ಪರಿಣಾಮಗಳು ತೀವ್ರವಾಗಿ ಬದಲಾಗುತ್ತಿವೆ. ಕನ್ನಡ - ಮರಾಠಿ, ಕನ್ನಡ - ತೆಲುಗು, ಕನ್ನಡ - ತುಳು, ಕನ್ನಡ - ತಮಿಳು ದ್ವಿಭಾಷಿಕತೆಗಿಂತ ಕನ್ನಡ - ಇಂಗ್ಲಿಶ್, ತೆಲುಗು - ಇಂಗ್ಲಿಶ್, ತಮಿಳು - ಇಂಗ್ಲಿಶ್, ಈ ರೀತಿಯ ಪಲ್ಲಟಗಳು ಜಾಗತೀಕರಣ ಸಂದರ್ಭದಲ್ಲಿ ಹೆಚ್ಚಾಗಿ, ಇಂಗ್ಲಿಶ್ ಭಾಷೆಯ ಕಡೆಗೆ ಭಾಷಿಕರು ಪಲ್ಲಟಗೊಳ್ಳುತ್ತಿದ್ದಾರೆ. ದ್ವಿಭಾಷಿಕರಾದವರಲ್ಲಿ ತಮ್ಮ ಶೈಕ್ಷಣಿಕ ಹಂತದ ಸಾಧನೆಗಾಗಿ ಸಾಕ್ಷರತೆಯ ಕೌಶಲಗಳನ್ನು ಇಂಗ್ಲಿಶ್‌ನಲ್ಲಿ ಪಡೆಯುವುದು ಹೆಚ್ಚಾಗುತ್ತಿರುವುದರಿಂದ ತಮ್ಮ ಸ್ವಭಾಷೆಗಳು ಕೇವಲ ಮೌಖಿಕ ಭಾಷೆಗಳಾಗಿ ಉಳಿದುಕೊಳ್ಳುವಂತಾಗುತ್ತಿವೆ. ಇದರ ಪರಿಣಾಮಗಳನ್ನು ಮುಂದೆ ನೋಡಬೇಕಾಗಿದೆ. ಈ ನಿಟ್ಟಿನಲ್ಲಿ ಕೆಲವು ಭಾರತೀಯ ಭಾಷೆಗಳು ತಮ್ಮ ಭಾಷೆಯನ್ನು ಜಾಗತಿಕ ಮಟ್ಟದಲ್ಲಿ ಕಾಯ್ದುಕೊಳ್ಳಲು ಹಲವಾರು ಹೊಸತಂತ್ರಗಳನ್ನು ಭಾಷೆಯ ಆಧುನಿಕೋತ್ತರ ಪ್ರಕ್ರಿಯೆಗಳಿಗೆ ಸಿದ್ಧಪಡಿಸಿಕೊಳ್ಳುವಲ್ಲಿ ಕಾರ್ಯೋನ್ಮುಖವಾಗಿವೆ.

ದ್ವಿಭಾಷಿಕರಾದವರಲ್ಲಿ ಎರಡು ಭಾಷೆಯಲ್ಲಿನ ಭಾಷಿಕ ಸಾಮರ್ಥ್ಯ ಎಲ್ಲಾ ಸಂದರ್ಭಗಳಲ್ಲೂ ಒಂದೇ ರೀತಿ ಇರುವುದಿಲ್ಲ. ಉದಾ : ಬ್ರಿಟನ್‌ನಲ್ಲಿರುವ ಪಂಜಾಬಿ ಭಾಷಿಕರಲ್ಲಿ ಪಂಜಾಬಿಯನ್ನು ಮಾತನಾಡುವ ಮಟ್ಟದಲ್ಲಿ ಅರ್ಥಮಾಡಿಕೊಳ್ಳುತ್ತಾರೆ. ಆದರೆ ಬರೆಯುವ ಗುರುಮುಖಿ ಲಿಪಿಯನ್ನು ಅರ್ಥಮಾಡಿಕೊಳ್ಳಲಾಗುವುದಿಲ್ಲ. ಇಂತಹ ದ್ವಿಭಾಷಿಕರಲ್ಲಿ ಮಾತನಾಡುವ ಮತ್ತು ಗ್ರಹಿಸುವ ಸಾಮರ್ಥ್ಯ ಉನ್ನತ ಮಟ್ಟದಲ್ಲಿರುತ್ತದೆ. ಓದುವ ಮತ್ತು ಬರೆಯುವ ಕೌಶಲ ಇರುವುದಿಲ್ಲ. ಜೊತೆಗೆ ಬೇರೆ ಬೇರೆ ಭಾಷೆಯ ಉಚ್ಚಾರವೂ ಸಹ ಭಿನ್ನವಾಗಿದೆ. (ರೊಮೆನೆ 1982:24)

ದ್ವಿಭಾಷಿಕರು ಯಾರು? ಎನ್ನುವ ಪ್ರಶ್ನೆಗೆ ಹಲವು ಭಾಷಾ ವಿಜ್ಞಾನಿಗಳು ನಿರ್ವಚನಗಳು ಅನೇಕ ರೀತಿಯಲ್ಲಿವೆ. "ತನ್ನ ಮಾತೃಭಾಷೆಯ ಮೇಲೆ ತೋರುವಂಥದೇ ಪ್ರಭುತ್ವವನ್ನು ಎರಡನೆಯ ಭಾಷೆಯ ಮೇಲೂ ತೋರಬಲ್ಲ ವ್ಯಕ್ತಿಯೇ ದ್ವಿಭಾಷಿಕನೆನಿಸಿಕೊಳ್ಳುತ್ತಾನೆ" ಎಂಬ ಬ್ಲೂಮ್‌ಫೀಲ್ಡ್ (1933) ಅವರ ಹೇಳಿಕೆ ಒಂದು ತುದಿಯಲ್ಲಿದ್ದರೆ "ಎರಡನೆಯ ಭಾಷೆಯಲ್ಲಿ ಓದುವ, ಬರೆಯುವ, ಮಾತನಾಡುವ ಹಾಗೂ ಅರ್ಥಮಾಡಿಕೊಳ್ಳಬಲ್ಲ ಈ ನಾಲ್ಕು ತೆರನಾದ ಸಾಮರ್ಥ್ಯಗಳಲ್ಲಿ ಯಾವುದೊಂದರಲ್ಲಿಯಾದರೂ ಪರಿಣತನಾಗಿದ್ದರೆ ದ್ವಿಭಾಷಿಕನೆಂದೂ ಕರೆಯಬಹುದು" ಎಂಬ ಮಾಕನ್‌ಮಾರ (1967 ಎ) ಅವರ ಹೇಳಿಕೆ ಇನ್ನೊಂದು ತುದಿಯಲ್ಲಿದೆ. ಇವುಗಳ ಮಧ್ಯೆ "ಒಂದು ಭಾಷೆಯ

ಜೊತೆ - ಜೊತೆಗೆ ಇನ್ನೊಂದು ಭಾಷೆಯನ್ನು ಬಳಸುವ ರೂಢಿಯೇ ದ್ವಿಭಾಷಿಕತೆ"ಯೆಂದು ವೆಯನ್‌ರಿಚ್ (1953) "ಎರಡನೇ ಭಾಷೆಯಲ್ಲಿ ಅರ್ಥಪೂರ್ಣ ವಾಕ್ಯಗಳನ್ನು ಹೊರಡಿಸಬಲ್ಲ ವ್ಯಕ್ತಿಯೇ ದ್ವಿಭಾಷಿಕ"ನೆಂದು ಹೇಳುವ ನಿರ್ವಚನಗಳೂ ಇವೆ. ಇವುಗಳೆಲ್ಲ ಭಾಷೆಯ ಮೇಲಿನ ಪ್ರಭುತ್ವವನ್ನೊ ಅಥವಾ ಬಳಕೆಯಲ್ಲಿ ತೋರುವ ವೈಚಿತ್ರವನ್ನೊ ಗಮನಿಸಿ ಹೇಳಿದ ನಿರ್ವಚನಗಳು. ಆದರೆ ಹೆಚ್ಚಿನ ಸಂದರ್ಭಗಳಲ್ಲಿ ದ್ವಿಭಾಷಿಕತೆಯೆಂಬುದು ಕೇವಲ ಎರಡು ಭಾಷೆಗಳು ಒಂದೆಡೆ ಸೇರುವುದು ಮಾತ್ರವಲ್ಲ. ಒಂದು ಸಮಾಜ ತನ್ನ ಜನರಲ್ಲಿ ಇನ್ನೊಂದು ಭಾಷೆಯನ್ನು ಕಲಿಯುವ ಇಚ್ಛೆಯನ್ನು ಅವಶ್ಯಕತೆಯನ್ನು ಉಂಟುಮಾಡುತ್ತದೆ. ಯುನೆಸ್ಕೋ ವರದಿ (1965) ಆದ್ದರಿಂದ ಒಬ್ಬ ವ್ಯಕ್ತಿಯಲ್ಲಿ ಅಥವಾ ಒಂದು ಸಮಾಜದಲ್ಲಿ ದ್ವಿಭಾಷಿಕತೆ ಕಾಣಿಸಿಕೊಂಡಾಗ ಅದಕ್ಕೆ ಕಾರಣವಾಗಿರಬಹುದಾದ ಸಾಮಾಜಿಕ ಸಂದರ್ಭಗಳನ್ನು ಗಮನಿಸದೆ ಕೇವಲ ಭಾಷೆಗೆ ಸಂಬಂಧಿಸಿದಂತೆ ಮಾತ್ರ ಅಧ್ಯಯನ ನಡೆಸುವುದು ಅಷ್ಟೇನೂ ಉಪಯುಕ್ತವಾದದ್ದಲ್ಲ [ಡೈಬೋಲ್ಡ್ (1964)] ಎಂಬ ಅಭಿಪ್ರಾಯವಿದೆ.

ಎರಡು ಭಾಷೆಗಳನ್ನು ಬಲ್ಲ ವ್ಯಕ್ತಿಯೇ ದ್ವಿಭಾಷಿಕನೆಂಬುದು ಸರಳವಾದ ನಿರ್ವಚನ. ಕಲಿಯುವಿಕೆ ಎಂಬುದು ಅನೇಕ ಹಂತಗಳ ಮೂಲಕ ನಡೆಯುವ ಒಂದು ಮಾನಸಿಕ ಪ್ರಕ್ರಿಯೆಯಾಗಿದೆ. ದ್ವಿಭಾಷಿಕತೆ ಒಬ್ಬ ವ್ಯಕ್ತಿಯಿಂದ ಹಿಡಿದು ಇಡೀ ಸಮಾಜವನ್ನು ಒಳಗೊಳ್ಳುವಂತೆ ವಿವಿಧ ಪ್ರಮಾಣದಲ್ಲಿ ಕಾಣಿಸಿಕೊಳ್ಳಬಹುದಾದ್ದರಿಂದ ಎರಡು ಭಾಷೆಗಳ ಬಳಕೆ ಹಾಗೂ ಅದನ್ನು ನಿಯಂತ್ರಿಸುವ ಸಂದರ್ಭಗಳು ಅನೇಕ ರೀತಿಯದ್ದಾಗಿರುವುದು. ದ್ವಿಭಾಷಿಕತೆಗೆ ಭಾಷೆಗಳ ಕಲಿಕೆಯಿಂದ ಅಂತರ್ಗತವಾದ ಭಾಷಾ ಸಾಮರ್ಥ್ಯ ಹಾಗೂ ಅವುಗಳ ಪ್ರತ್ಯಕ್ಷ ಬಳಕೆ ಎಂಬ ಎರಡು ಮುಖಗಳಿದ್ದು ಅವುಗಳ ನಡುವಿನ ಸಂಬಂಧ ಸರಳವಾದದ್ದಲ್ಲ - ಕೃಷ್ಣ ಪರಮೇಶ್ವರ ಭಟ್ಟ (1995:02)

## ದ್ವಿಭಾಷಿಕತೆ ಬಗೆಗಿನ ಅಧ್ಯಯನಗಳನ್ನು ಕುರಿತ ಪಕ್ಷಿನೋಟ

ಭಾಷಾ ಅಧ್ಯಯನ ಮುಖ್ಯವಾಗಿ ಒಂದು ಶಿಸ್ತಾಗಿ ರೂಪುಗೊಂಡದ್ದು ಏಕಭಾಷಿಕ ರಾಷ್ಟ್ರಗಳಾದ ಜರ್ಮನ್, ಇಂಗ್ಲೆಂಡ್, ಫ್ರಾನ್ಸ್, ಅಮೇರಿಕಾದಲ್ಲಿ. ಇಲ್ಲಿ ಇಡೀ ಭಾಷಾ ಸಮುದಾಯದಲ್ಲಿರುವ ಭಾಷಿಕರೆಲ್ಲರೂ ಒಂದೇ ಭಾಷೆಯನ್ನು ಮಾತನಾಡುತ್ತಾರೆ. ಭಾಷಿಕರಲ್ಲಿ ಭಾಷಾ ಮಿಶ್ರಣವೆಂಬುದಿರುವುದಿಲ್ಲ ಎನ್ನುವ ಸ್ಥಿತಿಯಲ್ಲಿ ಬ್ಲೂಮ್‌ಫಿಲ್ಡ್ (1927) ರವರೆಗಿನ ಹೆಚ್ಚಿನ ಅಧ್ಯಯನಗಳು ಏಕಭಾಷಾ ದೃಷ್ಟಿಕೋನದಲ್ಲೆ ನಡೆದಿರುವಂಥದ್ದಾಗಿದೆ. ಇವರ ನಂತರದಲ್ಲಿ ಎರಡು ಭಾಷೆಗಳನ್ನು ಚೆನ್ನಾಗಿ ಬಲ್ಲವರು ಆದರ್ಶ ದ್ವಿಭಾಷಿಕರು ಎನ್ನುವ ಪರಿಕಲ್ಪನೆಯಲ್ಲಿ ಅಧ್ಯಯನಗಳು ಆಗಿವೆ. ಈ ರೀತಿಯ ಸಿದ್ಧಾಂತಗಳು ಆಯಾ ರಾಷ್ಟ್ರಗಳಲ್ಲಿ ಭಾಷಾ ನೀತಿ ಮತ್ತು ಶಿಕ್ಷಣ ನೀತಿಯನ್ನು ಪ್ರಭಾವಿಸಿವೆ. ಉದಾಹರಣೆಗೆ ಕೆನಡಾ ಮತ್ತು ಸ್ವೀಡನ್‌ನಲ್ಲಿ ಅರೆಭಾಷಿಕತೆ ಸಿದ್ಧಾಂತವನ್ನು ಮುಂದಿಟ್ಟಿದ್ದಾರೆ. ಆದರೆ ಶಿಕ್ಷಣದಲ್ಲಿ ಮನಶಾಸ್ತ್ರಜ್ಞರು ಈ ರೀತಿಯ ಸಿದ್ಧಾಂತಗಳನ್ನು ಸಮಾಜೋಭಾಷಿಕ ಅಂಶಗಳಿಂದ ನೋಡಿದಾಗ ಕೊರತೆ ಆಧಾರಿತ

ವಿಶ್ಲೇಷಣೆಯ ಮಿತಿ ಗೊತ್ತಾಗುತ್ತದೆ ಎಂದಿದ್ದಾರೆ. "ದ್ವಿಭಾಷಿಕರು ಸಾಮಾಜಿಕ ಸಂದರ್ಭಗಳಿಗೆ ತಕ್ಕಂತೆ ಭಾಷೆಯನ್ನು ಬಳಸುತ್ತಿರುತ್ತಾರೆ. ಆದರ್ಶ ದ್ವಿಭಾಷಿಕತೆ ಎನ್ನುವುದು ವಾಸ್ತವದಲ್ಲಿ ಇರುವುದಿಲ್ಲ. ಆದರ್ಶ ಭಾಷಿಕ ಸಮುದಾಯದಲ್ಲಿನ ಆದರ್ಶ ದೇಶಿ ಭಾಷಿಕರನ್ನು ದೃಷ್ಟಿಯಲ್ಲಿಟ್ಟುಕೊಂಡಿರುವ ಏಕ ಭಾಷಿಕ ದೃಷ್ಟಿಕೋನ ಚಾಮ್‌ಸ್ಕೀಯ ಸಿದ್ಧಾಂತ. ಇದು ಸರಳವಾದ ಸಂದರ್ಭಗಳಲ್ಲಿ ಕೆಲಸ ಮಾಡುತ್ತದೆಯೇ ಹೊರತು, ಸಂಕೀರ್ಣ ಸಂದರ್ಭಗಳಲ್ಲಿ ಅಲ್ಲ" ಪೀಟರ್ ಮಸ್ಕಿನ್ ಮತ್ತು ವಿಲ್ ರಾಯ್(1995:02). ಆಧುನಿಕ ಭಾಷಾಶಾಸ್ತ್ರದಲ್ಲಿ ಇನ್ನೂ ಹಲವರು ಇದೇ ನಿಟ್ಟಿನಲ್ಲಿ ಕೆಲಸ ಮಾಡಿದ್ದಾರೆ.

ವಿಲಿಯಂ ಲೆಬೋವ್ ವ್ಯತ್ಯಸ್ಥವಾಗುವ ಆದರ್ಶವಲ್ಲದ ದಿನನಿತ್ಯದ ಮಾತಿನತ್ತ ಒಡ್ಡುವ ಸವಾಲುಗಳನ್ನು ಎದುರಿಸಲಿಕ್ಕೆ ಪ್ರಯತ್ನಪಟ್ಟಿದ್ದಾರೆ. ವಿಲಿಯಂ ಲೆಬೋವ್ ಅವರು ಭಾಷಾ ವಿಕಲ್ಪಗಳ ಸ್ವರೂಪವನ್ನು ಅರಿಯಲು ಮಾಡಿದ ಪ್ರಯೋಗದಲ್ಲಿ ಅಮೇರಿಕಾ ದೇಶದಲ್ಲಿನ ನ್ಯೂಯಾರ್ಕ್ ಪ್ರದೇಶದವರು ಉಚ್ಚರಿಸುವ ಇಂಗ್ಲಿಶ್ ಪದಗಳ ಕೊನೆಯಲ್ಲಿ ಅಥವಾ ನಡುವೆ 'r' ಧ್ವನಿ ಇದ್ದರೆ ಅದನ್ನು ಉಚ್ಚರಿಸುತ್ತಿರಲಿಲ್ಲ. ಈ ಅಂಶವನ್ನು ಹಿಂದೆಯೇ ಗುರುತಿಸಲಾಗಿತ್ತಾದರೂ ಇದು ಒಂದು ಮುಕ್ತ ಪ್ರಸಾರದಲ್ಲಿರುವ ಪರಿವರ್ತನೆಯೆಂದು ಭಾವಿಸಿದ್ದರು. ಆದರೆ ಲೆಬೋವ್ ಅವರು ಪಶ್ಚಿಮದ ಸಾಮಾಜಿಕ ಶ್ರೇಣಿಕರಣದಲ್ಲಿನ ಮೇಲುವರ್ಗ, ಮಧ್ಯಮ ವರ್ಗ ಮತ್ತು ಕೆಳವರ್ಗಗಳನ್ನು ಮುಖ್ಯವಾದ ಸಾಮಾಜಿಕ ಭಿನ್ನಾಂಶವಾಗಿಟ್ಟುಕೊಂಡು ಸೂಕ್ಷ್ಮವಾದ ಅಧ್ಯಯನದಿಂದ ಮಾಹಿತಿ ಸಂಗ್ರಹಣೆ ವಿಶ್ಲೇಷಿಸಿ 'r' ಉಚ್ಚಾರಣೆಯ ವಿಕಲ್ಪವು ನಿಯಮಬದ್ಧವಾಗಿದೆಯೆಂದು ತೋರಿಸಿದರು. ಹಾರ್‌ವರ್ತ್ (1985) ಅವರು ಸಿಡ್ನಿಯ ವಲಸಿಗರಲ್ಲಿ ಇಂಗ್ಲಿಷ್ ಮಾತನಾಡುವವರಲ್ಲಿಯ ವ್ಯತ್ಯಾಸಗಳನ್ನು ಗುರುತಿಸಿದ್ದಾರಲ್ಲದೆ, ಬೇರೆ ಸಾಂಸ್ಕೃತಿಕ, ಅಲ್ಪಸಂಖ್ಯಾತ ಭಾಷಿಕರನ್ನೂ ತನ್ನ ಅಧ್ಯಯನದಲ್ಲಿ ಸೇರಿಸಿಕೊಂಡಿದ್ದಾರೆ. ಈ ಅಧ್ಯಯನ ತುಂಬಾ ಕುತೂಹಲ ಫಲಿತಾಂಶಗಳನ್ನು ನೀಡಿದೆ. ಇದರಿಂದಾಗಿ ಆಧುನಿಕ ಭಾಷಾಶಾಸ್ತ್ರದಲ್ಲಿದ್ದ ಅಸಮತೋಲನವನ್ನು ಇಂಥವರ ಅಧ್ಯಯನಗಳು ಸ್ವಲ್ಪಮಟ್ಟಿಗಾದರೂ ನಿವಾರಣೆ ಮಾಡಲು ಪ್ರಯತ್ನಿಸಿವೆ ಎಂದು ಪೀಟರ್ ಮಸ್ಕಿನ್ (1995:02) ಅವರು ಹೇಳಿದ್ದಾರೆ. ಭಾಷಾಶಾಸ್ತ್ರ ಸಮಾಜದಲ್ಲಿನ ಸಂಕೀರ್ಣ ಭಾಷಿಕ ಅಂಶಗಳನ್ನು ಗಮನಿಸಬೇಕಾಗುತ್ತದೆ. ಸಮಾಜೋಭಾಷಿಕ, ಮನಶಾಸ್ತ್ರೀಯ ಅಂಶಗಳು ಭಾಷಿಕವಾಗಿ ಶೈಕ್ಷಣಿಕ ಪರಿಣಾಮವನ್ನುಂಟು ಮಾಡುವುದರಿಂದ ಸಂಕೀರ್ಣ ಅಂಶಗಳ ಕಡೆಗೆ ಗಮನಹರಿಸಬೇಕಿದೆ. ಏಕ ಭಾಷಿಕ ದೃಷ್ಟಿಕೋನವನ್ನು ಹೊಂದಿರುವ ಭಾಷಾಶಾಸ್ತ್ರಜ್ಞರು ದ್ವಿಭಾಷಿಕತೆಯನ್ನು ಅಧ್ಯಯನ ಮಾಡುವುದರ ಮುಖಾಂತರ ಕಲಿಯುವುದು ಸಾಕಷ್ಟಿದೆ. ಉದಾಹರಣೆಗೆ ಒಂದೇ ಭಾಷಿಕ ಸಮುದಾಯದಲ್ಲಿನ ಜನರು ಹೇಗೆ ಹಲವಾರು ಭಾಷೆಗಳನ್ನು ತಮ್ಮ ದಿನನಿತ್ಯದ ಬದುಕಿನಲ್ಲಿ ನಿರ್ದಿಷ್ಟವಾಗಿ ಆಯ್ಕೆ ಮಾಡಿಕೊಂಡು ಬಳಸುತ್ತಾರೆ ಎಂಬುದರ ಮೂಲಕ ಭಾಷಾ ಬಳಕೆ ಮತ್ತು ಭಾಷಾ ವಿಭಿನ್ನತೆಗಳ ಬಗೆಗೆ ತಿಳಿದುಕೊಳ್ಳಬಹುದು. ನುಡಿಪಲ್ಲಟ, ನುಡಿಮಿಶ್ರಣ, ಶೈಲಿಪಲ್ಲಟ ಬಗೆಗಿನ ಅಧ್ಯಯನದ ಮೂಲಕ ಮಾನವನ

ಮೆದುಳಿನಲ್ಲಿ ಹಲವಾರು ಭಾಷೆಗಳು ಏಕಕಾಲಕ್ಕೆ ಸಂಸ್ಕರಣಗೊಳ್ಳುವ ಪ್ರಕ್ರಿಯೆ ಮನಶಾಸ್ತ್ರೀಯ ಭಾಷಾಶಾಸ್ತ್ರ ನರವ್ಯೂಹ ಭಾಷಾಶಾಸ್ತ್ರದ ಬಗೆಗೆ ಹೆಚ್ಚು ಬೆಳಕನ್ನು ಚೆಲ್ಲುತ್ತವೆ. ವಿಭಿನ್ನ ಭಾಷೆಗಳು ವ್ಯಾಕರಣದ ಮಾದರಿಗಳು ಮತ್ತು ಶಬ್ದಗಳ ಮಿಶ್ರಣ ಭಾಷೆಯ ಸಂರಚನೆಯ ಬಗೆಗೆ ತಿಳಿಸುತ್ತದೆ. ಮಿಲ್‌ರಾಯ್ ಮತ್ತು ಪೀಟರ್ ಮಸ್ಕಿನ್ (1995:2-3)

ದ್ವಿಭಾಷಿಕತೆಯನ್ನು ಕುರಿತಂತೆ ಯುರೋಪ್ ರಾಷ್ಟ್ರಗಳಲ್ಲಿ 9ನೇ ಶತಮಾನದಲ್ಲಿ ಅಧ್ಯಯನಗಳಾಗಿವೆ ಎಂದು ಎ.ಕೆ.ಶ್ರೀವಾಸ್ತವ ಅವರು ಲೇಖನವೊಂದರಲ್ಲಿ ಹೇಳುತ್ತಾರೆ. ಆದರೆ ಆಧಾರಗಳನ್ನು ಕೊಟ್ಟಿಲ್ಲ. ಆಧುನಿಕ ಭಾಷಾಶಾಸ್ತ್ರ ಏಕಭಾಷಾ ದೃಷ್ಟಿಯಿಂದ ಕೆಲಸ ಮಾಡುತ್ತಿದೆ. ಭಾಷಾ ಸಮುದಾಯದಲ್ಲಿ ಸಂಪೂರ್ಣವಾಗಿ ಆದರ್ಶ ಕೇಳುಗ ಮತ್ತು ಆಡುಗರನ್ನು ದೃಷ್ಟಿಯಲ್ಲಿಟ್ಟುಕೊಂಡು ಏಕಘನಾಕೃತಿಯ ಭಾಷೆಯನ್ನು ಅಧ್ಯಯನ ಮಾಡುತ್ತಿರುವುದಕ್ಕೆ ವಿರುದ್ಧವಾಗಿ ರೋಮನ್ ಜಾಕೋಬ್‌ಸನ್ 1953 ರಲ್ಲಿ ಭಾಷಾಶಾಸ್ತ್ರದ ಮೂಲ ಸಮಸ್ಯೆ 'ದ್ವಿಭಾಷಿಕತೆ' ಎಂದು ಗುರುತಿಸಿದ್ದಾರೆ. ದ್ವಿಭಾಷಿಕತೆ ಮತ್ತು ಭಾಷಾ ಸಂಪರ್ಕ ಕ್ಷೇತ್ರದ ಆಯಾಮಗಳ ಚರ್ಚೆ 1940-50ರ ದಶಕಗಳಲ್ಲಿ ಕೆನಡಾ - ಅಮೆರಿಕಾ ಸಂಯುಕ್ತ ಸಂಸ್ಥಾನಗಳಲ್ಲಿ ಪ್ರಾರಂಭವಾಯಿತು. ಈ ಸಂದರ್ಭದಲ್ಲಿ ಮುಖ್ಯವಾಗಿ ಲೀಪೋಲ್ಡ್, ಐನರ್ ಹಗೆನ್, ಯೂರಿಲ್ ವೆನ್ರಿಖ್, ವಿಲಿಯಂ ಮ್ಯಾಕೆ ಪ್ರಮುಖರು. ರಂಜತ್ (1913) ರವರು ತನ್ನ ಮಗ ಲೂಯಿಯ ಫ್ರೆಂಚ್ ಮತ್ತು ಜರ್ಮನ್ ದ್ವಿಭಾಷಿಕತೆಯ ವಿವರಗಳನ್ನು ಹಿಡಿದಿಟ್ಟಿದ್ದಾರೆ. ಲೀಪೋಲ್ಡ್ (1939-49) ರವರು 10 ವರ್ಷಗಳ ಅಧ್ಯಯನದಲ್ಲಿ ಮಗುವಿನ ಜರ್ಮನ್ ಮತ್ತು ಇಂಗ್ಲಿಶ್ ದ್ವಿಭಾಷಿಕತೆಯ ಬಗೆಗಿನ ವಿವರಗಳನ್ನು ಡೈರಿಯಲ್ಲಿ ಬರೆದಿದ್ದಾರೆ. ವಿಶಾಲವಾದ ಪರಿಸರದಲ್ಲಿ ಮಗುವಿನ ದ್ವಿಭಾಷಿಕತೆಯ ಬೆಳವಣಿಗೆಯ ದಾಖಲೆ, ಎರಡು ಭಾಷೆಗಳ ಪ್ರತ್ಯೇಕತೆ ಯಾರ ಜೊತೆ ಮಾತನಾಡುವಾಗ ಅವರ ಪಾತ್ರ ಯಾವ ರೀತಿಯ ಪ್ರಭಾವ ಪರಿಣಾಮವನ್ನು ಮಗುವಿನ ಮೇಲೆ ಬೀರುತ್ತದೆ. ದ್ವಿಭಾಷಾ ಸಾಮರ್ಥ್ಯದ ಅಸಮಾನತೆಯ ಅಂಶ, ಪ್ರಬಲಭಾಷೆ, ದುರ್ಬಲ ಭಾಷೆಯ ಮೇಲೆ ಬೀರುವ ಪರಿಣಾಮಗಳ ಬಗೆಗೆ ಈ ಅಧ್ಯಯನದಲ್ಲಿ ಹೆಚ್ಚು ಒತ್ತು ಕೊಟ್ಟಿದ್ದಾರೆ.

ದ್ವಿಭಾಷಿಕತೆಯನ್ನು ಕುರಿತಂತೆ 1913 ರಿಂದ 1953 ರ ಮಧ್ಯೆ ಹಲವಾರು ಅಧ್ಯಯನಗಳು ಹಲವಾರು ದೃಷ್ಟಿಕೋನಗಳಿಂದ ನಡೆದಿದೆ. ರಾಷ್ಟ್ರೀಯತೆ, ರಾಷ್ಟ್ರ ಪ್ರಭುತ್ವ ಅಲ್ಪಸಂಖ್ಯಾತ ಭಾಷಾ ಸಮುದಾಯಗಳ ಬಗೆಗೆ, ಭಾಷಾ ಬದಲಾವಣೆ, ಭಾಷಾಶುದ್ಧತೆ, ಎಲ್ಲಾ ವಿಷಯಗಳಿಗೆ ಸಂಬಂಧಿಸಿದಂತೆ ಇದರ ಒಟ್ಟು ಚಿತ್ರಣ Vildolce (1963) ಸಿಗುತ್ತದೆ. ಯೂರಿಲ್ ವೆನ್ರಿಖ್ (1953) ರ ಅಧ್ಯಯನ ದ್ವಿಭಾಷಿಕತೆಯ ಅಧ್ಯಯನದ ವ್ಯಾಪ್ತಿ - ವಿಧಾನಗಳನ್ನು ವಿವರಿಸುವ ಪ್ರಭಾವಶಾಲಿಯಾದ ಅಧ್ಯಯನ. ದ್ವಿಭಾಷಿಕತೆಯ ಅಧ್ಯಯನಕ್ಕೆ ಸೈದ್ಧಾಂತಿಕ ಚೌಕಟ್ಟನ್ನು ಇದು ನೀಡುತ್ತದೆ. ರೋಮನ್ ಜಾಕೋಬ್‌ಸನ್ ಮತ್ತು ಆಂಡ್ರೆ ಮಾರ್ಟಿನೆಟ್‌ರ ಯುರೋಪಿನ ಸಂರಚನಾ ವಾದ ಈತನ ಮೇಲೆ ಪ್ರಭಾವ ಬೀರಿದೆ. ಸ್ವಿಜರ್‌ಲ್ಯಾಂಡ್‌ನಲ್ಲಿರುವ ರೋಮನ್ ಮತ್ತು ಜರ್ಮನ್ ದ್ವಿಭಾಷಿಕರನ್ನು ಆಧರಿಸಿದ ಈ

ಅಧ್ಯಯನವು ದ್ವಿಭಾಷಿಕತೆಯ ಬಗೆಗಿನ ಎಲ್ಲಾ ವಿಷಯಗಳನ್ನು ಕುರಿತು ಹಲವಾರು ದೃಷ್ಟಿಕೋನಗಳಿಂದ ಪರಿಚಯ ಮಾಡಿಕೊಡುತ್ತದೆ. ಇದರಲ್ಲಿ ಬಹಳ ಮುಖ್ಯವಾದದ್ದು ದ್ವಿಭಾಷಿಕರ ವರ್ಗೀಕರಣ. 1951 ರಲ್ಲಿನ ತನ್ನ ಯಿದ್ದಿಷ್ ಅಮೇರಿಕನ್ ಭಾಷೆಯ ಅನುಭವಗಳನ್ನು ಇದರಲ್ಲಿ ಸೇರಿಸಿದ್ದಾನೆ.

ಐನರ್ ಹಗೆನ್ (1953) ರವರು ಅಮೇರಿಕಾದಲ್ಲಿನ ನಾರ್ವೆಯನ್ ಭಾಷೆಯ ಬಗೆಗೆ 30 ರ ದಶಕ ಮತ್ತು 40 ರ ದಶಕದಲ್ಲಿ ನಡೆಸಿದ ಕ್ಷೇತ್ರಕಾರ್ಯವನ್ನು ಆಧರಿಸಿದ ಸಂಶೋಧನೆಯಲ್ಲಿ ದ್ವಿಭಾಷಿಕರ ನಡವಳಿಕೆಗಳ ಸ್ಥೂಲ ಸರ್ವೇಕ್ಷಣೆ ಮಾಡಿದ್ದಾರೆ. ಅಮೇರಿಕಾದ ಸಂರಚನಾವಾದ ಪ್ರಭಾವಿಸಿರುವ ಅಮೇರಿಕನ್ ಮತ್ತು ಸ್ಕ್ಯಾಂಡಿನಿವಾಸ್ ಪ್ರಭೇದ ವಿಜ್ಞಾನದ ಮಾದರಿ, ಸೈದ್ಧಾಂತಿಕ ಚೌಕಟ್ಟು ಮತ್ತು ಕ್ಷೇತ್ರಕಾರ್ಯವನ್ನು ಆಧರಿಸಿ ಇದನ್ನು ವಿಶ್ಲೇಷಿಸಲಾಗಿದೆ. ಸ್ವೀಕರಣ ಪ್ರಕ್ರಿಯೆ, ಧ್ವನಿಮಾ, ವ್ಯಾಕರಣ ಹಂತಗಳ ಬಗೆಗೂ ಸಮಾಜೋಭಾಷಿಕ ಆಯಾಮಗಳ ಬಗೆಗೆ ಅಧ್ಯಯನ ಮಾಡಿದ್ದಾರೆ.

ಮ್ಯಾಕೆ (1972) ಫ್ರೆಂಚ್ ಕೆನಡಾ ದ್ವಿಭಾಷಿಕತೆಯ ಅಧ್ಯಯನದಲ್ಲಿ ದ್ವಿಭಾಷಿಕತೆಯನ್ನು ಮರುವ್ಯಾಖ್ಯಾನಕ್ಕೆ ಒಳಪಡಿಸಬೇಕೆಂದು ಹೇಳಿದ್ದಾರೆ. 1962-65-66 ರಲ್ಲಿ ದ್ವಿಭಾಷಿಕತೆಯನ್ನು ಮಾಪನ ಮಾಡುವುದರ ಸಮಸ್ಯೆಗಳನ್ನು ಕುರಿತು ಅಧ್ಯಯನ ಮಾಡಿದ್ದಾರೆ. 1970a ಲೇಖನದಲ್ಲಿ ದ್ವಿಭಾಷಿಕ ಶಿಕ್ಷಣದ ವರ್ಗೀಕರಣವನ್ನು ಕುರಿತು ಬರೆದಿದ್ದಾರೆ. 1970b ಲೇಖನದಲ್ಲಿ ದ್ವಿಭಾಷಿಕತೆ ಬಳಕೆಯ ಸಂದರ್ಭದಲ್ಲಿ ನುಡಿ ಮತ್ತು ಸಂದೇಶದ ನಡುವಿನ ಸಂಬಂಧವನ್ನು ನಿರ್ಧರಿಸಲು ಕೆಲವು ಪರೀಕ್ಷೆಗಳನ್ನು ಅಭಿವೃದ್ಧಿಪಡಿಸಿದ್ದಾರೆ. 1956 ರಲ್ಲಿ ಬಯೋಗ್ರಫಿ ಮತ್ತು ಸಂಶೋಧನ ಗೈಡ್ ಅನ್ನು ಸಿದ್ಧಪಡಿಸಿದ್ದಾರೆ.

ಜೋಷುವ ಫಿಶ್‌ಮನ್ (1965) ರವರು ಅಮೇರಿಕಾದಲ್ಲಿನ ವಿವಿಧ ವಲಸಿಗ ಗುಂಪುಗಳ ಭಾಷಾ ನಿಷ್ಠತೆಯ ಪ್ರಕ್ರಿಯೆಯನ್ನು ಪೆಟ್ರೋರಿಕನ್ಸ್ ಸ್ಪ್ಯಾನಿಷ್ ಮತ್ತು ಇಂಗ್ಲಿಷ್ ಭಾಷಿಕರ ದ್ವಿಭಾಷಿಕತೆಯ ಬಗೆಗಿನ ಅಧ್ಯಯನದಲ್ಲಿ 'ಆವರಣ' ಎನ್ನುವ ಪರಿಕಲ್ಪನೆಯನ್ನು ಮುಂದಿಡುತ್ತಾರೆ. (ಒಂದು ಸಾಮಾನ್ಯ ನಡವಳಿಕೆಯ ನಿಯಮಾವಳಿಯಿಂದ ನಿರ್ಬಂಧಿತವಾದ ಸಾಮಾಜಿಕ ಸಂದರ್ಭಗಳ ಗೊಂಚಲನ್ನು ಆವರಣ ಎಂದು ಕರೆದಿದ್ದಾರೆ) ದ್ವಿಭಾಷಿಕ ಸಮುದಾಯದಲ್ಲಿನ ಭಾಷಾ ಆಯ್ಕೆಗಳ ಮಾದರಿಯನ್ನು ವಿವರಿಸಲು ಈ ಪರಿಕಲ್ಪನೆಯನ್ನು ಹುಟ್ಟುಹಾಕಿದ್ದು, ಮೂಲಭೂತವಾಗಿ ಆವರಣ ವಿಶ್ಲೇಷಣೆ ಸಾಮಾಜಿಕ ವಿಶ್ಲೇಷಣೆಯನ್ನು ಹೊಂದಿರುವ ಸೂಕ್ಷ್ಮ ಅಧ್ಯಯನ. ಏಕೆಂದರೆ ಒಬ್ಬ ವ್ಯಕ್ತಿಯ ಭಾಷಾ ನಡವಳಿಕೆಯನ್ನು ಆತ / ಆಕೆಯ ಮೇಲಿರುವ ಸಾಮಾಜಿಕ ವ್ಯವಸ್ಥೆಗಳು ರೂಪಿಸುತ್ತದೆ.

ಪಾರ್‌ಡೀಸ್ (1978)ರ ದ್ವಿಭಾಷಿಕತೆಯ ಪ್ರಶ್ನೆಯನ್ನು ನರವ್ಯೂಹ ಭಾಷಾಶಾಸ್ತ್ರದ ಭಾಷಾ ಅವ್ಯವಸ್ಥೆಯ ಅಧ್ಯಯನದ ಜೊತೆ ಜೋಡಿಸಿದ್ದಾರೆ. ಇವರು ಆಸ್ಟ್ರೇಲಿಯಾದಲ್ಲಿ ದ್ವಿಭಾಷಿಕತೆ ಮತ್ತು ನುಡಿಪಲ್ಲಟದ ಬಗೆಗೆ ಅಧ್ಯಯನ ಮಾಡಿದ್ದಾರೆ. ಮೈಕ್ಲೈನ್ (1967) ರ ಆಸ್ಟ್ರೇಲಿಯಾದಲ್ಲಿನ ಜರ್ಮನ್ ಡಚ್ ವಲಸಿಗರ ಅಧ್ಯಯನದಲ್ಲಿ ಭಾಷಾ ಮಿಶ್ರಣ ಪರಿಕಲ್ಪನೆಯನ್ನು ಮನಸ್‌ಶಾಸ್ತ್ರ ಮತ್ತು ಸಮಾಜೋಭಾಷಿಕ ಅಂಶಗಳ ಹಿನ್ನೆಲೆಯಲ್ಲಿ ಅಧ್ಯಯನ ಮಾಡಿದ್ದಾರೆ. ಕ್ಲೈನ್ ಮತ್ತು ಡಿಟ್‌ಮಾರ್ (1979) ರವರು ಬಹಳ ವಿಭಿನ್ನ ದೃಷ್ಟಿಕೋನದಿಂದ ವಲಸಿಗ ಸಮುದಾಯದ ದ್ವಿಭಾಷಿಕತೆಯನ್ನು ಕುರಿತಂತೆ ಕೆಲಸ ಮಾಡಿದ್ದಾರೆ. ಮುಖ್ಯವಾಗಿ ಇವರು ದ್ವಿಭಾಷಿಕರ ಕಲಿಕೆಯ ಸಂದರ್ಭಗಳಲ್ಲಿ ಭಾಷೆಯ ಮೇಲಾಗುವ ಸಾಮಾಜಿಕ ಅಂಶಗಳನ್ನು ಅಧ್ಯಯನ ಮಾಡಿದ್ದಾರೆ. ಲೆಪೇಜ್ (1985) ಲಂಡನ್ನಿನ ವೆಸ್ಟಿಂಡೀಸ್ ಮತ್ತು ಕರೇಬಿಯನ್ ಸಮುದಾಯಗಳಲ್ಲಿ ಕ್ರಿಯೋಲ್ ಮಾತನಾಡುವವರ ಅಧ್ಯಯನ. ಹಲವಾರು ವರ್ಷಗಳ ಕ್ಷೇತ್ರಕಾರ್ಯ, ವಿಶ್ಲೇಷಣೆಯ ನಂತರ ಮೂಲಭೂತವಾಗಿ ಸಮಾಜೋಮನೋವೈಜ್ಞಾನಿಕ ದೃಷ್ಟಿಕೋನವನ್ನು ಅಳವಡಿಸಿಕೊಂಡಿರುವುದು. ಇದು ಮತ್ತು ಇತರರು ಮಾಡಿರುವ ಅಕಾಮಡೇಶನ್ ಸಿದ್ಧಾಂತದ ಜೊತೆಗೆ ಹೊಂದಿಕೊಳ್ಳುತ್ತದೆ. ಭಾಷಿಕರ ಪ್ರತಿಯೊಂದು ಮಾತು ಹೇಗೆ ತನ್ನೊಳಗೆ ಗುರುತಿನ ಕ್ರಿಯೆಯನ್ನು ಒಳಗೊಂಡಿದೆ. ಮತ್ತು ಅದು ಹೇಗೆ ವಿವಿಧ ಮೂಲಗಳೊಂದಿಗೆ ಸಂಪರ್ಕ ಹೊಂದಿದೆ ಎನ್ನುವುದನ್ನು ಈ ಅಧ್ಯಯನ ತಿಳಿಸುತ್ತದೆ.

ಮನಶ್ಶಾಸ್ತ್ರಜ್ಞರು, ಸಮಾಜಶಾಸ್ತ್ರಜ್ಞರು, ಶಿಕ್ಷಣ ತಜ್ಞರು ಮತ್ತು ಅಂತರ್ ರಾಷ್ಟ್ರೀಯ ಅಧ್ಯಯನಗಳು ದ್ವಿಭಾಷಿಕತೆಯನ್ನು ನೋಡುವ ದೃಷ್ಟಿಕೋನಗಳು ಭಿನ್ನವಾಗಿರುವಂಥದ್ದು. ಆದ್ದರಿಂದ ಮ್ಯಾಕೆ (1968) ದ್ವಿಭಾಷಿಕತೆ ಎನ್ನುವುದು 'ಒಂದು ಭಾಷಾ ಪ್ರಕ್ರಿಯೆಯಲ್ಲ, ಭಾಷೆಯ ಬಳಕೆ' ಎಂದಿದ್ದಾರೆ. ಅಲ್ಲದೆ ದ್ವಿಭಾಷಿಕತೆ ಎನ್ನುವುದು ಒಂದು ಸಾಮಾಜಿಕ ವಿದ್ಯಮಾನವೆಂಬಂತೆ ಸಾಮಾಜಿಕ ಸಂಘರ್ಷ ವಿನಿಮಯ - ಸಮಾವೇಶಗಳನ್ನು ಸೂಚಿಸುವ ವಿಷಯವೆಂಬಂತೆ ಸಮಾಜ ವಿಜ್ಞಾನಿಗಳು ಗ್ರಹಿಸಿದ್ದಾರೆ. ಆದ್ದರಿಂದ ದ್ವಿಭಾಷಿಕರಲ್ಲಿಯ ಭಾಷಿಕ ರಚನಾ ವ್ಯವಸ್ಥೆಯನ್ನು ಕುರಿತ ಪ್ರಶ್ನೆಗಳಿಗಿಂತ "ಭಾಷೆಗಳ ಬಳಕೆಗಳ ಬಳಕೆಯಲ್ಲಿನ ವೈಚಿತ್ರ್ಯ ಮುಖ್ಯವಾಗಿ ತೋರಿದೆ". ಎರಡು ಭಾಷೆಗಳನ್ನು ಬಳಸುವ ಭಾಷಿಕರಲ್ಲಿ ಎರಡು ಭಾಷೆಗಳ ಕೌಶಲಗಳು ಎಲ್ಲಾ ಹಂತದಲ್ಲೂ ಒಂದೇ ರೀತಿಯಲ್ಲಿ ಪರಿಪೂರ್ಣವಾಗಿ ಬಳಕೆಯಾಗುವುದಿಲ್ಲ. ಯಾವ ಆವರಣದಲ್ಲಿ ಎಷ್ಟು? ಹೇಗೆ ಬಳಸಬೇಕು? ಭಾಷೆಯ ಬಳಕೆಯು ಸಮಾಜದಲ್ಲಿ ಯಾವ ಪಾತ್ರವನ್ನು ನಿರ್ವಹಿಸಲು ಸಾಧ್ಯ? ಎನ್ನುವುದರ ಮೇಲೆ ಭಾಷೆ ಬಳಕೆಯಾಗುತ್ತಿರುತ್ತದೆ. ಎಲ್ಲಾ ಭಾಷೆಗಳ ವಿಷಯದಲ್ಲೂ ಹೀಗೆ, ಮಾತನಾಡಲು, ಅರ್ಥಮಾಡಿಕೊಳ್ಳಲು, ಓದಲು, ಬರೆಯಲು, ಇಂಥ ಸಂದರ್ಭದಲ್ಲಿ ದ್ವಿಭಾಷಿಕತೆ ಬಳಕೆಯನ್ನು ಹೇಗೆ ಮಾಪನ ಮಾಡುವುದು ಎಂಬುದರ ಬಗೆಗೆ ಚರ್ಚೆಗಳು ಪ್ರಾರಂಭವಾಯಿತು. 1950-60 ರ ದಶಕಗಳಲ್ಲಿ ಪ್ರಾರಂಭವಾದ ಚರ್ಚೆಯಿಂದಾಗಿ ಮ್ಯಾಕನ್‌ಮಾರ (1967a-1969) ದ್ವಿಭಾಷಿಕತೆಯನ್ನು ಅಳೆಯಲು ಹಲವಾರು ಪರೀಕ್ಷೆಗಳನ್ನು ಬಳಸಿದನು. ಅವುಗಳೆಂದರೆ 1. ರೇಟಿಂಗ್ ಸ್ಕೇಲ್ಸ್ 2. ಫ್ಲೂಯೆನ್ಸಿ ಟೆಸ್ಟ್ 3. ಫ್ಲೆಕ್ಸಿಬಿಲಿಟಿ

ಟೆಸ್ಟ್ ಮತ್ತು 4. ಡೊಮೈನೆನ್ಸ್ ಟೆಸ್ಟ್ ಈ ಪರೀಕ್ಷೆಗಳು ಇವುಗಳನ್ನು ಒಳಗೊಂಡಿದ್ದವು. ಸಂದರ್ಶನಗಳು, ಭಾಷಾ ಬಳಕೆಯ ಮಾಪನಗಳು, ಸೆಲ್ಫ್‌ರೇಟಿಂಗ್ ಸ್ಕೇಲ್ಸ್, ಸೆಲ್ಫ್ ರೇಟಿಂಗ್ ಇಂಡಿವಿಜ್ಯುವಲ್ಸ್ ಈ ಪರೀಕ್ಷೆಗಳನ್ನು ಮಾಡಿ ಬಂದ ಫಲಿತಾಂಶದಿಂದ ಎರಡು ಭಾಷೆಗಳಲ್ಲೂ ಸಮಾನವಾದ ಭಾಷಾ ಕೌಶಲಗಳನ್ನು ಎಲ್ಲಾ ಹಂತಗಳಲ್ಲೂ ಪಡೆದ ದ್ವಿಭಾಷಿಕರನ್ನು ಬ್ರೀಡ್ಸ್‌ಮೋರ್ (1982a) 'ಸಮಭಾಷಿಕರು' ಎಂದು ಕರೆದಿದ್ದಾರೆ. ಇದರಂತೆ ಹಾಲಿಡೇ, ಸ್ಟೀವೆನ್ಸ್ (1968) ಅವರುಗಳು 'ಉಭಯ ಭಾಷಿಕರು' ಎಂಬ ಪರಿಭಾಷೆ ಬಳಸಿದ್ದಾರೆ. (1985) ಇಂಗ್ಲೆಂಡಿನಲ್ಲಿ ಭಾಷಾ ಅಲ್ಪಸಂಖ್ಯಾತರ ಬಗೆಗಿನ ಅಧ್ಯಯನದಲ್ಲಿ ಈ ಮಾಪನ ವಿಧಾನವನ್ನು ಬಳಸಲಾಗಿದೆ. ಇದರಿಂದ ಪ್ರತಿವಕ್ತೃಗಳಿಂದ ಪಡೆದ ಮಾಹಿತಿಯಲ್ಲಿ ಮೌಖಿಕ ಅಥವಾ ಸಾಕ್ಷರತೆಯ ಕೌಶಲಗಳು ಕೆಲವು ಸಂದರ್ಭದಲ್ಲಿ ಕಡಿಮೆ ಪ್ರಮಾಣದಲ್ಲಿದ್ದವೆಂದು ತಿಳಿದುಬಂದಿದೆ.

ಕೂಪರ್ 1971 ರಲ್ಲಿ ಸ್ಪ್ಯಾನಿಷ್ ಇಂಗ್ಲಿಶ್ ದ್ವಿಭಾಷಿಕರನ್ನು ಅಧ್ಯಯನ ಮಾಡುವಾಗ ರೈಟಿಂಗ್ ಸ್ಕೈಲ್ ಜೊತೆಗೆ ಆವರಣಗಳಲ್ಲಿ ಭಾಷಾ ಬಳಕೆಯ ವ್ಯತ್ಯಾಸವನ್ನು ಗುರುತಿಸಿದ್ದಾರೆ. ಯಾವುದೇ ಸಮಾಜದಲ್ಲಿ ಎರಡು ಭಾಷೆ ಬಳಕೆಯಾಗುತ್ತಿದ್ದರೆ, ಆ ಎರಡು ಭಾಷೆಗಳಿಗೆ ಬೇರೆ ಬೇರೆ ಕಾರ್ಯಗಳು, ಸ್ಥಾನಮಾನಗಳು ಇರುತ್ತದೆಯಾದ್ದರಿಂದ ಆ ಎರಡೂ ಭಾಷೆಗಳನ್ನು ದ್ವಿಭಾಷಿಕರು ಸಮಪ್ರಮಾಣದಲ್ಲಿ ಬಳಸಲಾರರು. ಆದ್ದರಿಂದ ಮೆಥೆರ್‌ಬ್ (1969-50) ಯಾವ ಸಂದರ್ಭದಲ್ಲಿ ಯಾವ ಕಾರ್ಯಕ್ಕಾಗಿ ಭಾಷೆ ಬಳಕೆಯಾಗುತ್ತದೆ ಎನ್ನುವುದರ ಮೇಲೆ ಭಾಷಾ ಬಳಕೆಯ ಪ್ರಮಾಣ ನಿರ್ಧಾರವಾಗುತ್ತದೆ ಎಂದು ಹಲವು ಮಾಪನ - ವಿಧಾನಗಳನ್ನು ದ್ವಿಭಾಷಿಕತೆಯ ಅಧ್ಯಯನಗಳಲ್ಲಿ ಬಳಸಲಾಗಿದೆ. ದ್ವಿಭಾಷಿಕತೆಯ ಬಗೆಗೆ ಅಧ್ಯಯನಗಳು ನಡೆದಂತೆಲ್ಲಾ ಹೊಸ - ಹೊಸ ವಿಧಾನಗಳಿಂದ ದ್ವಿಭಾಷಿಕತೆಯ ಪ್ರಮಾಣವನ್ನು ಮತ್ತು ಪರಿಣಾಮವನ್ನು ಗುರುತಿಸಲಾಗಿದೆ.

## ಭಾರತದಲ್ಲಿ ದ್ವಿಭಾಷಾ ಸಂದರ್ಭಗಳನ್ನು ಕುರಿತಂತೆ ನಡೆದಿರುವ ಅಧ್ಯಯನಗಳ ಪಕ್ಷಿನೋಟ

ಭಾರತದ ಸಂದರ್ಭದಲ್ಲಿ ದ್ವಿ - ಬಹುಭಾಷಿಕತೆಯು ಸಹಜವಾದ ಪ್ರಕ್ರಿಯೆಯಾಗಿದೆ. ಅನೇಕ ಶತಮಾನಗಳಿಂದಲೂ ದ್ವಿಭಾಷಿಕತೆ ಭಾರತದ ಸಂದರ್ಭದಲ್ಲಿದ್ದು ಸಾಹಿತ್ಯ ಗ್ರಂಥಗಳಲ್ಲಿ ದ್ವಿಭಾಷಿಕತೆಯು ಬಳಕೆಯಾಗಿರುವುದು ಕಾಣುತ್ತದೆ. ಆದರೆ ಸಮುದಾಯವೊಂದರಲ್ಲಿ ದ್ವಿಭಾಷಿಕತೆಯು ಹೇಗೆ ನೆಲೆಗೊಂಡಿತ್ತೆಂಬುದಕ್ಕೆ ಆಧಾರಗಳಿಲ್ಲ. ಭಾರತದಲ್ಲಿ ಬಹುಮಟ್ಟಿಗೆ ಗಡಿ ಪ್ರದೇಶಗಳಲ್ಲಿ ದ್ವಿಭಾಷಿಕತೆ ಹೆಚ್ಚಾಗಿ ಉಂಟಾಗಿದ್ದರೂ, ಇತರೆಡೆಗಳಲ್ಲಿಯೂ ದ್ವಿಭಾಷಿಕತೆಯು ಭಾಷಾ ಸಮುದಾಯಗಳಲ್ಲಿ ನೆಲೆಗೊಂಡಿರುವುದನ್ನು ಕಾಣಬಹುದಾಗಿದೆ.

ಕೈಗಾರೀಕರಣ, ನಗರೀಕರಣ, ಆಧುನೀಕರಣ, ಉದಾರೀಕರಣ, ಜಾಗತೀಕರಣ ಪ್ರಕ್ರಿಯೆಗಳಿಂದಾಗಿ ಭಾರತದಲ್ಲಿ ಯಾವುದೇ ಭಾಷೆಯ ಭಾಷಿಕರು ದ್ವಿ - ಬಹುಭಾಷಿಕರಾಗುವ ಅವಶ್ಯಕತೆಗಳು ಮೊದಲಿಗಿಂತ ಇಂದು ಹೆಚ್ಚಾಗಿವೆ. ಭಾರತದಲ್ಲಿ ದ್ವಿಭಾಷಿಕತೆಯು ಉಂಟಾಗುವುದು ಮುಖ್ಯವಾಗಿ ಎರಡು ವಿಧಗಳಲ್ಲಿ. ಒಂದು ಸಾಮಾಜೀಕರಣದಿಂದ, ಮತ್ತೊಂದು ಶಿಕ್ಷಣದಿಂದ. ಭಾರತದಲ್ಲಿ ಸಾಮಾಜೀಕರಣದಿಂದ ಉಂಟಾಗಿರುವ ದ್ವಿಭಾಷಿಕತೆಯು ಅಧಿಕ ಪ್ರಮಾಣದಲ್ಲಿದೆ. ಇದು ಗಡಿಭಾಗಗಳಲ್ಲಿ ನೆಲೆಸಿರುವ ಭಾಷಿಕರಿಂದಾಗಿ, ವಲಸಿಗರಿಂದಾಗಿ, ವ್ಯಾಪಾರಕ್ಕಾಗಿ, ವೈವಾಹಿಕ ಸಂಬಂಧಗಳಿಂದಾಗಿ, ರಾಜಕೀಯ ಕಾರಣಗಳಿಗಾಗಿ, ಹೀಗೆ ಅನೇಕ ಕಾರಣಗಳಿಗೆ ಉಂಟಾಗುವುದರಿಂದ ಈ ದ್ವಿಭಾಷಿಕತೆ ಹೆಚ್ಚಾಗಿ ಸಾಮಾಜೀಕರಣದಿಂದಲೇ ಉಂಟಾಗುತ್ತದೆ. ಜಾಗತೀಕರಣ ಸಂದರ್ಭದಲ್ಲಿ ಸಮಾಜದಲ್ಲಿ ಉಂಟಾಗುತ್ತಿರುವ ಹಲವು ರೀತಿಯ ಬದಲಾವಣೆಗಳಿಂದಾಗಿ ಭಾಷಿಕರು ಶಿಕ್ಷಣದ ಸಂದರ್ಭಗಳಿಗೆ ಹೆಚ್ಚು ಒಳಗಾಗುತ್ತಿರುವುದರಿಂದ ಶೈಕ್ಷಣಿಕತೆಯಿಂದಾಗಿ ದ್ವಿಭಾಷಿಕರಾಗುವುದು ಇಂದಿನ ದಿನಗಳಲ್ಲಿ ಹೆಚ್ಚಾಗಿ ಕಾಣುವಂತಿದೆ.

ಭಾರತದಲ್ಲಿ ದ್ವಿಭಾಷಿಕತೆಗೆ ಸಂಬಂಧಿಸಿದ ಸಾಮಾಗ್ರಿಗಳನ್ನು ಒಳಗೊಂಡ 1961 ರ ಜನಗಣತಿಯ ವರದಿಯು ಪ್ರಕಟವಾದ ನಂತರ ಭಾರತದಲ್ಲಿ ದ್ವಿ - ಬಹುಭಾಷಿಕತೆಯ ಬಗೆಗೆ ವಿಶೇಷವಾದ ಗಮನವನ್ನು ಹರಿಸಲಾಯಿತು. ಈ ಸಂದರ್ಭದಲ್ಲಿ ಅಖಿಲ ಭಾರತ ಮಟ್ಟದಲ್ಲಿ ನಡೆದ ಖುಬ್‌ಚಂದಾನಿ (1972) ಯವರು ಭಾರತದಲ್ಲಿನ ಸಂಪರ್ಕ ಭಾಷೆಗಳನ್ನು ಕುರಿತಂತೆ ಅಧ್ಯಯನ, ಆಪ್ಟೆ (1974) ಅವರುಗಳು ಮುಂಚೂಣಿಯ ಅಧ್ಯಯನಗಳು ಮುಂದಿನ ದ್ವಿ - ಬಹುಭಾಷಿಕ ಕ್ಷೇತ್ರದಲ್ಲಿನ ಕೆಲಸಗಳಿಗೆ ಉತ್ತಮ ದಾರಿಗಳನ್ನು ತೋರಿವೆ. ಭಾರತದ ದ್ವಿಭಾಷಿಕತೆಯನ್ನು ಕುರಿತಂತೆ ಎಮಿನೋ (1974), ವೆಯೆನ್‌ರಿಖ್ (1957), ಪಂಡಿತ್ (1972), (1977), ಸಾತ್‌ವರ್ಥ್ ಮತ್ತು ಆಪ್ಟೆ (1974), ಕಾಛ್ರು ಮತ್ತು ಶ್ರೀಧರ್ (1978), ಶರ್ಮ ಮತ್ತು ಕುಮಾರ್ (1977), ಕಾಛ್ರು (1979), (1982), ಗುಂಫರ್ಜ್ (1958), (1961), ಶಫಿರೋ ಮತ್ತು ಶಿಫ್‌ಮನ್ (1981), ಖುಬ್‌ಚಂದಾನಿ (1983), ಪಟ್ನಾಯಕ್ (1981), ಇವರುಗಳು ಮಾಡಿರುವ ಚರ್ಚೆಗಳು ಭಾರತದಲ್ಲಿ ದ್ವಿ - ಬಹುಭಾಷಿಕತೆಯನ್ನು ಕುರಿತಂತಹ ಅಧ್ಯಯನಗಳಿಗೆ ಉಪಯುಕ್ತ ಮಾಹಿತಿಯನ್ನು ಒದಗಿಸಿಕೊಡುತ್ತವೆ.

ಭಾರತದ ಸಂದರ್ಭದಲ್ಲಿ ದ್ವಿಭಾಷಿಕತೆಯನ್ನು ಕುರಿತಂತೆ ನಡೆದಿರುವ ಅಧ್ಯಯನಗಳಲ್ಲಿ 1. ಬುಡಕಟ್ಟು ಭಾಷೆಗಳಿಗೆ ಸಂಬಂಧಿಸಿದಂತೆ ನಡೆದ ಅಧ್ಯಯನಗಳು ಬುಡಕಟ್ಟು ಜನರಾಡುವ ಭಾಷೆಗಳಿಗೆ ಲಿಪಿ ಇರುವುದಿಲ್ಲ. ಇದ್ದರೂ ಅವನ್ನು ಆಡಳಿತದಲ್ಲಿ, ಶಿಕ್ಷಣದಲ್ಲಿ ಬಳಸಲು ಆಗುವುದಿಲ್ಲವಾದ್ದರಿಂದ ಬುಡಕಟ್ಟು ಜನಾಂಗಗಳಲ್ಲಿನ ಭಾಷಿಕರು ಬೇರೊಂದು ಭಾಷೆಯನ್ನು ಕಲಿಯುವ ಸಂದರ್ಭದಲ್ಲಿ ಉಂಟಾಗಿರುವ ದ್ವಿಭಾಷಿಕತೆಯನ್ನು ಕುರಿತಂತೆ ಅಧ್ಯಯನಗಳನ್ನು ಮಾಡಲಾಗಿದೆ. 2. ವಲಸಿಗ ಭಾಷಿಕರನ್ನು ಕುರಿತಂತೆ ನಡೆದಿರುವ ಅಧ್ಯಯನಗಳು, ಇವುಗಳಲ್ಲಿ

ಒಂದು ಭಾಷಾ ಸಮುದಾಯದಿಂದ ಹಲವಾರು ಕಾರಣಗಳಿಗಾಗಿ ಅನ್ಯಭಾಷೆಯನ್ನಾಡುವ ಭಾಷಾ ಸಮುದಾಯಗಳಿಗೆ ಭಾಷಿಕರು ಹೋಗಿ ನೆಲೆನಿಂತಾಗ ಎರಡು ಭಿನ್ನಭಾಷೆಗಳ ಸಂಪರ್ಕದಿಂದಾಗಿ ಉಂಟಾಗುವ ದ್ವಿಭಾಷಿಕತೆಯನ್ನು ಕುರಿತಂತ ಕೆಲವು ಅಧ್ಯಯನಗಳಾಗಿವೆ. ಈ ಅಧ್ಯಯನಗಳಲ್ಲಿ ಬಹುಪಾಲು ಅಧ್ಯಯನಗಳು ವಲಸಿಗ ಭಾಷಿಕರಲ್ಲಿನ ಭಾಷಾ ಪಲ್ಲಟ ಮತ್ತು ಭಾಷಾ ಸಂಗೋಪನೆಯ ಪ್ರಕ್ರಿಯೆಗಳನ್ನು ಕುರಿತಂತೆಯೆ ನಡೆದಿವೆ. 3. ಇನ್ನು ಕೆಲವು ಅಧ್ಯಯನಗಳು ಭಾಷಾ ಅಲ್ಪಸಂಖ್ಯಾತರ ಬಗೆಗೆ ನಡೆದಿವೆ. ಉದಾ : ಕರ್ನಾಟಕದಲ್ಲಿ ಕೊಂಕಣಿ ಮತ್ತು ಕೊಡವ, ತುಳು, ಮಹಾರಾಷ್ಟ್ರ, ಗೋವಾ, ಮತ್ತು ಕೇರಳ ರಾಜ್ಯಗಳಲ್ಲಿನ ಭಾಷಾ ಅಲ್ಪಸಂಖ್ಯಾತರನ್ನು ಕುರಿತಾದ ಅಧ್ಯಯನಗಳಾಗಿವೆ. ಭಾರತದಲ್ಲಿನ ತ್ರಿಭಾಷಾ ಸೂತ್ರವನ್ನು ಶಿಕ್ಷಣದ ಸಂದರ್ಭದಲ್ಲಿ ಬಳಸಿರುವುದರಿಂದ ದ್ವಿ - ಬಹುಭಾಷಿಕರಾಗುವ ಸನ್ನಿವೇಶಗಳು ಹೆಚ್ಚಾಗಿದ್ದು, ಇಂಗ್ಲಿಶ್ ಭಾಷೆಯನ್ನು ಕಲಿತು ದ್ವಿಭಾಷಿಕರಾಗುವ ಸಂದರ್ಭಗಳು ನಗರಗಳಲ್ಲೆ ಅಧಿಕವಾಗಿವೆ. ಬುಡಕಟ್ಟು ಜನಾಂಗಗಳಲ್ಲಿ ಮತ್ತು ವಲಸಿಗ ಭಾಷಾ ಅಲ್ಪಸಂಖ್ಯಾತರಲ್ಲಿ ಹೆಚ್ಚು ದ್ವಿಭಾಷಿಕರಾಗಿರುವುದನ್ನು ಅನೇಕ ಅಧ್ಯಯನಗಳು ಮತ್ತು ಭಾರತದ ಜನಗಣತಿಯ ಅಂಕಿ - ಅಂಶಗಳು ತಿಳಿಸುತ್ತವೆ.

ಭಾರತದಲ್ಲಿ ದ್ವಿಭಾಷಾ ಸಂದರ್ಭಗಳನ್ನು ಕುರಿತಂತೆ ನಡೆದ ಅಧ್ಯಯನಗಳಲ್ಲಿ ಗುಂಫರ್ಜ್ (1964a) ರವರು ಹಿಂದಿ ಮತ್ತು ಪಂಜಾಬಿ ಭಾಷೆಯನ್ನು ಕುರಿತಂತಹ ಅಧ್ಯಯನದಲ್ಲಿ ನುಡಿಮಿಶ್ರಣ ಮತ್ತು ನುಡಿಪಲ್ಲಟ ಭಾಷಾ ಪ್ರಕ್ರಿಯೆಗಳನ್ನು ಗುರುತಿಸಲಾಗಿದೆ. ಗುಂಫರ್ಜ್ ಮತ್ತು ವಿಲ್ಸನ್ (1971) ರವರ ಕನ್ನಡ - ಮರಾಠಿ - ಉರ್ದು ಭಾಷಾ ಸನ್ನಿವೇಶಗಳನ್ನು ಕುರಿತ ಅಧ್ಯಯನ ಮಹಾರಾಷ್ಟ್ರದ ಸಾಂಗ್ಲಿ ಜಿಲ್ಲೆಯ ಕುಪ್ಪವಾರ್ ಗ್ರಾಮದಲ್ಲಿನ ಕನ್ನಡ - ಮರಾಠಿ - ಉರ್ದು ಭಾಷಿಕರು ಬಳಸುವ ಭಾಷೆಗಳಿಂದಾಗಿ ಕನ್ನಡ ಭಾಷೆಯ ವ್ಯಾಕರಣ ಹಂತದಲ್ಲಾಗಿರುವ ಪ್ರಭಾವವನ್ನು ಭಿನ್ನ ನೆಲೆಗಳಲ್ಲಿ ಈ ಅಧ್ಯಯನದಲ್ಲಿ ತೋರಿಸಿದ್ದಾರೆ. ದ್ವಿಭಾಷಿಕತೆಯನ್ನು ವಿವರಿಸುವ ಬಹುಪಾಲು ಬರಹಗಳು ಈ ಅಧ್ಯಯನವನ್ನು ಮತ್ತೆ - ಮತ್ತೆ ಉಲ್ಲೇಖಿಸುತ್ತವೆಯಲ್ಲದೆ, ಮುಂದಿನ ದ್ವಿಭಾಷಿಕ ಅಧ್ಯಯನಗಳಿಗೆ ಇದು ಪ್ರೇರಣೆಯನ್ನು ಒದಗಿಸಿದೆ. ಪಿ.ಬಿ.ಪಂಡಿತ್ (1972) ಅವರು ತಮಿಳುನಾಡಿಗೆ ವಲಸೆ ಬಂದು ನೆಲೆಸಿರುವ ಸೌರಾಷ್ಟ್ರೀಯರ ಬಗೆಗಿನ ಅಧ್ಯಯನದಲ್ಲಿ ಸೌರಾಷ್ಟ್ರಿಗಳು ಮಗ್ಗ ವ್ಯಾಪಾರಿಗಳಾಗಿದ್ದು ಇವರು ತಮಿಳು ಭಾಷೆಗೆ ಹೆಚ್ಚಿನ ಪಲ್ಲಟವನ್ನು ಹೊಂದದೆ, ತಮ್ಮ ಭಾಷೆಯನ್ನು ಉಳಿಸಿಕೊಂಡಿರುವುದರ ಬಗೆಗೆ ಇವರ ಅಧ್ಯಯನ ತಿಳಿಸುತ್ತದೆ. ಜೊತೆಗೆ ಮಧುರೈ ಆಸುಪಾಸಿನಲ್ಲಿ ಮಾತನಾಡುವ ಸೌರಾಷ್ಟ್ರ ಭಾಷಿಕರು ತಮಿಳು ವ್ಯಾಕರಣ ಮಾದರಿಗಳನ್ನು ಸ್ವೀಕರಿಸುವುದನ್ನು ವಿಶದೀಕರಿಸುತ್ತವೆ. ಚಿಕ್ಕರಮನೆ (1971) ಅವರು ಮಹಾರಾಷ್ಟ್ರ ಮೈಸೂರು ಗಡಿಭಾಗದಲ್ಲಿ ಕೊಂಕಣಿ - ಕನ್ನಡ - ಮರಾಠಿ ಮನೆಭಾಷೆಯಾಗಿರುವ ಮಕ್ಕಳಲ್ಲಿ ತಮ್ಮ ಭಾಷೆಯಲ್ಲದ ಭಾಷೆಯಲ್ಲಿ ಶಿಕ್ಷಣವನ್ನು ಕಲಿಯುವ ಸಂದರ್ಭಗಳಲ್ಲಿ ಉಂಟಾಗುವ ಸಮಸ್ಯೆಗಳನ್ನು ಕುರಿತು ಅಧ್ಯಯನ ಮಾಡಿದ್ದಾರೆ. ಏಳನೇ ಅಧ್ಯಾಯದಲ್ಲಿ ಇದರ ಬಗೆಗೆ ಹೆಚ್ಚಿನ ವಿವರಗಳನ್ನು ನೀಡಲಾಗಿದೆ. ಯು.ಪಿ.ಉಪಾಧ್ಯಾಯ (1971) 'ಬೀದರ್ ಜಿಲ್ಲೆಯ ಕನ್ನಡ'ವನ್ನು ಕುರಿತಂತಹ

ಸಂಶೋಧನ ಲೇಖನದಲ್ಲಿ ಉರ್ದು ಆಡಳಿತ ಭಾಷೆಯಾಗಿದ್ದ ಬೀದರ್ ಜಿಲ್ಲೆಯಲ್ಲಿ ಕನ್ನಡದ ಮೇಲೆ ಆಗಿರುವ ಉರ್ದುವಿನ ಪ್ರಭಾವವನ್ನು ಕುರಿತಂತೆ ವ್ಯಾಕರಣ ಹಂತದಲ್ಲಿ ಗಮನಿಸಿದ್ದಾರೆ. ಬೀದರ್ ಕನ್ನಡವನ್ನು 'ಫಿಜಿನೈಜ್ಡ್ ಕನ್ನಡ' ಎಂದು ಕರೆದಿದ್ದಾರೆ. ಮಹೇಶ್ ವಿ. ನಾಡಕರ್ಣಿ (1975) ರವರು ಕರ್ನಾಟಕದ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕೊಂಕಣಿ - ಕನ್ನಡ ದ್ವಿಭಾಷಿಕತೆಯನ್ನು ಕುರಿತಂತಹ ಸಂಶೋಧನೆಯಲ್ಲಿ ಲೇಖನದಲ್ಲಿ ಕನ್ನಡ - ಕೊಂಕಣಿ ಸಂಪರ್ಕದಿಂದಾಗಿ ಕೊಂಕಣಿಯಲ್ಲಿನ ಸಾಪೇಕ್ಷ ರಚನೆಗಳು ಕನ್ನಡದಂತೆ ಬದಲಾಗಿರುವುದು ತಿಳಿದುಬರುತ್ತದೆ. ಟಿ.ಎಸ್.ಸತ್ಯನಾಥ್ (1982) ರವರು ದೆಹಲಿಯ ಕನ್ನಡಿಗರನ್ನು ಕುರಿತಂತಹ ಅಧ್ಯಯನದಲ್ಲಿ 'ದೆಹಲಿಯ ಕನ್ನಡಿಗರು ಮನೆ ಮತ್ತು ಒಳಗುಂಪುಗಳಲ್ಲಿ ಕನ್ನಡವನ್ನು, ಸಾಂಸ್ಥಿಕವಲ್ಲದ ಆವರಣಗಳಲ್ಲಿ ಹಿಂದಿಯನ್ನೂ, ಸಂಸ್ಥೆಗಳಲ್ಲಿ ಇಂಗ್ಲಿಶ್‌ನ್ನು ಬಳಸುತ್ತಿದ್ದು, ಹೊಸ ತಲೆಮಾರಿನಲ್ಲಿ ಕನ್ನಡ ಬಳಸುವ ಮನೆ ಆವರಣವೂ ಸಹ ಇಂಗ್ಲಿಶ್ ಭಾಷೆ ಬಳಕೆಯಾಗಲು ಪ್ರಾರಂಭಿಸಿದೆಯಾದ್ದರಿಂದ ದೆಹಲಿಯಲ್ಲಿನ ಕನ್ನಡಿಗರಲ್ಲಾಗುತ್ತಿರುವ ಭಾಷಾ ಪಲ್ಲಟವನ್ನು ಅವರ ಅಧ್ಯಯನ ತಿಳಿಸುತ್ತದೆ.

ಮೊಹಂತಿ (1982 ಎ.ಬಿ.) ಮೊಹಂತಿ ಮತ್ತು ಬಾಬು (1983), ಪಟ್ನಾಯಕ್ ಮತ್ತು ಮೊಹಂತಿ (1984), ಮೊಹಂತಿ ಮತ್ತು ದಾಸ್ (1987) ಇವರುಗಳು ಒರಿಸ್ಸಾದಲ್ಲಿರುವ ಕೊಂಡ ಬುಡಕಟ್ಟಿನ ಬಗೆಗೆ ಮಾಡಿರುವ ಅಧ್ಯಯನದಲ್ಲಿ ಕುಯಿ ಮತ್ತು ಒರಿಯಾ ಮಾತನಾಡುವ ದ್ವಿಭಾಷಿಕ ಮಕ್ಕಳಲ್ಲಿ ಮನಶಾಸ್ತ್ರೀಯ ಅಂಶಗಳು ಸ್ವಭಾಷೆಯನ್ನು ಉಳಿಸಿಕೊಳ್ಳುವಲ್ಲಿ ಕಾರಣವಾದ ಅಂಶವನ್ನು ಹಲವಾರು ಬಗೆಯ ಪರೀಕ್ಷೆಗಳನ್ನು ಕ್ಷೇತ್ರಕಾರ್ಯದಲ್ಲಿ ಬಳಸುವುದರ ಮೂಲಕ ಕಂಡುಕೊಳ್ಳಲಾಗಿದೆ. ಕೃಷ್ಣ ಪರಮೇಶ್ವರ ಭಟ್ಟ (1985) ರವರು ಕೋಲಾರ ಜಿಲ್ಲೆಯ ಕನ್ನಡ - ತೆಲುಗು ದ್ವಿಭಾಷಿಕತೆಯನ್ನು ಕುರಿತಂತೆ ಮಾಡಿರುವ ಅಧ್ಯಯನದಲ್ಲಿ ತೆಲುಗು ಭಾಷೆಯ ಪ್ರಭಾವ ಕನ್ನಡ ಭಾಷೆಯ ಮೇಲಾಗಿರುವುದನ್ನು ವ್ಯಾಕರಣಾಂಶಗಳಲ್ಲಿ ಗುರುತಿಸಿದ್ದಾರೆ. ಹೀಗೆ ಗುರುತಿಸುವಾಗ ಬ್ರಾಹ್ಮಣ - ಬ್ರಾಹ್ಮಣೇತರ, ಪರಿಚಿತ, ಅಪರಿಚಿತ, ವಿದ್ಯಾವಂತ, ಅವಿದ್ಯಾವಂತ ಎಂಬುದಾಗಿ ವಿಭಾಗ ಮಾಡಿಕೊಂಡು ಈ ಸಾಮಾಜಿಕ ಅಂಶಗಳು ಭಾಷಿಕರ ಭಾಷೆಗಳ ಸಮಾವೇಶದಲ್ಲಿ ಉಂಟುಮಾಡುವ ವ್ಯತ್ಯಾಸವನ್ನು ಗುರುತಿಸಿದ್ದಾರೆ. ಭುವನೇಶ್ವರಿ (1986) ಯವರು ತೆಲುಗು - ಮಲೆಯಾಳಂ ದ್ವಿಭಾಷಾ ಸಂದರ್ಭವೊಂದನ್ನು ಕುರಿತಂತೆ ಮಾಡಿರುವ ಅಧ್ಯಯನದಲ್ಲಿ ಕೇರಳದ ಪಾಲ್ಘಾಟ್ ಜಿಲ್ಲೆಗೆ ಅನೇಕ ವರ್ಷಗಳ ಹಿಂದೆ ಆಂಧ್ರದಿಂದ ವಲಸೆ ಬಂದು ನೆಲೆಸಿರುವ ನಾಯ್ಕ ಎನ್ನುವ ತೆಲುಗು ಭಾಷಿಕರಲ್ಲಿ ತೆಲುಗು - ಮಲೆಯಾಳಂ ದ್ವಿಭಾಷಿಕರಾಗಿರುವವರು ತೆಲುಗು ಭಾಷೆಯನ್ನು ತಲೆಮಾರುಗಳಲ್ಲಿ ಇನ್ನೂ ಉಳಿಸಿಕೊಂಡಿರುವ ಅಂಶವನ್ನು ತಿಳಿಸಿದ್ದಾರೆ. ಲಿಂಗ ಮತ್ತು ವಯಸ್ಸು ಸಾಮಾಜಿಕ ಭಿನ್ನಾಂಶ ಭಾಷೆಯನ್ನು ಉಳಿಸಿಕೊಳ್ಳುವಲ್ಲಿ ಪ್ರಮುಖ ಪಾತ್ರವಹಿಸುತ್ತದೆಂಬ ಸಂಗತಿಗಳೂ ಇವರ ಅಧ್ಯಯನದಿಂದ ತಿಳಿದುಬರುತ್ತವೆ. ಜನ್ನಿಫರ್ ಮೇರಿ ಬಯರ್ (1986), ಶ್ಯಾಮ್ ಮೋಹನ್ ಲಾಲ್ (1986), ಆರ್.ಎಸ್.ರಂಗೀಲ (1986), ಸಿ.ಜೆ.ದಾಸ್‌ವನಿ

ಮತ್ತು ಎಸ್.ಪ್ರಾಚನಿ (1978), ಎಚ್.ಆರ್.ಡುವ (1986), ಎಂ.ಟಿ.ರತಿ (1993), ಎಚ್.ಚಾಮರಾಜು (2000), ಇವರುಗಳು ದ್ವಿಭಾಷಾ ಸಂದರ್ಭಗಳನ್ನು ಕುರಿತಂತೆ ಮಾಡಿರುವ ಸಂಶೋಧನೆಗಳು ಉಪಯುಕ್ತ ಮಾಹಿತಿಗಳನ್ನು ಒದಗಿಸಿದ್ದು ವಲಸಿಗ ಭಾಷಿಕರಲ್ಲಾಗುತ್ತಿರುವ ಭಾಷಾ ಪಲ್ಲಟ ಮತ್ತು ಭಾಷಾ ಸಂಗೋಪನೆಯನ್ನು ಕುರಿತಂತೆ ಇವರ ಅಧ್ಯಯನಗಳು ತಿಳಿಸುತ್ತವೆ. ಅಲ್ಲದೆ, ಸಿಂಧಿ ಭಾಷೆಯ ಬಗೆಗೆ ಕುತೂಹಲದ ಸಂಗತಿಯೊಂದನ್ನು ಸಿ.ಜೆ.ದಾಸ್‌ವಾನಿ ಮತ್ತು ಎಸ್.ಪ್ರಾಚನಿಯವರ ಅಧ್ಯಯನ ತಿಳಿಸುತ್ತದೆ. ಇವರುಗಳ ಅಧ್ಯಯನಗಳ ಬಗೆಗೆ ಏಳನೆಯ ಅಧ್ಯಾಯದಲ್ಲಿ ಹೆಚ್ಚಿನ ಮಾಹಿತಿಯನ್ನು ನೀಡಲಾಗಿದೆ.

ಕನ್ನಡದ ಸಂದರ್ಭದಲ್ಲಿ ದ್ವಿಭಾಷಿಕತೆಯನ್ನು ಕುರಿತಂತೆ ಕರ್ನಾಟಕ ಭಾರತಿ ವಿಶೇಷ ಸಂಚಿಕೆಯಲ್ಲಿ ಮಹಾರಾಷ್ಟ್ರದ ಕನ್ನಡ, ಆಂಧ್ರದ ಕನ್ನಡ, ಕೇರಳದ ಕನ್ನಡ, ತಮಿಳುನಾಡಿನ ಕನ್ನಡದ ಬಗೆಗೆ ಕೆ.ಜಿ.ಶಾಸ್ತ್ರಿ, ಚೆ.ರಾಮಸ್ವಾಮಿ, ಬಿ.ರಾಮಚಂದ್ರರಾವ್ ಇವರುಗಳು ಬರೆದಿರುವ ಲೇಖನಗಳು ಕನ್ನಡ - ತೆಲುಗು, ಕನ್ನಡ - ಮರಾಠಿ, ಕನ್ನಡ - ತಮಿಳು, ಕನ್ನಡ - ಮಲೆಯಾಳಂ, ದ್ವಿಭಾಷಾ ಸಂದರ್ಭಗಳ ಬಗೆಗೆ ಕೆಲವು ಮಾಹಿತಿಯನ್ನು ತಿಳಿಸುತ್ತವೆ. ಎಸ್.ಎಸ್.ಅಂಗಡಿ (2000) ಕನ್ನಡ - ಮರಾಠಿ ದ್ವಿಭಾಷಿಕತೆಯನ್ನು ಕುರಿತಂತೆ ಬರೆದಿರುವ ಲೇಖನದಲ್ಲಿ ಕನ್ನಡ - ಮರಾಠಿ ದ್ವಿಭಾಷಿಕತೆಯ ಸ್ಥೂಲ ಸ್ವರೂಪವನ್ನು ಇದರಲ್ಲಿ ನೀಡಿದ್ದಾರೆ. ಆಂಧ್ರ - ಕರ್ನಾಟಕ ಸರಹದ್ದಿನಲ್ಲಿ ಕನ್ನಡ ಬಿ.ರಾಮಚಂದ್ರರಾವ್ ಅವರ ಲೇಖನದಲ್ಲಿ ಕನ್ನಡ - ತೆಲುಗು ದ್ವಿಭಾಷಾ ಸಂದರ್ಭದ ಬಗೆಗೆ ಸ್ಥೂಲವಾದ ವಿವರಗಳನ್ನು ಕಾಣಬಹುದಾಗಿದೆ.

ದ್ವಿ - ಬಹುಭಾಷಿಕತೆಯನ್ನು ಕುರಿತಂತೆ ಭಾರತದ ಸಂದರ್ಭದಲ್ಲಿ ನಡೆದಿರುವ ಅಧ್ಯಯನಗಳ ಪ್ರಮಾಣ ಕಡಿಮೆ. ಇಂದಿನ ದಿನಗಳಲ್ಲಿ ಸಮಾಜದಲ್ಲಿನ ಹಲವು ಬದಲಾವಣೆಗಳಿಂದಾಗಿ ಭಾಷಿಕರಲ್ಲಿ ಉಂಟಾಗಿರುವ ಜೀವನಾವಶ್ಯಕತೆಗಳಿಂದಾಗಿ ಒಂದಕ್ಕಿಂತ ಹೆಚ್ಚು ಭಾಷೆಗಳನ್ನು ಕಲಿತು ಬಳಸುವ ಸಂದರ್ಭಗಳು ಹೆಚ್ಚುತ್ತಿದೆ. ಇದರಿಂದಾಗಿ ದ್ವಿಭಾಷಾ ಸಂದರ್ಭಗಳ ಬಗೆಗೆ ಅಧ್ಯಯನ ಎಂದಿಗಿಂತಲೂ ಇಂದು ಅಗತ್ಯವಿದೆ. ಭಾರತದಲ್ಲಿ ದ್ವಿಭಾಷಿಕತೆಯ ಅಧ್ಯಯನಗಳು ಹಲವು ರೀತಿಯಲ್ಲಿ ಅವಶ್ಯವಾಗಿವೆ.

## ದ್ವಿಭಾಷಾ ಪರಿಸರಗಳು ಮತ್ತು ಪರಿಣಾಮಗಳು

ಒಂದು ಭಾಷೆಯನ್ನು ಆಡುವ ಜನರು ಒಂದಕ್ಕಿಂತ ಹೆಚ್ಚು ಸಮುದಾಯಗಳಲ್ಲಿ, ಭೂಪ್ರದೇಶಗಳಲ್ಲಿ ಕಾಣಸಿಗುವಂತೆ ಒಂದೇ ಸಮುದಾಯದಲ್ಲಿ ಒಂದಕ್ಕಿಂತ ಹೆಚ್ಚು ಭಾಷೆಗಳು ಬಳಕೆಯಾಗುತ್ತಿರುವುದೂ ಕಂಡುಬರುತ್ತದೆ. ರಾಜಕೀಯ ಕಾರಣಗಳಿಂದ ನಡೆಯುವ ಆಡಳಿತ ವಲಯ ವಿಸ್ತರಣೆಗಳು, ಸಮುದಾಯಗಳ ಜನರು ಬೇರೆ ಬೇರೆ

ಭೂಪ್ರದೇಶಗಳಿಗೆ ಹೋಗಿ ನೆಲಸುವುದು. ವಲಸೆಗಳು ಇತ್ಯಾದಿಗಳಿಂದಾಗಿ ಭಾಷಾ ಸಮುದಾಯಗಳು ಬೆರೆಯುವುದು ಅನಿವಾರ್ಯವಾಗುತ್ತದೆ. - ಕೆ.ವಿ.ನಾರಾಯಣ (1998 : 01). ಇಂತಹ ಸಂದರ್ಭಗಳಲ್ಲಿ ದ್ವಿಭಾಷಿಕತೆ ಉಂಟಾಗುತ್ತದೆ. ಅವಶ್ಯಕತೆಯಿಂದಲೋ ಒತ್ತಾಯಗಳಿಂದಲೋ ಭಾಷೆಗಳನ್ನು ಕಲಿತು ಬಳಸಬೇಕಾದ ಪರಿಸ್ಥಿತಿಗಳಿಂದಾಗಿ ಉಂಟಾದ ದ್ವಿಭಾಷಾ ಪರಿಸರಗಳು ಜಗತ್ತಿನಾದ್ಯಾಂತ ಸ್ವರೂಪದಲ್ಲಿ, ಪರಿಣಾಮದಲ್ಲಿ, ಕಲಿಕೆ ಬಳಕೆಯ ನೆಲೆಗಳಲ್ಲಿ ವಿಭಿನ್ನವಾಗಿ ಕಾಣುವಂತಿದೆ. ಇಂಥಹ ದ್ವಿಭಾಷಾ ಪರಿಸರಗಳನ್ನು ಕುರಿತಂಥ ಅಧ್ಯಯನಗಳು ಭಾಷಾ ಶಾಸ್ತ್ರಜ್ಞರ ಆಸಕ್ತಿಯನ್ನು ಹೆಚ್ಚಿಸಿದೆಯಲ್ಲದೆ, ಇಂಥ ದ್ವಿಭಾಷಾ ಪರಿಸರಗಳಿಂದ ಉಂಟಾಗುವ ಭಾಷಾ ಸನ್ನಿವೇಶಗಳಲ್ಲಿ ಕ್ರಿಯೋಲ್, ಫಿಜಿನ್, ಡೈಗ್ಲಾಸಿಯಾ, ನುಡಿಮಿಶ್ರಣ, ನುಡಿಪಲ್ಲಟ, ಭಾಷಾಶಾಸ್ತ್ರಜ್ಞಗೆ ಹೆಚ್ಚಿನ ಕುತೂಹಲಕಾರಿ ಅಧ್ಯಯನಗಳಿಗೆ ದಾರಿಮಾಡಿಕೊಟ್ಟಿದೆ. ಜೊತೆಗೆ ಮನಶಾಸ್ತ್ರಜ್ಞರು, ಶಿಕ್ಷಣ ತಜ್ಞರು, ಸಮಾಜ ಶಾಸ್ತ್ರಜ್ಞರು, ಇಂಥಹ ದ್ವಿಭಾಷಾ ಪರಿಸರಗಳನ್ನು ನೋಡುವ ರೀತಿಯಲ್ಲೂ ದ್ವಿಭಾಷಾ ಸಂದರ್ಭಗಳ ಸ್ವರೂಪ, ಪರಿಣಾಮಗಳಲ್ಲಿ ಭಿನ್ನವಾಗಿವೆ.

ಅನೇಕ ಸಮಾಜಗಳಲ್ಲಿ ದ್ವಿಭಾಷಾ ಪರಿಸರವೆಂಬುದು ಮನೆಭಾಷೆಯ ಸ್ಥಾನಪಲ್ಲಟದ ಪೂರ್ವ ಒಂದು ಅವಸ್ಥೆ. ಆದರೆ ಕೆಲವು ಸಮಾಜಗಳಲ್ಲಿ ಹೀಗಾಗದೆ ಮೂಲತಃ ಯಾರ ಮನೆ ಭಾಷೆಯೂ ಅಲ್ಲದೆ ಪ್ರತಿಷ್ಠಿತ ಅಪ್ರತಿಷ್ಠಿತರ ಭಾಷೆಗಳ ಕಸಿಯಿಂದಾಗಿ ಸಂಪರ್ಕ ಭಾಷೆಯೊಂದು ನಿರ್ಮಾಣವಾಗಿ ಅಂತರ್ ಸಮಾಜಗಳ ಭಾಷೆಯಾಗಿ ಬಳಕೆಯಾಗುತ್ತಿರುತ್ತದೆ. ಎರಡು ಭಿನ್ನಭಾಷೆಗಳು ಸಂಪರ್ಕಕ್ಕೆ ಬಂದಾಗ ಆದಾನ - ಪ್ರಧಾನ ನಡೆಯುತ್ತದೆ. ಇದು ಎಲ್ಲಾ ಭಾಷೆಗಳಲ್ಲಿಯೂ ಒಂದೇ ಪ್ರಮಾಣದಲ್ಲಿ ಇರುವುದಿಲ್ಲ. ಹಲವಾರು ಕಾರಣಗಳಿಂದಾಗಿ ಆದಾನ - ಪ್ರಧಾನದ ಪ್ರಮಾಣ ಹೆಚ್ಚು ಕಡಿಮೆಯಾಗಿರುತ್ತದೆ. ಇದು ಸಹಜವಾಗಿ ನಡೆಯುವಂಥದ್ದು. ಕೆಲವೊಂದು ಭಿನ್ನ ಸನ್ನಿವೇಶಗಳಲ್ಲಿ ಒಂದು ಭಾಷೆ ಮತ್ತೊಂದು ಭಾಷೆಯಿಂದ ಹೆಚ್ಚಿನ ಸ್ವೀಕರಣವನ್ನು ಮಾಡಿಕೊಂಡಿರುತ್ತದೆ. ಕೆಲವೊಂದು ವಿಶಿಷ್ಟ ಸನ್ನಿವೇಶಗಳಲ್ಲಿ ಭಾಷೆಗಳು ಕೃತಕವಾಗಿ ನಿರ್ಮಾಣವಾಗುತ್ತವೆ. ಇಂಥ ಭಾಷೆಗಳನ್ನು ವ್ಯವಹಾರದ ಉದ್ದೇಶಕ್ಕಾಗಿ ನಿರ್ಮಿಸಬಹುದು. ಅಭ್ಯಾಸ ಪ್ರವೃತ್ತಿಗಾಗಿ, ಸಾರ್ವತ್ರಿಕ ಬಳಕೆಗಾಗಿ ಒಂದು ಸಾಮಾನ್ಯ ಭಾಷೆಯ ಅವಶ್ಯಕತೆಯನ್ನು ಪೂರೈಸಲು ಭಾಷೆಯನ್ನು ನಿರ್ಮಿಸಬಹುದು. ಹೀಗೆ ಕೃತಕವಾಗಿ ನಿರ್ಮಿಸಿದ ಭಾಷೆಗಳನ್ನು ವ್ಯವಹಾರದ ಭಾಷೆಗಳು ಅಥವಾ ಫಿಜಿನ್ ಎಂದೂ ಕರೆಯಲಾಗಿದೆ. ಭಿನ್ನ ಭಾಷೆಗಳನ್ನಾಡುವ ವ್ಯಾಪಾರಿ ಮತ್ತು ಕೊಳ್ಳುವವರ ನಡುವೆ ಪರಸ್ಪರ ಇಬ್ಬರಿಗೂ ಭಾಷೆ ಅರ್ಥವಾಗದ ಪರಿಸ್ಥಿತಿಯಲ್ಲಿ ಆ ಸಂದರ್ಭದ ಪರಿಮಿತಿ ಬಳಕೆಗಾಗಿ ಒಂದು ಹೊಸ ಭಾಷಾ ರೂಪವೇ ನಿರ್ಮಾಣವಾಗುತ್ತದೆ. ಈ ಉದ್ದೇಶಕ್ಕಾಗಿ ನಿರ್ಮಾಣಗೊಂಡ ಭಾಷೆಗಳನ್ನು ವ್ಯವಹಾರ ಭಾಷೆಗಳೆಂದು ಕರೆಯಲಾಗಿದೆ. ಇವು ಸಾಮಾಜಿಕ ಸಂಪರ್ಕದ ಒಂದು ವಿಶಿಷ್ಟ ಸನ್ನಿವೇಶಕ್ಕೆ ಸಹಾಯಕವಾಗುವುದರಿಂದ ಅದಕ್ಕೆ ಸಹಾಯಕ ಅಥವಾ ಸಂಪರ್ಕ ಭಾಷೆಗಳೆಂದು ಅಥವಾ ಫಿಜಿನ್ ಭಾಷೆ ಎಂದೂ ಕರೆಯುತ್ತಾರೆ.

ಸಾಕಷ್ಟು ಮೊಟಕಾದ ಭಾಷಿಕ ರಚನೆ ಮತ್ತು ಶಬ್ದಕೋಶವನ್ನುಳ್ಳ ಮತ್ತು ಯಾರ ಮನೆಭಾಷೆಯೂ ಆಗಿರದ ಭಾಷೆ ವ್ಯವಹಾರ ಭಾಷೆ. ಎರಡು ಭಾಷೆಗಳಲ್ಲಿ ಒಂದು ವ್ಯಾಪಾರಿಯ ಭಾಷೆ, ಇನ್ನೊಂದು ಗ್ರಾಹಕನ ಭಾಷೆ. ಈ ಎರಡೂ ಅಂಶಗಳು ಕೂಡಿ ವ್ಯಾಪಾರ ಉದ್ದೇಶಕ್ಕಾಗಿ ಮೂರನೆಯ ಭಾಷಾ ರೂಪ ನಿರ್ಮಾಣವಾಗುತ್ತದೆ. ಇದು ಎರಡರ ಮಿಶ್ರಣದ ಫಲವಾದರೂ, ಎರಡಕ್ಕಿಂತ ಭಿನ್ನವಾಗಿರುತ್ತದೆ. ಈ ರೀತಿ ಎರಡು ಭಾಷೆಗಳ ಸ್ವೀಕರಣದಿಂದ ನಿರ್ಮಾಣವಾದ ಭಾಷೆ ಯಾವ ಭಾಷೆಯಿಂದ ಹೆಚ್ಚು, ಯಾವ ಭಾಷೆಯಿಂದ ಕಡಿಮೆ ಸ್ವೀಕರಣವಾಗಿದೆ ಎಂದು ಹೇಳುವುದು ಕಠಿಣವಾದರೂ ಒಂದು ಸಾಮಾನ್ಯ ಸಂಪರ್ಕ ಭಾಷೆಯಿಲ್ಲದ ಭಾಷಾ ಗುಂಪುಗಳ ನಡುವಿನ ಅಲ್ಪ ಸಂಪರ್ಕದಿಂದ ಈ ವ್ಯವಹಾರ ಭಾಷೆಗಳು ನಿರ್ಮಾಣವಾಗುತ್ತವೆ. ಈ ಕಾರಣಕ್ಕಾಗಿ ಈ ಭಾಷೆಯನ್ನು ಮಾತನಾಡುವ ಒಂದು ಭಾಷಾ ಗುಂಪು ಈ ವ್ಯವಹಾರ ಭಾಷೆಗೆ ಇರುವುದು ಅಂದರೆ ಅದು ಯಾವ ಭಾಷಾ ಗುಂಪಿನ ಮನೆಭಾಷೆಯೂ ಆಗಿರುವುದಿಲ್ಲ. ಇನ್ನು ಅಲ್ಪ ಸಂಪರ್ಕ ಅನೇಕ ರೀತಿಯಿರಬಹುದು. ಒಂದು ಕೇವಲ ವ್ಯಾಪಾರದ ಉದ್ದೇಶವಿರಬಹುದು. ಇಂಗ್ಲಿಶ್ ವ್ಯಾಪಾರಿಯೊಬ್ಬ ಚೀನಾಕ್ಕೆ ಹೋಗಿ ಪ್ರಥಮ ಸಲ ವ್ಯಾಪಾರ ಮಾಡಬೇಕಾದಾಗ ಆ ಒಂದು ಉದ್ದೇಶದಿಂದ ಒಂದು ವ್ಯಾಪಾರಿ ಭಾಷೆ ಹುಟ್ಟಿಕೊಂಡಿತು. ಇದಕ್ಕೆ ಇಂಗ್ಲಿಶ್ ಚೀನೀ ವ್ಯಾಪಾರಿ ಭಾಷೆಯೆಂದು ಹೆಸರು. ಯಾವುದೇ ವ್ಯಾಪಾರಿ ಭಾಷೆ ಎರಡು ಭಾಷೆಗಳ ಮಿಶ್ರಣವಾಗಿರುವುದರಿಂದ ಎರಡರ ಹೆಸರೂ ಅದಕ್ಕೆ ಲಭಿಸುತ್ತದೆ. ಉದಾ: ಇಂಗ್ಲಿಶ್ ಬಂಟು ವ್ಯಾಪಾರಿ ಭಾಷೆ ಇತ್ಯಾದಿ. ಪ್ರವಾಸಿ ಮತ್ತು ನಿರ್ದೇಶಕ ಇವರ ನಡುವಿನ ಭಾಷೆಯೂ ಇಲ್ಲಿ ಅಡಕವಾಗುತ್ತದೆ. ಪ್ರಸ್ತುತ ವ್ಯವಹಾರಕ್ಕಾಗಿ ಬೇಕಾದ ಭಾಷೆ ಇಲ್ಲಿ ನಿರ್ಮಾಣವಾಗುತ್ತದೆ. ಇದರಲ್ಲಿ ತೋಟಗಳಲ್ಲಿ ದುಡಿಯುವ ಕೂಲಿ ಮತ್ತು ಒಡೆಯನ ಸಂಬಂಧವು ಒಳಗೊಳ್ಳುತ್ತದೆ. ಅಮೇರಿಕಾ ಮತ್ತು ಆಫ್ರಿಕಾ ಮುಂತಾದ ಕಡೆಗಳಲ್ಲಿ ಕಂಡುಬರುವ ತೋಟಗಳಲ್ಲಿ ಕೂಲಿ ಮತ್ತು ಒಡೆಯರ ನಡುವಿನ ಸಂಪರ್ಕಕ್ಕಾಗಿ ಒಂದು ಸಾಮಾನ್ಯ ಭಾಷೆ ನಿರ್ಮಾಣವಾಗಿರುತ್ತದೆ. ಇದೇ ರೀತಿ ಭಿನ್ನ ಭಾಷೆಗಳನ್ನಾಡುವ ಭಾರತದಂಥ ದೇಶದಲ್ಲಿ ದೇಶದ ಒಂದು ಮೂಲೆಯಿಂದ ಇನ್ನೊಂದು ಮೂಲೆಗೆ ಪ್ರವಾಸ ಮಾಡುವಾಗ ಒಂದು ಸಂಪರ್ಕ ಭಾಷೆ ಬೇಕಾಗುತ್ತದೆ. ಇಂಥ ಪ್ರಸಂಗಗಳಲ್ಲಿ ಸಾಮಾನ್ಯವಾಗಿ ಹಿಂದಿಯೇ ಸಂಪರ್ಕ ಭಾಷೆಯಾದರೂ ಅದು ಸುಲಭಗೊಳಿಸಲ್ಪಟ್ಟಿರುತ್ತದೆ. ಉದಾ: ಕಹಾ ಜಾತಾ ಹೈ ಸಾಬ್? ಏಕ ರೂಪಯಾ ಲೇತಾ ಹೈ? ಆಪ್ ಕ್ಯಾ ದೇತಾ ಹೈ? ಮುಂತಾದವು ಇಂಥ ಉದಾಹರಣೆಗಳನ್ನು ನೋಡಿದರೆ ಈ ವ್ಯವಹಾರ ಭಾಷೆಗಳು ಉತ್ತಮ ಅಧಮರ ನಡುವಿನ ವ್ಯವಹಾರಕ್ಕಾಗಿ ನಿರ್ಮಾಣವಾದ ಭಾಷೆಗಳು ಎಂಬ ಅಭಿಪ್ರಾಯವನ್ನು ಅಲ್ಲಗಳೆಯಬೇಕಾಗುತ್ತದೆ. ಮೇಲಿನ ಹಿಂದಿ ಉದಾಹರಣೆಗಳನ್ನು ಅವಲೋಕಿಸಿದರೆ ಆ ಕ್ಷಣಕ್ಕೆ ಬೇಕಾದ ಒಂದು ರೂಪ ಆ ಕ್ಷಣದಲ್ಲಿಯೇ ಸಿದ್ಧಗೊಳ್ಳುತ್ತವೆ. ಅದಕ್ಕಾಗಿ ಈ ವ್ಯವಹಾರ ಭಾಷೆಗಳಿಗೆ ಕನಿಷ್ಠ ಭಾಷೆಗಳೆಂದೂ ಕರೆಯುತ್ತಾರೆ.

ವ್ಯವಹಾರ ಭಾಷೆಗಳು ಯಾರ ಮನೆಭಾಷೆಯೂ ಅಲ್ಲ. ಆದರೆ ಈ ವ್ಯವಹಾರ ಭಾಷೆಗಳು ಕಾಲಾಂತರದಲ್ಲಿ ಕೆಲವರ ಮನೆಭಾಷೆಯಾಗಬಹುದು. ಹೀಗೆ ವ್ಯವಹಾರ ಭಾಷೆ ಯಾವುದೇ ಗುಂಪಿನ ಮನೆಭಾಷೆಯಾಗಿ ಬಳಕೆಯಾಗಲು ಪ್ರಾರಂಭವಾಯಿತೆಂದರೆ ಅದಕ್ಕೆ ವ್ಯವಹಾರ ಭಾಷೆ ಎಂದು ಕರೆಯದೆ ಕ್ರಿಯೋಲ್ ಎಂದು ಕರೆಯಲಾಗಿದೆ. ಒಂದು ವಿಶಿಷ್ಟ ವ್ಯವಹಾರಕ್ಕಾಗಿ, ಉದಾಹರಣೆಗೆ ಕಾಫಿ ತೋಟಗಳಲ್ಲಿ ಅಥವಾ ಇನ್ನೆಲ್ಲೋ ಕೆಲಸಕ್ಕಾಗಿ ಹೋದ ಕೂಲಿಗಳ ಸಲುವಾಗಿ ನಿರ್ಮಾಣಗೊಂಡ ವ್ಯವಹಾರ ಭಾಷೆಯನ್ನು ಬಳಸುವ ಜನ ಅಲ್ಲಿಯೇ ಹತ್ತಾರು ವರ್ಷ ಇದ್ದು, ಮಕ್ಕಳನ್ನು ಪಡೆಯುತ್ತಾರೆ. ಈ ಮಕ್ಕಳು ಬೆಳೆದಂತೆ ಆ ತಂದೆ ತಾಯಿಗಳು ಅಲ್ಲಿ ಬಳಸುವ ಭಾಷೆಯನ್ನು ದಿನನಿತ್ಯ ಬಳಸಲಾರಂಭಿಸುತ್ತಾರೆ. ಅಂದರೆ ಆ ವ್ಯವಹಾರ ಭಾಷೆ ಆ ಮಕ್ಕಳಿಗೆ ಮನೆಭಾಷೆ ಇದನ್ನು ಕ್ರಿಯೋಲ್ ಎಂದು ಕರೆಯಲಾಗಿದೆ.



ವ್ಯವಹಾರ ಭಾಷೆ ಕ್ರಿಯೋಲ್ ಆಗಿ ಬಳಕೆಯಾಗಹತ್ತಿತೆಂದರೆ ವ್ಯವಹಾರ ಭಾಷೆಯ ಪರಿಮಿತ ಸ್ವರೂಪ ಕಡಿಮೆಯಾಗುತ್ತ ಹೋಗುತ್ತದೆ. ಯಾಕೆಂದರೆ ಕ್ರಿಯೋಲ್‌ನ ಅವಶ್ಯಕತೆಗಳು ವ್ಯವಹಾರ ಭಾಷೆಯ ಅವಶ್ಯಕತೆಗಳಿಗಿಂತ ಹೆಚ್ಚಾಗಿ ಇರುತ್ತವೆ. ಅದರ ರಚನೆಗಳು ಬೆಳೆಯುತ್ತವೆ. ಶಬ್ದಕೋಶವೂ ಬೆಳೆಯುತ್ತದೆ. ವ್ಯವಹಾರ ಭಾಷೆ ಕ್ರಿಯೋಲ್ ಆಗಿ ಮಾರ್ಪಟ್ಟ ಮೇಲೆ, ಅದರ ಸಾಧನ ಸಂಪತ್ತು ವಿಸ್ತಾರಗೊಳ್ಳುತ್ತದೆ. ಇದು ಆಂತರಿಕ ಹಾಗೂ ಬಾಹ್ಯ ಎರಡೂ ಘಟ್ಟಗಳಲ್ಲಿ ನಡೆಯುತ್ತದೆ. ಈ ರೀತಿ ಅದನ್ನು ಬಳಸುವ ಭಾಷಾ ಗುಂಪಿನ ಎಲ್ಲ ಅವಶ್ಯಕತೆಗಳನ್ನು ಪೂರೈಸಲು ಉಳಿದ ಭಾಷೆಗಳಂತೆಯೇ ಇದೂ ತನ್ನ ರಚನಾತ್ಮಕ ಮತ್ತು ಶಾಬ್ದಿಕ ಸಾಮಗ್ರಿಯನ್ನು ಹೆಚ್ಚಿಸಿಕೊಂಡು ಪರಿಣಾಮಕಾರಿ ಸಂಪರ್ಕ ಸಾಧನವಾಗುತ್ತವೆ. ಆಕರ ಭಾಷೆಯಿಂದ ಈ ಸ್ವೀಕರಣ ಹೆಚ್ಚುತ್ತ ಹೋಗುತ್ತದೆ. ಹಾಗೆಯೇ ಮೂಲಭಾಷೆಯ ರೂಪ ಬದಲಾಗುತ್ತ ಹೋಗುತ್ತದೆ. ಅದೇ ಈ ರೀತಿಯ ಬಾಹ್ಯ ಸ್ವೀಕರಣ ಹೆಚ್ಚಾಗದಿದ್ದರೆ ಕ್ರಿಯೋಲ್ ಆದ ಮೇಲೆಯೂ ವ್ಯವಹಾರ ಭಾಷೆಯ ರೂಪ ಹಾಗೆಯೇ ಮುಂದುವರಿಯುತ್ತದೆ.



ವ್ಯವಹಾರ ಭಾಷೆ ಹಾಗೂ ಕ್ರಿಯೋಲ್‌ಗಳಲ್ಲಿಯ ಮುಖ್ಯ ವ್ಯತ್ಯಾಸ ಶಬ್ದ ಸಂಪತ್ತಿಗೆ ಸಂಬಂಧಿಸಿದೆ. ವ್ಯವಹಾರ ಭಾಷೆ ಕೆಲವು ಜನರಿಂದ ವಿಶಿಷ್ಟ ಸಂಪರ್ಕಕ್ಕಾಗಿ ಸಹಾಯಕ ಭಾಷೆಯಾಗಿ ಬಳಕೆಯಾಗುವಂಥದು. ಉಳಿದ ಸಾಮಾನ್ಯ ಸನ್ನಿವೇಶಗಳಲ್ಲಿ ತಮ್ಮ ಮನೆಭಾಷೆಯ ಬಳಕೆಯಾಗುತ್ತದೆ. ಈ ಕಾರಣಕ್ಕಾಗಿ ವ್ಯವಹಾರ ಭಾಷೆಯಲ್ಲಿ ಕೆಲವೇ ಶಬ್ದಗಳು ಸಾಕು. ಆದರೆ ಮನೆಭಾಷೆಯೂ ಆಗಿರುವ ಕ್ರಿಯೋಲ್‌ವು ಎರಡರ ಕಾರ್ಯವನ್ನೂ ಮಾಡಬೇಕಾಗುತ್ತದೆ. ಅದಕ್ಕಾಗಿ ಅಲ್ಲಿ ಹೆಚ್ಚು ಶಬ್ದಗಳು ಇರಬೇಕಾಗುತ್ತವೆ. ಉದಾಹರಣೆಗೆ ಡಚ್‌ಗಿನಿಯಾದ ಕ್ರಿಯೋಲ್‌ನಲ್ಲಿ ಕೇವಲ 1100 ಧಾತು ಶಬ್ದಗಳಿವೆ. ಆದರೆ ಪೋರ್ಚುಗೀಸ್ ಗಿನಿಯಾದಲ್ಲಿರುವ ಕ್ರಿಯೋಲ್‌ನಲ್ಲಿ 5240 ಶಬ್ದಗಳಿವೆ. ಜಗತ್ತಿನ ವಿವಿಧ ಭಾಗಗಳಲ್ಲಿ ಅನೇಕ ಕ್ರಿಯೋಲ್‌ಗಳು ನಿರ್ಮಾಣಗೊಂಡಿವೆ. ನಿಯೋ ಮೆಲಾನೇಷಿಯನ್ ಕ್ರಿಯೋಲ್, ಡಚ್

ಗಿನಿಯಾದಲ್ಲಿರುವ ಇಂಗ್ಲಿಶ್ ಆಧರಿತ ಕ್ರಿಯೋಲ್, ಹೈತಿಕ್ರಿಯೋಲ್, ಅಮೇರಿಕೆಯಲ್ಲಿರುವ ಚಿನೂಕ್ ಜಾರ್ಗನ್ ಕ್ರಿಯೋಲ್ ಮುಂತಾದ ಕ್ರಿಯೋಲ್‌ಗಳಿವೆ. ಆದರೂ ವ್ಯವಹಾರ ಭಾಷೆ ಕ್ರಿಯೋಲ್‌ವಾಗುವುದು ಅತೀ ವಿರಳ ಘಟನೆಯೆ.

ಪಶ್ಚಿಮದ ರಾಷ್ಟ್ರಗಳಲ್ಲಿ 1950-80 ರ ದಶಕಗಳಲ್ಲಿ ದ್ವಿಭಾಷಿಕ ಸಂದರ್ಭಗಳ ಬಗೆಗಿನ ಅಧ್ಯಯನಗಳು ಹೆಚ್ಚಾದವು. ವಲಸಿಗ ಅಲ್ಪಸಂಖ್ಯಾತ, ಸ್ಥಳೀಯ ಅಲ್ಪಸಂಖ್ಯಾತ ವಿವಿಧ ಸಮಾಜೋಭಾಷಿಕ ಸ್ಥಿತಿ - ಗತಿಗಳನ್ನು ಕುರಿತಂತೆ ಹಲವು ಅಧ್ಯಯನಗಳಾದವು. ಇವು ಅಂತರ್ ಶಿಸ್ತೀಯವಾಗಿದ್ದು ವಿವಿಧ ಸಮಾಜ ವಿಜ್ಞಾನ ಶಾಖೆಗಳಿಂದ ಪ್ರಭಾವಿತವಾಗಿದ್ದವು. ಈ ಅಧ್ಯಯನಗಳಲ್ಲಿ ಪ್ರಮುಖವಾಗಿ ಬಳಸಿದ ಪರಿಕಲ್ಪನೆ 'ದ್ವಿಸ್ತರತೆ' (ಡೈಗ್ಲಾಸಿಯಾ) ಇದನ್ನು ಮೊದಲಿಗೆ ಪರಿಚಯಿಸಿದವರು 1959 ರಲ್ಲಿ ಫರ್ಗ್ಯೂಸನ್. ಒಂದು ಭಾಷಿಕ ಸಮುದಾಯದಲ್ಲಿನ ಒಂದು ಭಾಷೆಯ ಎರಡು ಪ್ರಭೇದಗಳಲ್ಲಿನ ಕಾರ್ಯ ವ್ಯತ್ಯಾಸವನ್ನು ಸೂಚಿಸಲು ಈ ಪರಿಕಲ್ಪನೆಯನ್ನು ಬಳಸಿದ್ದಾರೆ. ಅರಾಬಿಕ್ ಮತ್ತು ಗ್ರೀಕ್ ಭಾಷೆಗಳ ಅಧ್ಯಯನ ಸಂದರ್ಭದಲ್ಲಿ ಔಪಚಾರಿಕ ಸಂದರ್ಭಗಳಲ್ಲಿ ಉನ್ನತ ಭಾಷೆ, ಅನೌಪಚಾರಿಕ ಸಂದರ್ಭಗಳಲ್ಲಿ ಕೆಳ ಪ್ರಭೇದದ ಭಾಷೆ ಬಳಕೆಯಾಗುವುದನ್ನು ಡೈಗ್ಲಾಸಿಯಾ ಎಂದು ಕರೆದಿದ್ದಾರೆ. 1967 ರ ಅಧ್ಯಯನದಲ್ಲಿ ಜೋಷುವ ಫಿಶ್‌ಮನ್ ಈ ಪರಿಕಲ್ಪನೆಯನ್ನು ಇನ್ನಷ್ಟು ವಿಸ್ತರಿಸಿ ಭಾಷಾ ಬಳಕೆಯ ಆಧಾರದ ಮೇಲೆ ವಿವಿಧ ಸಂವಹನ ಕ್ರಿಯೆಗಳಿಗೆ ಭಿನ್ನವಾದ ಎರಡು ಭಾಷೆಗಳನ್ನು ಸೂಚಿಸುವುದಕ್ಕೂ ಈ ಪರಿಕಲ್ಪನೆಯನ್ನು ಬಳಸುತ್ತಾರೆ. ಇದೊಂದು ಸಾಮಾಜಿಕ ಪ್ರಕ್ರಿಯೆ ಎಂದು ಲಕ್ಷಣೀಕರಿಸಿದ್ದಾರೆ. 1970-80 ದಶಕದಲ್ಲಿನ ದ್ವಿಭಾಷಿಕತೆಯ ಅಧ್ಯಯನಗಳಲ್ಲಿ ಫಿಶ್‌ಮನ್‌ನ ಡೈಗ್ಲಾಸಿಯಾ ಮಾದರಿ ತುಂಬಾ ಪ್ರಭಾವಿತವಾಗಿದೆ. ಫಿಶ್‌ಮನ್ ಹೇಳಿರುವ ಈ ಪರಿಕಲ್ಪನೆಯು 10 ನೇ ಶತಮಾನದಲ್ಲಿ ಕನ್ನಡ ಮತ್ತು ಸಂಸ್ಕೃತ ಭಾಷೆಗಳ ಸಂದರ್ಭದಲ್ಲಿ ಈ ಸನ್ನಿವೇಶವನ್ನು ಗುರುತಿಸಬಹುದಾಗಿದೆ. ಆಗ ಸಂಸ್ಕೃತವು ಮೇಲುಸ್ತರದ ಭಾಷೆಯೆನಿಸಿದ್ದರೆ, ಕನ್ನಡವು ಕೆಳಸ್ತರದ ಭಾಷೆಯಾಗಿತ್ತು.

ಎರಡನೆಯ ಜಾಗತಿಕ ಮಹಾಯುದ್ಧಾನಂತರದಲ್ಲಿ ದ್ವಿಭಾಷಿಕತೆ ಮತ್ತು ದ್ವಿಭಾಷಾ ಪರಿಸರಗಳು ಹೆಚ್ಚಾಗಿರುವ ಸಂಗತಿಗಳನ್ನು ಗಮನಿಸಬಹುದಾಗಿದೆ. ದೇಶ ದೇಶಗಳ ವಿಭಜನೆಯಿಂದಾಗಿ, ರಾಜ್ಯ ರಾಜ್ಯಗಳ ಪುನರ್ ವಿಂಗಡನೆಗಳಿಂದಾಗಿ, ವೈವಾಹಿಕ ಸಂಬಂಧಗಳಿಂದಾಗಿ, ವ್ಯಾಪಾರ ವಾಣಿಜ್ಯ ವ್ಯವಹಾರಗಳಿಗಾಗಿ, ಉನ್ನತ ಶಿಕ್ಷಣ ಉದ್ಯೋಗಳಿಗಾಗಿ, ಹೀಗೆ ಒಂದಲ್ಲ ಒಂದು ಕಾರಣಕ್ಕಾಗಿ ಭಾಷಾ ಸಂಪರ್ಕ ಮತ್ತು ಸಾಮಾಜಿಕ ಸಂದರ್ಭಗಳಿಂದಾಗಿ ಒಂದು ಭಾಷೆಯನ್ನು ಬಲ್ಲ ಜನರು ಮತ್ತೊಂದು ಭಾಷೆಯನ್ನು ಕಲಿಯುವುದು ಅನಿವಾರ್ಯವಾಗಿದೆ. ಇಂಥ ಅನ್ಯಭಾಷಾ ಕಲಿಕೆ, ಬಳಕೆ ಕೆಲವೊಮ್ಮೆ ರಾಜಕೀಯವಾಗಿ, ಸಾಂಸ್ಕೃತಿಕವಾಗಿ ಒತ್ತಾಯ ಪೂರ್ವಕವಾಗಿ ದತ್ತವಾಗುತ್ತಿದ್ದರೆ, ಇನ್ನು ಕೆಲವೊಮ್ಮೆ ವ್ಯಕ್ತಿಗತ ನೆಲೆಯಲ್ಲಷ್ಟೆ ಪ್ರವೃತ್ತವಾಗಬಹುದು. ವ್ಯಕ್ತಿಗತ ದ್ವಿಭಾಷಿಕತೆ ಉಂಟಾಗಲು ಬೇಕಾದ ಪೂರಕ

ಸನ್ನಿವೇಶಗಳು ಅವಕಾಶಗಳು ಸಮಾಜದಲ್ಲಿ ಇರುತ್ತವೆಯಾದರೂ ಕಲಿಕೆ - ಬಳಕೆಗಳು ಬಹುಮಟ್ಟಿಗೆ ವ್ಯಕ್ತಿಗಳ ಆಯ್ಕೆಯಾಗಿರುತ್ತದೆ.

ಭಾರತದಲ್ಲಿಯೂ ಬಹಳ ಹಿಂದಿನಿಂದಲೂ ದ್ವಿಭಾಷಾ ಪರಿಸರಗಳಿದ್ದವೆಂಬುದಕ್ಕೆ ಆಧಾರಗಳಿವೆ. ಸಂಸ್ಕೃತ ನಾಟಕಗಳಲ್ಲಿಯ ಪಾತ್ರಗಳು ಸಂಸ್ಕೃತ - ಪ್ರಾಕೃತ ಭಾಷೆಗಳಲ್ಲಿ ಸಂಭಾಷಣೆ ನಡೆಸುವುದು ಇದಕ್ಕೊಂದು ನಿದರ್ಶನ. ಕನ್ನಡದ ಸಂದರ್ಭದಲ್ಲಿ ದ್ವಿಭಾಷಿಕತೆಯನ್ನು ಗುರುತಿಸುವುದಾದರೆ ಕವಿರಾಜಮಾರ್ಗಕಾರ ತನ್ನ ಗ್ರಂಥದಲ್ಲಿ ಕನ್ನಡದ ಪ್ರಭೇದಗಳನ್ನು ಕನ್ನಡಂಗಳ್ ಎಂದೇ ಕರೆದಿದ್ದಾನೆ. ಅಂದರೆ ಅವನ ಹೊತ್ತಿಗಾಗಲೇ ಕನ್ನಡದ ಹಲವು ಪ್ರಭೇದಗಳಿದ್ದವು. ಜೊತೆಗೆ ಸಾಹಿತ್ಯ ರಚನೆಯ ಸಂದರ್ಭದಲ್ಲಿ ಕನ್ನಡ - ಪ್ರಾಕೃತ, ಕನ್ನಡ - ಸಂಸ್ಕೃತ ಇತ್ಯಾದಿ ಭಾಷೆಗಳನ್ನು ಬಲ್ಲ ಪಂಡಿತರು ಎರಡೂ ಭಾಷೆಗಳಲ್ಲಿ ಸಾಹಿತ್ಯ ರಚನೆ ಮಾಡುತ್ತಿದ್ದರು. ಇಲ್ಲಿ ದ್ವಿಭಾಷಿಕತೆ ಸಾಹಿತ್ಯ ರಚನೆಯ ಸಂದರ್ಭದಲ್ಲಿ ಪಂಡಿತವರ್ಗದ ನೆಲೆಯಲ್ಲಿ ಇರುವುದನ್ನು ಗುರುತಿಸಬಹುದಾಗಿದೆ. ಜೊತೆಗೆ ಸಾಹಿತ್ಯ ಗ್ರಂಥಗಳಲ್ಲಿ ಬರುವ ಪಾತ್ರಗಳು ಹೇಗೆ ತಮ್ಮ ತಮ್ಮ ಭಾಷೆಗಳಲ್ಲಿ ಮಾತನಾಡುತ್ತಿದ್ದವೆಂಬುದಕ್ಕೆ ಕೆಲವು ಸಾಹಿತ್ಯ ಗ್ರಂಥಗಳಿಂದ ತಿಳಿಯಬಹುದಾಗಿದೆ. ಇದಕ್ಕೆ ಉತ್ತಮ ಉದಾಹರಣೆಗಳೆಂದರೆ ಟಿ.ಪಿ.ಕೈಲಾಸಂ ಅವರ ಕೆಲವು ನಾಟಕಗಳು. ಹೀಗೆ ದ್ವಿಭಾಷಿಕ ಸಂದರ್ಭ ಕನ್ನಡದ ಸಂದರ್ಭದಲ್ಲಿ ಮೊದಲಿನಿಂದಲೂ ಇತ್ತೆಂಬುದು ತಿಳಿದುಬರುವುದಾದರೂ ಸಮಾಜದಲ್ಲಿಹೇಗೆ ನೆಲೆಗೊಂಡಿತ್ತು ಎಂಬುದನ್ನು ಕುರಿತಂತೆ, ಅವುಗಳ ಪರಿಣಾಮ ಸ್ವರೂಪವನ್ನು ಕುರಿತಂತೆ ಎಲ್ಲಿಯೂ ಮಾಹಿತಿ ದೊರೆಯುವುದಿಲ್ಲ.

ಭಾರತದ ಸಂದರ್ಭದಲ್ಲಿ ಉಂಟಾದ ದ್ವಿಭಾಷಾ ಪರಿಸರಗಳಲ್ಲಿ ಹೆಚ್ಚು ಭಾಷಾ ಸಂಗೋಪನೆಯ ನೆಲೆಗಳನ್ನು ಗುರುತಿಸಲಾಗಿದೆ. ಭಾಷಾ ಸಂಪರ್ಕ ಅಧ್ಯಾಯದಲ್ಲಿ ಇದನ್ನು ವಿವರವಾಗಿ ಹೇಳಲಾಗಿದೆ. ಕರ್ನಾಟಕ ಸಂದರ್ಭದಲ್ಲಿನ ದ್ವಿಭಾಷಾ ಪರಿಸರಗಳನ್ನು ಕುರಿತು ಹೇಳುವುದಾದರೆ ಕನ್ನಡ - ಮರಾಠಿ, ಕನ್ನಡ - ಕೊಂಕಣಿ, ಕನ್ನಡ - ತುಳು, ಕನ್ನಡ - ಕೊಡಗು, ಕನ್ನಡ - ತೆಲುಗು, ಕನ್ನಡ - ತಮಿಳು, ಕನ್ನಡ - ಉರ್ದು ದ್ವಿಭಾಷಾ ಪರಿಸರಗಳಲ್ಲಿ ಕನ್ನಡವನ್ನು ಎರಡನೇ ಭಾಷೆಯಾಗಿ ಕಲಿತು ದ್ವಿಭಾಷಿಕರಾಗುವ ಪ್ರಮಾಣ ಭಾಷಾ ಅಲ್ಪಸಂಖ್ಯಾತರಲ್ಲಿ ಹೆಚ್ಚಾಗಿ ಕಾಣುತ್ತಿದ್ದು, ಕನ್ನಡಿಗರು ಇತರೆ ಭಾಷೆಗಳನ್ನು ಕಲಿತು ದ್ವಿಭಾಷಿಕರಾಗುವ ಪ್ರಮಾಣ ಕಡಿಮೆ ಇರುವುದು ಕಾಣುತ್ತಿದೆ. ಅಲ್ಲದೆ, ಈ ಅಲ್ಪಸಂಖ್ಯಾತ ಭಾಷಿಕರು ಕೇವಲ ಮೌಖಿಕ ನೆಲೆಗಳಲ್ಲಿ ತಮ್ಮ ಭಾಷೆಯನ್ನು ಉಳಿಸಿಕೊಂಡು ಸಾಕ್ಷರತೆಯ ಕೌಶಲಗಳನ್ನು ಕನ್ನಡದಲ್ಲಿ ಪಡೆಯುತ್ತಿರುವುದು ಶೈಕ್ಷಣಿಕ ಸಂದರ್ಭಗಳನ್ನು ಗಮನಿಸಿದರೆ ತಿಳಿದುಬರುತ್ತದೆ.

ಕರ್ನಾಟಕದ ಸುತ್ತಲ ಗಡಿಭಾಗದಲ್ಲಿ ಬಳಕೆಯಾಗುತ್ತಿರುವ ದ್ವಿಭಾಷಾ ಸಂದರ್ಭಗಳಲ್ಲಿ ತೆಲುಗು, ಮರಾಠಿ, ಕೊಂಕಣಿ, ತುಳು, ತಮಿಳು, ಉರ್ದು, ಭಾಷೆಗಳು ಕನ್ನಡ ಭಾಷೆಯ ರಚನೆ ಮತ್ತು ಬಳಕೆಯ ನೆಲೆಗಳ ಮೇಲೆ ಪ್ರಭಾವ ಬೀರಿವೆ. ಕರ್ನಾಟಕದಲ್ಲಿ ದ್ವಿಭಾಷಿಕತೆಯನ್ನು ಕುರಿತಂತ ಕೆಲವು ಸಂಶೋಧನೆಗಳು ಮತ್ತು ಲೇಖನಗಳಲ್ಲಿ ಈ ಸಂಪರ್ಕದ

ಪರಿಣಾಮಗಳನ್ನೂ ನೋಡಬಹುದಾಗಿದೆ. ದೀರ್ಘಕಾಲದ ಕನ್ನಡ - ತೆಲುಗು ಭಾಷೆಗಳ ಸಂಪರ್ಕದಿಂದಾಗಿ ತೆಲುಗಿನ ಪ್ರಭಾವ ಕೋಲಾರ ಕನ್ನಡದ ಮೇಲಾಗಿರುವುದರಿಂದ ಅನೇಕ ತೆಲುಗು ಭಾಷೆಯ ಪದಗಳು ಕನ್ನಡವೇ ಎನ್ನುವಂತೆ ಬಳಕೆಯಾಗುತ್ತಿವೆಯಲ್ಲದೆ ತೆಲುಗು ಭಾಷೆಯ ಮೂಲಕ ರೂಢಿಸಿಕೊಂಡ ಗಾದೆಯ ಮಾತು ಅಥವಾ ಇನ್ನಿತರ ಜನಪ್ರಿಯ ಹೇಳಿಕೆಗಳನ್ನು ಕನ್ನಡದ ಸಂಭಾಷಣೆಯಲ್ಲಿ ಅನುವಾದಿಸದೆ ಹಾಗೆಯೇ ಉಳಿಸಿಕೊಳ್ಳಲಾಗುತ್ತಿದೆ. ಕರ್ನಾಟಕದ ಗಡಿಪ್ರದೇಶದ ದ್ವಿಭಾಷಾ ಪರಿಸರಗಳಲ್ಲಿ ಉಂಟಾಗಿರುವ ದ್ವಿಭಾಷಿಕತೆಯಿಂದಾಗಿ ಕನ್ನಡ ಭಾಷೆಯಲ್ಲಿ ಹಲವು ಪ್ರಾದೇಶಿಕ ಪ್ರಭೇದಗಳು ಉಂಟಾಗಿವೆ. ಇವು ದ್ವಿಭಾಷಿಕತೆಯ ಅಧ್ಯಯನಗಳಿಗೆ ಆಸಕ್ತಿದಾಯಕ ವಸ್ತುವಾಗಿದೆ. ಅನೇಕ ಶತಮಾನಗಳ ಭಾಷಾ ಸಂಪರ್ಕದಿಂದ ಉಂಟಾದ ದ್ವಿಭಾಷಾ ಪರಿಸರಗಳಲ್ಲಿ ಒಂದು ಭಾಷೆಯ ರಚನೆ, ಬಳಕೆಗಳ ಮೇಲೆ ಮತ್ತೊಂದು ಭಾಷೆಯು ಪ್ರಭಾವ ಬೀರುವುದನ್ನು ಕರ್ನಾಟಕ - ಮಹಾರಾಷ್ಟ್ರ ಗಡಿಯಲ್ಲಿರುವ ಕುಪ್ಪವಾರ್ ಅಧ್ಯಯನ, ಕನ್ನಡ ಕೊಂಕಣಿಗೆ ಸಂಬಂಧಿಸಿದಂತೆ ನಾಡಕರ್ಣಿ ಅವರ ಅಧ್ಯಯನಗಳಲ್ಲಿ ಭಾಷೆಯ ವ್ಯಾಕರಣ ಹಂತಗಳ ಮೇಲಾದ ಪರಿಣಾಮವನ್ನು ತಿಳಿಯಬಹುದಾಗಿದೆ.

ದ್ವಿಭಾಷಿಕತೆ ಮುಖ್ಯವಾಗಿ ಅಭಿವೃದ್ಧಿಶೀಲ ದೇಶಗಳಲ್ಲಿ ಶಿಕ್ಷಣ ಕ್ಷೇತ್ರದ ಪ್ರಮುಖ ಸಮಸ್ಯೆಯಾಗಿದೆ. ಶಿಕ್ಷಣದ ಯಾವ ಹಂತಗಳಲ್ಲಿ ಯಾವ ಯಾವ ಭಾಷೆಗಳನ್ನು ಹೇಗೆ ಪಠ್ಯಕ್ರಮದಲ್ಲಿ ಅಳವಡಿಸಬೇಕೆಂಬುದು ತಲೆನೋವಿನ ವಿಷಯವಾಗಿದೆ. ದ್ವಿಭಾಷಾ ಪರಿಸರಗಳಿಂದಾಗಿ ಅನೇಕ ಅಲ್ಪಸಂಖ್ಯಾತ ಭಾಷಾ ಸಮಾಜಗಳು ತಮ್ಮ ಮನೆ ಭಾಷೆಗಳನ್ನು ಕಳೆದುಕೊಂಡಿವೆ ಅಥವಾ ಕಳೆದುಕೊಳ್ಳುವ ಹಂತದಲ್ಲಿವೆ. ಅಮೇರಿಕಾದಲ್ಲಿ ಸ್ಪ್ಯಾನಿಷ್ ಭಾಷಿಕರನ್ನು ಬಿಟ್ಟರೆ ಉಳಿದ ಅಲ್ಲಿಯ ವಲಸೆ ಬಂದ ಸಮಾಜಗಳಲ್ಲಿ ಒಂದು ತಲೆಮಾರಿನ ನಂತರದಲ್ಲಿಯೇ ತಮ್ಮ ತಮ್ಮ ಮನೆಭಾಷೆಗಳನ್ನು ಮರೆಯುತ್ತಾರೆಂದು ಹೇಳಲಾಗಿದೆ. ಆಸ್ಟ್ರೇಲಿಯಾದಲ್ಲಿನ ಒಟ್ಟು ಜನಸಂಖ್ಯೆಯ 4.2 ರಷ್ಟು ಜನ ಮಾತ್ರ ಅಲ್ಲಿಯ ಮೂಲಭಾಷೆಗಳನ್ನು ಉಳಿಸಿಕೊಂಡಿದ್ದು ಉಳಿದವರೆಲ್ಲ ಇಂಗ್ಲಿಶ್ ಭಾಷಿಕರಾಗಿದ್ದಾರೆ. ಮತ್ತೆ ಕೆಲವು ಪರಿಸರಗಳಲ್ಲಿ ಅಲ್ಪಸಂಖ್ಯಾತರ ಮನೆಭಾಷೆಗಳು ಒಂದೆಡೆ ಹಾಗೇ ಉಳಿದಿದ್ದು ಸಮಾಜದ ಹೊರಗಿನ ಸಂಪರ್ಕಕ್ಕಾಗಿ ಬಹುಸಂಖ್ಯಾತರ ಅಥವಾ ಪ್ರತಿಷ್ಠಿತ ಸಮಾಜದ ಭಾಷೆಯೊಡನೆ ಕಸಿಮಾಡಿದ ಬೇರೆ ಬೇರೆ ರೀತಿಯ ಮಿಶ್ರಭಾಷೆಗಳನ್ನು ಸಂಪರ್ಕ ಭಾಷೆಗಳನ್ನಾಗಿ ಬಳಸಲಾಗುತ್ತಿದೆ.

ಕೆಲವು ಮಾಹಿತಿಗಳ ಪ್ರಕಾರ ಬಾಂಗ್ಲಾದಿಂದ ಭಾರತದ ಇತರೆಡೆಗಳಿಗೆ ಬಂದಂತಹ ರಾಜಕೀಯ ನಿರಾಶ್ರಿತರಿಗೆ ಅವರ ಭಾಷೆಯಲ್ಲೆ ಶಿಕ್ಷಣ ಇತರೆ ಸೌಲಭ್ಯಗಳನ್ನು ಭಾರತದ ಸರ್ಕಾರ ಒದಗಿಸಲಾಗಿದೆ. ಆದ್ದರಿಂದ ಬಾಂಗ್ಲಾ ದೇಶದ ವಲಸಿಗ ರಾಜಕೀಯ ನಿರಾಶ್ರಿತರು ತಮ್ಮ ಭಾಷೆಯನ್ನು ಅನೇಕ ಆವರಣಗಳಲ್ಲಿ ಉಳಿಸಿಕೊಂಡಿದ್ದಾರೆ. ಟರ್ಕಿ - ಜರ್ಮನಿ - ಇಟಲಿ ದೇಶಗಳ ಆಶ್ರಯಕ್ಕೆ ವಲಸೆ ಹೋದ ದೈಹಿಕ ದುಡಿಮೆಗಾರರು ತಮ್ಮ ಭಾಷೆಗಳನ್ನು ಬೇಗ

ಕಳೆದುಕೊಂಡಿದ್ದಾರೆ. ಇಮ್ಮರ್‌ಶನ್ ಕಾರ್ಯಕ್ರಮಗಳ ಮೂಲಕ ಅವರ ಮನೆಮಾತುಗಳನ್ನು ಕರಗಿಸುವ ಕೆಲಸಗಳನ್ನು ಮಾಡಲಾಗಿದೆ. 1948 ಇಸ್ರೆಲ್ ನಿರ್ಮಾಣವಾದಾಗ ಯಹೂದಿಗಳು ತಮ್ಮ ತಮ್ಮ ಭಾಷೆ ಮಾತನಾಡುತ್ತಿದ್ದರು. 50 ವರ್ಷಗಳ ನಂತರ ಹಿಬ್ರೂ ಕಡ್ಡಾಯವಾಗಿ ಕಲಿಯಬೇಕಾಗಿರುವುದರಿಂದ ಮೂಲ ಭಾಷೆಯನ್ನು ಕಳೆದುಕೊಳ್ಳಬೇಕಾಯಿತು. ಆದರೆ ಮಹಾರಾಷ್ಟ್ರದಿಂದ ವಲಸೆ ಹೋದ ಮರಾಠಿ ಭಾಷಿಕರು ಮನೆ ಆವರಣ, ಹಾಡು ಇತ್ಯಾದಿಗಳಲ್ಲಿ ಮರಾಠಿ ಯಹೂದಿಗಳು ತಮ್ಮ ಭಾಷೆಯನ್ನು ಉಳಿಸಿಕೊಂಡಿರುವುದು ತಿಳಿದುಬಂದಿದೆ. ಅಂದರೆ ಭಾಷಿಕರು ಭಾಷೆಯನ್ನು ಕಳೆದುಕೊಳ್ಳುತ್ತಿದ್ದರೂ ಯಾವುದೋ ಒಂದು ರೀತಿಯಲ್ಲಿ ಭಾಷೆಯನ್ನು ಹಿಡಿದಿಟ್ಟುಕೊಳ್ಳುವ ಶಕ್ತಿಯನ್ನು ದ್ವಿಭಾಷಿಕರು ಹೊಂದಿರುತ್ತಾರೆನ್ನುವುದಕ್ಕೆ ಭಾರತದಲ್ಲಿನ ಭಾಷಿಕರು ಇತರೆಡೆಗಳಲ್ಲಿ ಎಲ್ಲೇ ನೆಲೆಸಿದ್ದರೂ ಭಾಷೆಯನ್ನು ಯಾವುದೋ ಒಂದು ರೂಪದಲ್ಲಿ ಉಳಿಸಿಕೊಂಡಿರುತ್ತಾರೆನ್ನುವುದಕ್ಕೆ ಇದು ಸಾಕ್ಷಿ.

ದ್ವಿಭಾಷಾ ಪರಿಸರಗಳಿಂದಾಗಿ ಅನೇಕ ವಲಸಿಗ ಭಾಷಾ ಅಲ್ಪಸಂಖ್ಯಾತ ಸಮುದಾಯಗಳಲ್ಲಿ ಬಹುಸಂಖ್ಯಾತರ ಪ್ರತಿಷ್ಠಿತ ಭಾಷೆಗಳಿಗೆ ಪಲ್ಲಟಗಳಾಗಿರುವುದು ದ್ವಿಭಾಷಿಕತೆಯ ಬಗೆಗಿನ ಅಧ್ಯಯನಗಳಿಂದ ತಿಳಿಯಬಹುದಾಗಿದೆ. ಕೋರನ್‌ವಾಲ್ ಎಂಬ ಪ್ರದೇಶದಲ್ಲಿ ಅಥವಾ ಕೋರ್‌ನಿಶ್ - ಇಂಗ್ಲಿಶ್ ಭಾಷೆಯಿಂದ ಉಂಟಾದ ದ್ವಿಭಾಷಾ ಪರಿಸರದಲ್ಲಿ ಇಂಗ್ಲಿಶ್ ಭಾಷೆಯ ಪ್ರಬಲವಾದ ಹಿಡಿತದಿಂದ ಬಿಡಿಸಿಕೊಳ್ಳಲಾರದ ಕೋರ್‌ನಿಶ್ ಭಾಷಿಕರು ಸಂಪೂರ್ಣವಾಗಿ ತಮ್ಮ ಭಾಷೆಯನ್ನು ಕಳೆದುಕೊಂಡಿದ್ದರಿಂದ ಕೋರ್‌ನಿಶ್ ಭಾಷೆಯೇ ನಾಶವಾಗಿರುವ ಸಂದರ್ಭಗಳನ್ನು ಕಾಣಬಹುದಾಗಿದೆ. ಈ ರೀತಿಯ ಸಂದರ್ಭಗಳನ್ನು 'ಭಾಷಾ ನಾಶ' ಎನ್ನುವ ಪರಿಭಾಷೆಯಲ್ಲಿ ಕರೆಯಲಾಗುತ್ತದೆ. ಇಂತಹ ಸನ್ನಿವೇಶಗಳು ಸಂಭವಿಸುವುದು ಅಪರೂಪ. ಈ ರೀತಿಯ ಸನ್ನಿವೇಶಗಳು ಹೆಚ್ಚು ಸಂಭವಿಸುವುದು ಬುಡಕಟ್ಟು ಜನಾಂಗಗಳಲ್ಲಿ. ಹೆಚ್ಚಿನ ಸಂದರ್ಭದಲ್ಲಿ ಎರಡು ಭಾಷೆಗಳ ಬಳಕೆಯಾಗುವ ಪರಿಸರದಲ್ಲಿ ಭಾಷಾ ಪಲ್ಲಟಗಳು ಅಥವಾ ಸಂಗೋಪನೆಯ ಸಂದರ್ಭಗಳನ್ನೆ ಹೆಚ್ಚಾಗಿ ಕಾಣಬಹುದಾಗಿದೆ. ಭಾಷಾ ನಾಶವಾಗುವ ಸಂದರ್ಭಗಳು ತೀರ ಕಡಿಮೆ.

ಪಶ್ಚಿಮದ ರಾಷ್ಟ್ರಗಳ ಸಂದರ್ಭದ ದ್ವಿಭಾಷಾ ಪರಿಸರಗಳನ್ನು ಕುರಿತು ಹೇಳುವುದಾದರೆ ಆರ್ಥಿಕ ಸ್ಥಾನಮಾನಗಳಿಗಾಗಿಯೇ ಭಾಷಿಕರು ಒಂದು ಭಾಷೆಯಿಂದ ಮತ್ತೊಂದು ಭಾಷೆಗೆ ಪಲ್ಲಟಗೊಳ್ಳುವಲ್ಲಿ ಪ್ರಮುಖ ಕಾರಣಗಳಾದಂತಿವೆ. ಎಲ್ಲಿ ಅಲ್ಪಸಂಖ್ಯಾತರ ಭಾಷೆಗಳಿಗೆ ಬಹಳ ಕೆಳಮಟ್ಟದ ಆರ್ಥಿಕ, ಸಾಮಾಜಿಕ ಸ್ಥಾನಮಾನಗಳಿರುತ್ತದೆಯೊ ಅಲ್ಲಿ ತೀವ್ರಗತಿಯ ಪಲ್ಲಟಗಳು ಬಹುಸಂಖ್ಯಾತರ ಅಧಿಕಾರಶಾಹಿ ಭಾಷೆಯ ಕಡೆಗಿರುತ್ತವೆ. ಅಮೇರಿಕಾದಲ್ಲಿ ಕೆಳಮಟ್ಟದ ಆರ್ಥಿಕ ಸ್ಥಿತಿಯಲ್ಲಿರುವ ಬಹಳಷ್ಟು ಸ್ಪ್ಯಾನಿಷ್ ಭಾಷಿಕರು ಶೈಕ್ಷಣಿಕ ಸಾಧನೆ ಮತ್ತು ಆರ್ಥಿಕ ಸಫಲತೆಗಾಗಿ ಇಂಗ್ಲಿಶ್‌ಗೆ ಪಲ್ಲಟಗೊಂಡಿದ್ದಾರೆ. ಪಶ್ಚಿಮ ಯೂರೋಪ್ ರಾಷ್ಟ್ರಗಳಿಗೆ ವಲಸೆಹೋದ

ಕಾರ್ಮಿಕರು ಸಹ ಬಹು ಸಂಖ್ಯಾತರ ಭಾಷೆಗೆ ಪಲ್ಲಟಗೊಂಡಿದ್ದಾರೆ. ತುರ್ಕಿಷ್, ಗ್ರೀಕ್ ವಲಸಿಗರು ಸಹ ಬಹುಮಟ್ಟಿಗೆ ಆರ್ಥಿಕ ಸಫಲತೆಗಾಗಿ ತಮ್ಮ ಮನೆಮಾತುಗಳನ್ನು ಉಳಿಸಿಕೊಳ್ಳುವಲ್ಲಿ ವಿಫಲರಾಗಿದ್ದಾರೆ. ಚೈನೀಸ್ ಅಮೇರಿಕನ್ ಕೆಳಮಟ್ಟದ ಆರ್ಥಿಕ ಸಾಮಾಜಿಕ ಸ್ಥಾನಮಾನವನ್ನು ಹೊಂದಿರುವ ಭಾಷಿಕರೂ ಸಹ ಉತ್ತಮ ಸ್ಥಾನಮಾನಕ್ಕಾಗಿ ಚೈನೀಸ್ ಭಾಷೆಗೆ ಪಲ್ಲಟಗೊಂಡಿರುವರೆಂಬ ಸಂಗತಿಗಳನ್ನು ದ್ವಿಭಾಷಿಕತೆ ಬಗೆಗಿನ ಅಧ್ಯಯನಗಳು ತಿಳಿಸುತ್ತವೆ.

ದ್ವಿಭಾಷಿಕ ಸಮುದಾಯಗಳಲ್ಲಿ ಅಲ್ಪಸಂಖ್ಯಾತರ ಭಾಷೆಗಳ ಕಡಿಮೆ ಸ್ಥಾನಮಾನವನ್ನು ಹೊಂದಿರುತ್ತವೆ. ಅನೇಕ ವಲಸಿಗರು, ನಿರಾಶ್ರಿತರು, ಸಾಮಾಜಿಕವಾಗಿ, ಆರ್ಥಿಕವಾಗಿ ಮೇಲ್‌ಮುಖ ಚಲನೆಯ ಕಡೆಗೆ ಚಲಿಸಲು ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಸಂವಹನ ಮಟ್ಟದಲ್ಲಿ ಉನ್ನತ ಸ್ಥಾನವನ್ನು ಪಡೆದಿರುವ ಫ್ರೆಂಚ್, ರಷ್ಯನ್, ಇಂಗ್ಲಿಶ್, ಸ್ಪ್ಯಾನಿಷ್ ಭಾಷೆಗಳ ಕಡೆಗೆ ಪಲ್ಲಟ ಹೊಂದಿದ್ದಾರೆ.

ಇಸ್ರೇಲ್, ಇಂಡಿಯಾ, ಇಂಗ್ಲಿಶ್ ಪ್ರಬಲಯುತವಾದ ರಾಷ್ಟ್ರಗಳಲ್ಲಿ ಬಹುಮಟ್ಟಿಗೆ ಆರ್ಥಿಕ ಕಾರಣಗಳಿಗಾಗಿಯೇ ಪಲ್ಲಟಗಳು ಹೆಚ್ಚು ಆಗಿರುವಂಥದ್ದು. 18ನೇ ಶತಮಾನದಲ್ಲಿ ವಸಾಹತುಶಾಹಿ ಶಕ್ತಿಯಿಂದ ಇಂಗ್ಲಿಶ್ ಭಾಷೆ ಪ್ರಧಾನವಾದ ಸ್ಥಾನ ಪಡೆಯಿತು. ಎಲ್ಲಾ ಪ್ರಧಾನ ಆವರಣಗಳಲ್ಲೂ ಶಕ್ತಿಯುತವಾದ ಆಡಳಿತ ಭಾಷೆ ಅಧಿಕಾರ ಪಡೆದುಕೊಂಡಿತು. ಕೈಗಾರೀಕರಣದಿಂದುಂಟಾದ ಉದ್ಯೋಗಾವಕಾಶಗಳು, ನಗರೀಕರಣ, ಆಧುನೀಕರಣ, ಇವುಗಳಿಂದಾಗಿ ವ್ಯಕ್ತಿಗಳು ಹೆಚ್ಚು ಹೆಚ್ಚು ದ್ವಿಭಾಷಿಗಳು ಮತ್ತು ಬಹುಭಾಷಿಗಳಾಗುವ ಅವಶ್ಯಕತೆಗಳು ಹೆಚ್ಚಾದವು. ವಸಾಹತುಶಾಹಿ ಶಕ್ತಿಯ ನೀತಿಯಿಂದಾಗಿ ಆಡಳಿತ ಭಾಷೆಯಲ್ಲಿನ ಗೌರವ, ಸ್ಥಾನಮಾನ, ಸಾಮಾಜಿಕ ಸಫಲತೆ, ಆರ್ಥಿಕ ಸಫಲತೆಯನ್ನು ಪಡೆಯಲು ದ್ವಿಭಾಷಾ ಪರಿಸರಗಳಲ್ಲಿ ಭಾಷಾ ಪಲ್ಲಟಗಳುಂಟಾದವು. ಈ ಉದ್ದೇಶಗಳಿಗಾಗಿ ಪಲ್ಲಟಗಳು ಹೆಚ್ಚು ಉಂಟಾಗಿದ್ದು ವಲಸಿಗ ಭಾಷಾ ಅಲ್ಪಸಂಖ್ಯಾತರಲ್ಲಿ, ಗಡಿ ಪ್ರದೇಶಗಳಲ್ಲಿ, ನಿರಾಶ್ರಿತರಲ್ಲಿ, ವ್ಯಾಪಾರಕ್ಕಾಗಿ, ಶಿಕ್ಷಣಕ್ಕಾಗಿ ಅವಶ್ಯಕತೆಗಳ ಪೂರೈಕೆಗಾಗಿ, ಕೇವಲ ಕೆಲವೇ ಕೆಲವು ತಲೆಮಾರುಗಳಲ್ಲಿ ತೀವ್ರಗತಿಯ ಪಲ್ಲಟಗಳು ಉಂಟಾಗಿರುವುದನ್ನು ಪಶ್ಚಿಮದ ಸಂದರ್ಭದಲ್ಲಿ ಭಾಷಾ ಪಲ್ಲಟ ಮತ್ತು ಭಾಷಾ ಸಂಗೋಪನೆಯನ್ನು ಕುರಿತಂತೆ ನಡೆದ ಹಲವು ಅಧ್ಯಯನಗಳು ತಿಳಿಸುತ್ತವೆ. ಆಸ್ಟ್ರಿಯಾದ ಕೆಲವು ವಲಸಿಗ ಭಾಷಾ ಅಲ್ಪಸಂಖ್ಯಾತರಲ್ಲಿ ಮಾಲ್‌ತೇಶ್ ಎನ್ನುವ ವಲಸಿಗ ಗುಂಪುಗಳು ಆಸ್ಟ್ರಿಯಾದ ಎರಡೂ ಬೇರೆ ಬೇರೆ ರಾಜ್ಯಗಳಲ್ಲಿ ನೆಲೆಸಿರುವುದರಿಂದ ಇಂಗ್ಲಿಶ್ ಭಾಷೆಗೆ ಪಲ್ಲಟವಾಗದ ಸಂದರ್ಭಗಳು ಕಂಡುಬಂದಿವೆ. ಕಾರಣ ಇವರಲ್ಲಿ ಒಳಗುಂಪುಗಳಲ್ಲೇ ವೈವಾಹಿಕ ಸಂಬಂಧಗಳನ್ನು ಬೆಳೆಸುವುದರಿಂದ ಮನೆ, ಆಪ್ತವಲಯಗಳಲ್ಲಿ ಮಕ್ಕಳ ಮೊದಲ ಭಾಷೆಯಾಗಿ ತಮ್ಮ ಸ್ವಭಾಷೆಗಳನ್ನು ಉಳಿಸಿಕೊಂಡಿದ್ದಾರೆ. ಇನ್ನು ಕೆಲವು ಕಡೆಗಳಲ್ಲಿ ಆಂಗ್ಲೋ ಮಾಲ್‌ತೇಶ್ ವೈವಾಹಿಕ ಸಂಬಂಧದಿಂದಾಗಿ ಮಕ್ಕಳು ಸಂಪೂರ್ಣವಾಗಿ ಇಂಗ್ಲಿಶ್ ಭಾಷೆಗೆ ಪಲ್ಲಟವಾಗಿರುವ ಸಂದರ್ಭಗಳು ತಿಳಿದುಬರುತ್ತವೆ.

ದ್ವಿಭಾಷಿಕತೆಯನ್ನು ಉಳಿಸಿಕೊಳ್ಳುವುದು ಆರ್ಥಿಕವಾಗಿ ಲಾಭದಾಯಕವಲ್ಲ ಎನ್ನುವ ನಿಲುವಿನ ಪರಿಣಾಮವಾಗಿ ಜಗತ್ತಿನಾದ್ಯಂತ ದ್ವಿಭಾಷಿಕ ಸಮುದಾಯಗಳ ಮೇಲೆ ನಡೆದ ಅವ್ಯಾಹತ ದಾಳಿ, ರಾಜ್ಯಶಕ್ತಿಗಳು, ಅಲ್ಪಸಂಖ್ಯಾತ ಸಮುದಾಯಗಳು ದ್ವಿಭಾಷಿಕ ಸ್ಥಿತಿಯಿಂದ ಹೊರಬರುವಂತೆ, ತಲೆಮಾರು ಕಳೆಯುವಷ್ಟರಲ್ಲಿ ತಮ್ಮ ಮನೆ ಭಾಷೆಯನ್ನು ಕಳೆದುಕೊಳ್ಳುವಂತೆ ಮಾಡಲು ಉದ್ಯುಕ್ತವಾದವು. ಅಂಥ ರಾಷ್ಟ್ರಗಳಲ್ಲಿ ತುರ್ಕಿಯೂ ಒಂದಾಗಿದೆ. ತುರ್ಕಿಯಲ್ಲಿ ಕುರ್ದಿಶ್ ಜನರು ತಮ್ಮ ಸ್ವಾತಂತ್ರ್ಯಕ್ಕಾಗಿ ಹೋರಾಡುವಾಗ ತಮ್ಮ ಭಾಷೆಯಲ್ಲಿ ಕಲಿಯಲು ಅವಕಾಶ ಕೇಳುವುದು ಮರಣದಂಡನೆಯಂಥ ಶಿಕ್ಷೆಗೆ ಗುರಿಯಾಗುವ ಅಪರಾಧವಾಗಿದೆ. ಬೇರೆ ದೇಶಗಳಲ್ಲಿ ಇಷ್ಟು ತೀವ್ರವಾದ ಸ್ಥಿತಿಯಿಲ್ಲವಾದರೂ ನಿರಂತರವಾಗಿ ಅಲ್ಪಸಂಖ್ಯಾತ ಭಾಷೆಗಳನ್ನು ಅಳಿಸಿ ಹಾಕುವ ಪ್ರಯತ್ನಗಳು ಬೇರೆ ಬೇರೆ ಪ್ರಮಾಣದಲ್ಲಿ ನಡೆಯುತ್ತಲೇ ಇವೆ. ಕೆ.ವಿ.ನಾರಾಯಣ (1998 :14)

ದೀರ್ಘಕಾಲದಿಂದ ದ್ವಿಭಾಷಿಕತೆಯನ್ನು ಹಲವು ಸಂದರ್ಭದಲ್ಲಿ ಬಹುಭಾಷಿಕತೆಯನ್ನು ಸಹಜವೆಂಬಂತೆ ನಿರ್ವಹಿಸಿಕೊಂಡು ಬಂದಿರುವ ಸಮಾಜಗಳನ್ನು ಅಭ್ಯಾಸಮಾಡುವ ಮೂಲಕ ದ್ವಿಭಾಷಿಕತೆಯ ಬಗೆಗೆ ಇರುವ ತಪ್ಪು ತಿಳುವಳಿಕೆಗಳು ನಿವಾರಣೆಯಾಗುತ್ತವೆ. ಆದರೆ ವಾಸ್ತವದಲ್ಲಿ ಬೆಳೆಯುತ್ತಿರುವ ಭಾಷಾ ರಾಷ್ಟ್ರೀಯತೆ ಮತ್ತು ಭಾಷೆಗಳ ಅಂತಾರಾಷ್ಟ್ರೀಯ ಪ್ರಭುತ್ವಗಳಿಂದಾಗಿ ದ್ವಿಭಾಷಿಕ ಸನ್ನಿವೇಶಗಳನ್ನು ಅಸಹನೆಯಿಂದ ನೋಡುವುದು ಹೆಚ್ಚಾಗುತ್ತಿದೆ. ಏಕಭಾಷಿಕತೆಯ ಪರವಾಗಿ, ಅಂದರೆ ಅಧಿಕಾರದ ಭಾಷೆಯ ಪರವಾಗಿ ಎಲ್ಲಾ ಭಾಷಾ ಯೋಜನೆಗಳೂ ದುಡಿಯುತ್ತಿವೆ. ಇದು ಪ್ರಪಂಚದ ಸಾವಿರಾರು ದ್ವಿಭಾಷಿಕ ಸಮುದಾಯಗಳಿಗೆ ಆತಂಕಕಾರಿಯಾದ ಸ್ಥಿತಿಯಾಗಿದೆ. ಇದು ಒಂದೆಡೆ ಸಮುದಾಯಗಳನ್ನು ಅಂಚಿಗೆ ದೂಡುತ್ತಿದ್ದರೆ, ಮತ್ತೊಂದೆಡೆ ಅವುಗಳ ಅಸ್ಮಿತೆಯನ್ನು ನಿರಾಕರಿಸುತ್ತದೆ. ಕೆ.ವಿ.ನಾರಾಯಣ (1998 :17)

## ದ್ವಿಭಾಷಿಕತೆಯ ಸ್ವರೂಪ ಮತ್ತು ವಿಧಗಳು

ಎರಡು ಭಿನ್ನ ಭಾಷೆಗಳ ನಡುವೆ ಸಂಪರ್ಕವೇರ್ಪಟ್ಟಾಗ ಉಂಟಾಗುವ ದ್ವಿಭಾಷಿಕತೆಯ ಸ್ವರೂಪ ಎಲ್ಲೆಡೆಗಳಲ್ಲಿಯೂ ಒಂದೇ ರೀತಿಯಲ್ಲಿ ಇರಲಾರದು. ಏಕೆಂದರೆ ದ್ವಿಭಾಷಿಕ ಸಂದರ್ಭಗಳಲ್ಲಿನ ಭಾಷಿಕರ ಕಲಿಕೆ ಬಳಕೆಗಳ ನೆಲೆಗಳು ಪ್ರತಿಯೊಂದು ಪ್ರದೇಶದ ಜಿಲ್ಲೆ ಪರಿಸರದ ಹಿನ್ನೆಲೆಯಲ್ಲಿ ಭಿನ್ನವಾಗಿರುತ್ತದೆ. ಜೊತೆಗೆ ಭಾಷಾ ಆಯ್ಕೆ ವ್ಯಕ್ತಿಗತ ನೆಲೆಯಲ್ಲಿ ಮತ್ತು ಸಾಮುದಾಯಿಕ ನೆಲೆಯಲ್ಲಿಯೂ ಭಿನ್ನವಾಗಿರಬಹುದು. ಭಾಷಾ ಕೌಶಲಗಳಲ್ಲಿ ಒಂದಾದ ಗ್ರಹಿಕೆಯ ಕೌಶಲವನ್ನಷ್ಟೆ ಭಾಷಿಕರು ಪಡೆದಿರಬಹುದು. ಇಂಥಹ ಸಂದರ್ಭವನ್ನು ಅರೆ ದ್ವಿಭಾಷಿಕತೆ ಎಂದು ಕರೆಯಲಾಗಿದೆ. "ದ್ವಿಭಾಷಿಕ ಸಮುದಾಯಗಳಲ್ಲಿ ಸಾಮುದಾಯಿಕ ದ್ವಿಭಾಷಿಕತೆ ಬೇರೆ ಬೇರೆ ಪರಿಣಾಮದೊಂದಿಗೆ ಕಾಣಿಸಿಕೊಳ್ಳಲು ಸಾಧ್ಯ. ಆದರೆ ಅರೆ ದ್ವಿಭಾಷಿಕತೆಯನ್ನು ಕುಂಠಿತ ಭಾಷಾ ಸಾಮರ್ಥ್ಯವೆಂದು ತಿಳಿಯಲಾಗದು."

ಕರ್ನಾಟಕದಲ್ಲಿ ಸಾಮುದಾಯಿಕ ದ್ವಿಭಾಷಿಕತೆಯ ಸಂದರ್ಭಗಳಿರುವುದನ್ನು ಕಾಣಬಹುದಾಗಿದೆ. ಕರ್ನಾಟಕ ಏಕೀಕರಣಕ್ಕೆ ಮುಂಚೆ ಕನ್ನಡಿಗರನ್ನೊಳಗೊಂಡಂತೆ ಹಲವು ಭಾಷಾ ಸಮುದಾಯಗಳ ಒಟ್ಟಿಗೆ ಬದುಕುವ ಅನಿವಾರ್ಯ ಉಂಟಾಗುತ್ತಿದೆಯಲ್ಲದೆ, ಸಾಮುದಾಯಿಕ ದ್ವಿಭಾಷಿಕತೆಯ ಪ್ರಮಾಣವು ಹೆಚ್ಚಿನ ಪ್ರಮಾಣದಲ್ಲಿ ಕಾಣಲಾಗುತ್ತಿತ್ತು. ಇಂದಿಗೂ ಇಂತಹ ಅನಿವಾರ್ಯ ಸಂದರ್ಭಗಳು ಇದ್ದರೂ ಸಹ ವ್ಯಕ್ತಿಗತ ಆಯ್ಕೆಗಳು ಭಿನ್ನವಾಗಿರಬಹುದು. ಕರ್ನಾಟಕ - ಆಂಧ್ರದ ಗಡಿಭಾಗಗಳಲ್ಲಿ ಹೆಚ್ಚು ಸಾಮುದಾಯಿಕ ದ್ವಿಭಾಷಾ ಸಂದರ್ಭಗಳನ್ನು ಕಾಣಬಹುದಾಗಿದೆ. ವ್ಯಕ್ತಿಗತ ದ್ವಿಭಾಷಿಕತೆ ಉಂಟಾಗಲು ಬೇಕಾದ ಪೂರಕ ಸನ್ನಿವೇಶಗಳು, ಅವಕಾಶಗಳು ಇರುತ್ತವೆಯಾದರೂ ಕಲಿಕೆ - ಬಳಕೆಗಳು ಬಹುಮಟ್ಟಿಗೆ ವ್ಯಕ್ತಿಗಳ ಆಯ್ಕೆಯಾಗಿರುತ್ತದೆ.

## ಕರ್ನಾಟಕದಲ್ಲಿ ದ್ವಿಭಾಷಿಕತೆ

1956ರಿಂದ ಅಖಂಡ ಕರ್ನಾಟಕವೆಂದು ಗುರುತಿಸುವ ಪ್ರದೇಶವು ಭಾಷಾವಾರು ಪ್ರಾಂತ್ಯಗಳ ಪುನರ್‌ವಿಂಗಡನೆಯ ಕಾಲಕ್ಕೆ ಮುನ್ನ ಯಾವುದೇ ಭೌಗೋಳಿಕ - ಭಾಷಿಕ ಮೇರೆಗಳನ್ನು ಒಳಗೊಂಡಿರಲಿಲ್ಲ. ಇಂದು ಆಂಧ್ರಕ್ಕೂ, ತಮಿಳುನಾಡಿಗೂ, ಕೇರಳಕ್ಕೂ, ಮಹಾರಾಷ್ಟ್ರಕ್ಕೂ ಕರ್ನಾಟಕಕ್ಕೂ ಸೇರಿರುವ ಎಷ್ಟೋ ಭಾಗಗಳು ಹಿಂದೆ ಒಬ್ಬನೇ ರಾಜನ ಆಡಳಿತಕ್ಕೆ ಇಲ್ಲವೆ ಒಂದೇ ಸಾಮ್ರಾಜ್ಯದ ತೆಕ್ಕೆಗೆ ಒಳಪಟ್ಟಿದ್ದವು. ಕರ್ನಾಟಕದ ವಿಶಾಲ ಪ್ರದೇಶದಲ್ಲಿ ತಮಿಳು, ತೆಲುಗು, ಮರಾಠಿ, ಕೊಂಕಣಿ ಮತ್ತು ಇಂಗ್ಲಿಶ್ ಭಾಷೆಗಳನ್ನಾಡುವ ಹಲವು ಸಮುದಾಯಗಳು ಹಲವಾರು ಶತಮಾನಗಳಿಂದ ನೆಲೆಸಿದ್ದಾರೆ. ಆದ್ದರಿಂದ ವಿವಿಧ ಭಾಷಾ ಸಮುದಾಯಗಳೊಡನೆ ಕನ್ನಡ ಮಾತನಾಡುವವರು ಮತ್ತು ಕನ್ನಡಿಗರೊಡನೆ ವಿವಿಧ ಭಾಷಿಕರು ವ್ಯವಹರಿಸುವುದು ಅನಿವಾರ್ಯವಾಗಿದೆ. 1956 ರ ನಂತರದಲ್ಲಿ ಭಾಷಾವಾರು ಜಿಲ್ಲೆಗಳ ಪುನರ್ ವಿಂಗಡನೆಯಾಗಿ ಅಖಂಡ ಕರ್ನಾಟಕ್ಕೂ ಗಡಿಯನ್ನು ಹಾಕಲಾಯಿತಷ್ಟೆ. ಭಾಷಿಕ ಗಡಿಗಳನ್ನು ಹಾಕಲು ಮಾತ್ರ ಸಾಧ್ಯವಾಗಲಿಲ್ಲ. ಏಕೆಂದರೆ ಕರ್ನಾಟಕ ಕೇವಲ ಕನ್ನಡಿಗರಿಂದಷ್ಟೆ ಕೂಡಿಲ್ಲ. ರಾಜಕೀಯ ಕಾರಣಗಳಿಗಾಗಿ ಹಲವು ಭಾಷೆಗಳ ಭಾಷಿಕರು ಆಯಾಯಾ ಭಾಷಾ ಪ್ರದೇಶಗಳಿಗೆ ಹರಿದು ಹಂಚಿ ಹೋಗಿದ್ದಾರಷ್ಟೆ. ಹಲವಾರು ಅವಶ್ಯಕತೆಗಳ ಪೂರೈಕೆಗಾಗಿ ಅನ್ಯಭಾಷಿಕರು ಅನಿವಾರ್ಯವಾಗಿ ಕನ್ನಡಿಗರೊಂದಿಗೆ, ಕನ್ನಡಿಗರು ಅನ್ಯಭಾಷಿಕರೊಂದಿಗೆ ಸಂಪರ್ಕಿಸಬೇಕಿದೆ. ಅಲ್ಲದೆ ಕರ್ನಾಟಕ ಬಹಳ ಉದ್ದದ ಅನ್ಯಭಾಷಿಕರ ಗಡಿಗಳನ್ನು ಹೊಂದಿರುವುದರಿಂದ ಗಡಿ ಪ್ರದೇಶದಲ್ಲಿ ಏರ್ಪಡುವ ದ್ವಿಭಾಷಾ ಸನ್ನಿವೇಶಗಳು ಪರಿಣಾಮದಲ್ಲಿ ಒಂದಕ್ಕಿಂತ ಒಂದು ಭಿನ್ನವಾಗಿದೆ. ಅಲ್ಲದೆ ಕನ್ನಡ ಭಾಷೆಯ ರಚನೆ ಮತ್ತು ಬಳಕೆಯ ಮೇಲೆ ಹಲವು ರೀತಿಯ ಬದಲಾವಣೆಯನ್ನುಂಟು ಮಾಡಿದೆ.

ಕರ್ನಾಟಕದ ವಾಯುವ್ಯ ಭಾಗದಲ್ಲಿ ಕನ್ನಡ - ಮರಾಠಿ, ಕರಾವಳಿಯಲ್ಲಿ ಕನ್ನಡ - ಕೊಂಕಣಿ, ಮತ್ತು ಕನ್ನಡ - ತುಳು, ಕೊಡಗಿನಲ್ಲಿ ಕನ್ನಡ - ಕೊಡವ, ಕನ್ನಡ - ಮಲೆಯಾಳಂ, ಕೋಲಾರ - ತುಮಕೂರು, ಬಳ್ಳಾರಿಗಳ

ಪೂರ್ವಗಡಿಗಳಲ್ಲಿ ಕನ್ನಡ - ತೆಲುಗು ದ್ವಿಭಾಷಿಕ ಪ್ರದೇಶಗಳಿವೆ. ಕೆಲವು ಸಾಂದ್ರವಲಯಗಳಲ್ಲಿ ಕನ್ನಡ - ತಮಿಳು ದ್ವಿಭಾಷಿಕತೆ ಕಂಡುಬರುತ್ತದೆ. ಉದಾ : ಕೆ.ಜಿ.ಎಫ್., ಬೆಂಗಳೂರು, ಶಿವಮೊಗ್ಗ, ಚಿಕ್ಕಮಗಳೂರು, ಹುಬ್ಬಳ್ಳಿ, ಬಳ್ಳಾರಿ, ಕನ್ನಡ - ಉರ್ದು ದ್ವಿಭಾಷಿಕರು ಹೀಗೆ ನಿರ್ದಿಷ್ಟ ಭೂಭಾಗಕ್ಕೆ ಸೀಮಿತವಾಗದೆ ಹಲವಾರು ಜಿಲ್ಲೆಗಳಲ್ಲಿ ಬೇರೆ ಬೇರೆ ಪ್ರಮಾಣದಲ್ಲಿ ಹಂಚಿಹೋಗಿದ್ದಾರೆ. ಇನ್ನು ಕೆಲವು ದ್ವಿಭಾಷಿಕ ಸಮುದಾಯಗಳು ಕರ್ನಾಟಕದ ನಡುವೆ ಬೇರೆ ಬೇರೆ ಪ್ರದೇಶಗಳಲ್ಲಿ ಕೇಂದ್ರೀಕೃತವಾಗಿವೆ. ಕನ್ನಡ - ಲಂಬಾಣಿ ಮಾತನಾಡುವ ಜನರು ಇಂಥದಕ್ಕೆ ಒಂದು ನಿದರ್ಶನ. ಕನ್ನಡ ಭಾಷೆ ಭಾಷಾದ್ವೀಪವಾಗಿ ಉಳಿದಿಲ್ಲವಾದ ಕಾರಣ ಅನ್ಯ ಭಾಷೆಗಳನ್ನಾಡುವ ಭಾಷಿಕರಿಗೆ ತೆರೆದುಕೊಂಡಿದೆ. ಆದ್ದರಿಂದ ವಿವಿಧ ಭಾಷಾ ಸಮುದಾಯಗಳೊಡನೆ ಕನ್ನಡ ಮಾತನಾಡುವವರು ಮತ್ತು ಕನ್ನಡಿಗರೊಡನೆ ವಿವಿಧ ಭಾಷಿಕರು ವ್ಯವಹರಿಸುವುದು ಅನಿವಾರ್ಯವಾಗಿದೆ. "ಇದಲ್ಲದೆ ಬಹುಹಿಂದಿನಿಂದಲೂ ಕರ್ನಾಟಕಕ್ಕೆ ವಿವಿಧ ಕಾಲಘಟ್ಟಗಳಲ್ಲಿ ಬೇರೆ - ಬೇರೆ ಪ್ರದೇಶಗಳಿಂದ ಬೇರೆ - ಬೇರೆ ಭಾಷೆಗಳನ್ನಾಡುವ ಜನರು ವಲಸೆ ಬರುತ್ತಲೇ ಇದ್ದಾರೆ. ಪ್ರಾಕೃತವನ್ನಾಡುತ್ತಿದ್ದ ಜನ ಸಮುದಾಯಗಳಿಂದ ಮೊದಲ್ಗೊಂಡು ಬೇರೆ - ಬೇರೆ ಮಧ್ಯ ಇಂಡೋ ಆರ್ಯನ್ ಭಾಷೆಗಳನ್ನಾಡುವ ಜನರು ಕರ್ನಾಟಕಕ್ಕೆ ಬಂದಿದ್ದಾರೆ. ಇವರಲ್ಲಿ ಕೆಲವರು ತಮ್ಮ ಮೂಲ ಭಾಷೆಯನ್ನು ಕಳೆದುಕೊಂಡು ಕನ್ನಡವನ್ನೆ ತಮ್ಮ ಭಾಷೆಯನ್ನಾಗಿ ಸ್ವೀಕರಿಸಿರುವುದೂ ಸಾಧ್ಯ. ಆದರೆ ಉಳಿದವರು ಚಿಕ್ಕ - ಚಿಕ್ಕ ದ್ವಿಭಾಷಿಕ ಸಮುದಾಯಗಳಾಗಿ ರೂಪುಗೊಂಡರು. ಉತ್ತರ ಕನ್ನಡ ಜಿಲ್ಲೆಯ ಹಲವಾರು ಬುಡಕಟ್ಟು ಜನರು ಇದಕ್ಕೆ ನಿದರ್ಶನ". ಕೆ.ವಿ.ನಾರಾಯಣ (1998:02)

ಕರ್ನಾಟಕದಲ್ಲಿ ಗಡಿಭಾಗದ ಸಂಪರ್ಕದಿಂದ ಉಂಟಾದ ದ್ವಿಭಾಷಿಕತೆ ಒಂದಾದರೆ, ವಲಸೆಯ ಕಾರಣಗಳಿಗಾಗಿ ಹೆಚ್ಚಿನ ಸಂದರ್ಭದಲ್ಲಿ ದ್ವಿಭಾಷಿಕತೆ ಉಂಟಾಗುತ್ತಿದೆ. ಎಲ್ಲಾ ಕ್ಷೇತ್ರಗಳಲ್ಲೂ ಆಧುನಿಕವಾಗಿ ಸಜ್ಜುಗೊಳ್ಳುತ್ತಿರುವ ರಾಜಧಾನಿಯಾದ ಬೆಂಗಳೂರು ನಗರಕ್ಕೆ ಸಾಮಾನ್ಯವಾಗಿ ಭಾರತದ ಇತರೆಡೆಗಳಿಂದ ಮತ್ತು ರಾಜಧಾನಿಗೆ ಹತ್ತಿರದ ಗಡಿ ರಾಜ್ಯಗಳಾದ ತಮಿಳುನಾಡು, ಆಂಧ್ರಪ್ರದೇಶ, ಕೇರಳಗಳಿಂದ ಹೆಚ್ಚಿನ ವಲಸಿಗರು ಹಲವಾರು ಕಾರಣಗಳಿಗಾಗಿ ಬಂದು ನೆಲೆಸಿದ್ದಾರೆ. ಅಲ್ಲದೆ ವ್ಯಾಪಾರ ಕೇಂದ್ರಗಳು, ಔದ್ಯಮಿಕ ಪ್ರಕ್ರಿಯೆಗಳು ಉಂಟಾಗಿರುವ ಹುಬ್ಬಳ್ಳಿ, ಧಾರವಾಡ, ಬಳ್ಳಾರಿಯಂತಹ ಜಿಲ್ಲೆಗಳಿಗೆ ಆಂಧ್ರ, ಮಹಾರಾಷ್ಟ್ರ, ಗೋವಾ, ತಮಿಳುನಾಡಿನಿಂದ ಅನೇಕ ಭಾಷಿಕರು ಬಂದು ನೆಲೆಸಿದ್ದಾರೆ. ಇದರಿಂದ ಇವರೆಲ್ಲಾ ತಮ್ಮ ಸ್ವಭಾಷೆಗಳನ್ನು ಕೆಲವು ಆವರಣಗಳಲ್ಲಿ ಉಳಿಸಿಕೊಂಡು ಕನ್ನಡವನ್ನು ಹೆಚ್ಚಿನ ಸಂದರ್ಭದಲ್ಲಿ ಬಳಸುತ್ತಿದ್ದಾರೆ. ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ಶೈಕ್ಷಣಿಕವಾಗಿ ಮೇಲ್‌ಮುಖ ಚಲನೆಯ ಕಡೆಗೆ ಚಲಿಸುವ ಭಾಷಾ ಅಲ್ಪಸಂಖ್ಯಾತರು ಕನ್ನಡ ಭಾಷೆಗೆ ಹೆಚ್ಚಿನ ಪಲ್ಲಟವನ್ನು ಹೊಂದುತ್ತಾರೆ. 1991 ರ ಜನಗಣತಿಯ ಅಂಕಿ ಅಂಶಗಳ ಪ್ರಕಾರ ಕರ್ನಾಟಕದಲ್ಲಿ ಒಟ್ಟು 33 ಲಕ್ಷ ತೆಲುಗು ಸ್ವಭಾಷಿಕರಲ್ಲಿ 5 ಲಕ್ಷ ತೆಲುಗು ವಲಸಿಗರಿದ್ದರೆ, 17 ಲಕ್ಷ ಜನ ತಮಿಳು ಸ್ವಭಾಷಿಕರಲ್ಲಿ 5 ಲಕ್ಷ ತಮಿಳು

ವಲಸಿಗರಿದ್ದಾರೆ. 8 ಲಕ್ಷ ಮಲೆಯಾಳಂ ಸ್ವಭಾಷಿಕರಲ್ಲಿ 2 ಲಕ್ಷ ಜನ ಮಲೆಯಾಳಂ ವಲಸಿಗರೆಂದು ತಿಳಿದುಬಂದಿದೆ. ಕರ್ನಾಟಕಕ್ಕೆ ಬಂದ ವಲಸಿಗರಲ್ಲಿ ಆಂಧ್ರ, ತಮಿಳುನಾಡು ಮತ್ತು ಕೇರಳದ ಭಾಷಿಕರೇ ಗುರುತಿಸುವ ಸಂಖ್ಯೆಯಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಕಂಡುಬಂದಿರುವುದು ಜನಗಣತಿಯ ಅಂಕಿ - ಅಂಶಗಳ ಆಧಾರದಿಂದ ತಿಳಿದುಬಂದಿದೆ.

ತುಳು ಮತ್ತು ಕೊಡವ ಭಾಷೆಗಳು ರಾಜ್ಯಮಟ್ಟದಲ್ಲಿ ಅಲ್ಪಸಂಖ್ಯಾತರ ಸ್ಥಾನಮಾನವನ್ನುಗಳಿಸಿದ ಭಾಷೆಗಳಾಗಿದ್ದರೆ, ಕೆಲವು ಜಿಲ್ಲೆಗಳಲ್ಲಿ ಈ ಭಾಷೆಗಳೇ ಪ್ರಬಲವಾದ ಭಾಷೆಯಾಗಿದೆ. ದಕ್ಷಿಣ ಕನ್ನಡದ ಜಿಲ್ಲೆಗಳಲ್ಲಿ 88 ತುಳು ಭಾಷಿಕರಿದ್ದರೆ 46 % ಜಿಲ್ಲಾ ಮಟ್ಟದಲ್ಲಿ ತುಳು ಭಾಷಿಕರಿದ್ದಾರೆ. 88 % ಭಾಷಿಕರು ಕೊಡವ ಭಾಷೆಯನ್ನು ಮನೆಮಾತಾಗಿ ಮಾತನಾಡುತ್ತಿದ್ದರೆ, ಒಟ್ಟು ರಾಜ್ಯದಲ್ಲಿ 18 % ಕೊಡವರು ಕೊಡಗಿನಲ್ಲಿ ನೆಲೆಸಿದ್ದಾರೆ. ಉರ್ದು, ಹಿಂದಿ, ಇಂಗ್ಲಿಶ್ ಭಾಷೆಗಳನ್ನು ಆಡುವ ಭಾಷಿಕರ ಸಂಖ್ಯೆಯೂ ಗಣನೀಯವಾಗಿದೆ. ಉರ್ದು ಭಾಷಿಕರು 1961 ರಲ್ಲಿ 9 % ರಷ್ಟಿದ್ದರೆ 1991 ರಲ್ಲಿ 10 % ಗಳಿರುವುದು ಕಾಣುತ್ತಿದ್ದರೆ, ಹಿಂದಿ 1961 ರಲ್ಲಿ 0.4 % ಗಳಷ್ಟು ಇದ್ದದ್ದು 1991 ರಲ್ಲಿ 1.8 % ಆಗಿದೆ. ಹಿಂದಿ ಭಾರತದ ಆಡಳಿತ ಭಾಷೆಯಾಗಿರುವುದರಿಂದಲೂ, ಇಂಗ್ಲಿಶ್ ಸಂಪರ್ಕ ಭಾಷೆಯಾಗಿರುವುದರಿಂದಲೂ ಅನೇಕ ಭಾಷಿಕರು ಈ ಎರಡೂ ಭಾಷೆಗಳನ್ನು ಬಳಸುತ್ತಿದ್ದಾರೆ. ಆಂಗ್ಲೋ ಇಂಡಿಯನ್ಸ್ ಮಾತ್ರ ಇಂಗ್ಲಿಶ್ ಭಾಷೆಯನ್ನು ಮನೆಮಾತುಗಳೆಂದು ಹೇಳಿಕೊಂಡಿದ್ದಾರೆ. ಮಿಕ್ಕಂತೆ ಶಿಕ್ಷಣಕ್ಕಾಗಿ, ಆಡಳಿತಕ್ಕಾಗಿ, ವ್ಯಾಪಾರ ವ್ಯವಹಾರಗಳಿಗಾಗಿ ಇಂಗ್ಲಿಶ್ ಭಾಷೆಯನ್ನು ಬಳಸಲಾಗುತ್ತಿದೆ. ಇಂಗ್ಲಿಶ್ 1961 ಜನಗಣತಿಯಲ್ಲಿ 0.07 % ಇದ್ದದ್ದು 1991 ರಲ್ಲಿ 0.03 % ಗಳಷ್ಟಿದೆ.

ಕರ್ನಾಟಕದಲ್ಲಿನ ಭಾಷಾವಾರು ಗುಂಪುಗಳಲ್ಲಿ ಎರಡನೆಯ ಭಾಷೆಯನ್ನು ಕಲಿತು ದ್ವಿಭಾಷಿಕರಾದ ಪ್ರಮಾಣವನ್ನು ನೋಡಿದರೆ ಕೋಷ್ಟಕ - 1 ರಲ್ಲಿ ಕಾಣುವಂತೆ ಕೊಂಕಣಿಗಳಲ್ಲಿ ಎರಡನೆ ಭಾಷೆಯನ್ನು ಕಲಿತು ದ್ವಿಭಾಷಿಕರಾಗಿರುವ ಪ್ರಮಾಣ ಹೆಚ್ಚಾಗಿದ್ದು ಎರಡನೇ ಸ್ಥಾನದಲ್ಲಿ ಇಂಗ್ಲಿಶ್ ಭಾಷಿಕರು ಮತ್ತು ಮೂರನೇ ಸ್ಥಾನದಲ್ಲಿ ಮಲೆಯಾಳಂ ಭಾಷಿಕರಿರುವುದು ಕಾಣುತ್ತಿದೆ. ಮಿಕ್ಕಂತೆ ತುಳುವರು, ಹಿಂದಿ ಭಾಷಿಕರು, ತೆಲುಗರು, ತಮಿಳರು, ಕೊಡವರು, ಉರ್ದು ಭಾಷಿಕರು, ಕ್ರಮವಾಗಿದ್ದು, ಮರಾಠಿ ಭಾಷಿಕರು ಎರಡನೇ ಭಾಷೆಯನ್ನು ಕಲಿತು ದ್ವಿಭಾಷಿಕರಾಗುವ ಪ್ರಮಾಣ ಕಡಿಮೆ ಇದ್ದಂತಿದೆ. ಕೊಂಕಣಿಗಳು ಎರಡನೆಯ ಭಾಷೆಯನ್ನು ಕಲಿತು ದ್ವಿಭಾಷಿಕರಾದ ಪ್ರಮಾಣದಲ್ಲಿ ಹೆಚ್ಚಿರಲು ಕಾರಣ ಕೊಂಕಣಿ ಕೇವಲ ಆಡುಭಾಷೆ, ಅದಕ್ಕೆ ಲಿಪಿ ಇಲ್ಲವಾದ್ದರಿಂದ ಶಿಕ್ಷಣದ ಸಂದರ್ಭಗಳಿಗೆ ಈ ಭಾಷಿಕರು ಒಳಗಾಗುವಾಗ ಕನ್ನಡ ಅಥವಾ ಇಂಗ್ಲಿಶ್ ಸಾಕ್ಷರತೆಯ ಸಂದರ್ಭಗಳಿಗೆ ಒಳಗಾಗುವ ಅಗತ್ಯಗಳಿರುವುದರಿಂದಲೂ, ವ್ಯಾಪಾರ, ವಾಣಿಜ್ಯ ಇತರ ವೃತ್ತಿಗಳಲ್ಲಿ ತೊಡಗಿರುವವರು ಅನ್ಯಭಾಷಿಕರೊಂದಿಗೆ ವ್ಯವಹರಿಸುವಾಗ ಬೇರೊಂದು ಭಾಷೆಯನ್ನು ಕಲಿತು ಬಳಸುವ ಅನಿವಾರ್ಯವಿದೆ. ಇಂಗ್ಲಿಶ್ ಭಾಷಿಕರು ಭಾರತದ ಸಂದರ್ಭದಲ್ಲಿ ಬದುಕು ಮಾಡಿದ ಸಂದರ್ಭದಲ್ಲಿ

ಇಲ್ಲಿನ ಸಾಮಾಜಿಕ ಪರಿಸರಗಳ ಭಾಷೆಯನ್ನು ಕಲಿಯುವ ಅನಿವಾರ್ಯಗಳು ಉಂಟಾಗುತ್ತವೆಯಾದ್ದರಿಂದಲೂ, ಭಾರತದ ಆಡಳಿತ ಭಾಷೆ ಮತ್ತು ಇತರ ರಾಜ್ಯಭಾಷೆಗಳನ್ನು ಕಲಿತು ದ್ವಿಭಾಷಿಕರಾಗಿರಬಹುದು. ಮಲೆಯಾಳಂ ಭಾಷಿಕರು ಹೆಚ್ಚಿನವರು ಕೇರಳ ರಾಜ್ಯದಿಂದ ವಲಸೆ ಬಂದವರಾಗಿದ್ದು ಕೊಡಗು, ದಕ್ಷಿಣ ಕನ್ನಡದ ಕಡೆಗಳಲ್ಲಿ ಕಾಫಿ - ಟೀ ತೋಟಗಳಲ್ಲಿ ಕೂಲಿ ಕೆಲಸ ಮಾಡಲು, ಬೆಂಗಳೂರಂತಹ ನಗರಗಳಲ್ಲಿ ಅನೇಕ ಉದ್ಯೋಗಗಳನ್ನು ಹುಡುಕಿಕೊಂಡು ಬಂದಿರುವವರ ಸಂಖ್ಯೆಯೇ ಇವರಲ್ಲಿ ಹೆಚ್ಚು ಇದ್ದಂತಿದೆ. ಅಲ್ಲದೆ ಶಿಕ್ಷಣಕ್ಕಾಗಿಯೂ ಅನೇಕರು ಕರ್ನಾಟಕದ ಹಲವು ಭಾಗಗಳಿಗೆ ಬಂದು ನೆಲೆಸಿರುವುದರಿಂದ ಎರಡನೇ ಭಾಷೆಯೊಂದನ್ನು ಕಲಿಯುವ ಪ್ರಮಾಣ ಇವರಲ್ಲಿ ಹೆಚ್ಚು ಇದೆ. ಮಿಕ್ಕಂತೆ ಇತರೆ ಭಾಷಾ ಗುಂಪುಗಳಲ್ಲಿ ಸ್ವಭಾಷಿಕರು ಶಿಕ್ಷಣಕ್ಕಾಗಿ, ಉದ್ಯೋಗಕ್ಕಾಗಿ, ವ್ಯಾಪಾರಕ್ಕಾಗಿ, ವೈವಾಹಿಕ ಸಂಬಂಧಗಳಿಂದಾಗಿ ಹೀಗೆ ಅನೇಕ ಕಾರಣಗಳಿಂದಾಗಿ ಬೇರೊಂದು ಭಾಷೆಯನ್ನು ಕಲಿತು ದ್ವಿಭಾಷಿಕರಾಗುವುದು ಗಮನಿಸಬಹುದಾಗಿದೆ. ಕರ್ನಾಟಕದಲ್ಲಿರುವ ಭಾಷಾ ಗುಂಪುಗಳಲ್ಲಿ ಕನ್ನಡಿಗರನ್ನು ಹೊರತುಪಡಿಸಿದರೆ ಇತರೆ ಭಾಷಾ ಗುಂಪುಗಳಲ್ಲಿನ ಭಾಷಿಕರು ಅಧಿಕ ಸಂಖ್ಯೆಯಲ್ಲಿ ದ್ವಿಭಾಷಿಕರಿರುವುದನ್ನು ಕಾಣಬಹುದಾಗಿದೆ. ಅದಕ್ಕೆ ವಿರುದ್ಧವಾಗಿ ಕನ್ನಡ ಭಾಷಿಕರಲ್ಲಿ ಕಡಿಮೆ ದ್ವಿಭಾಷಿಕರಿರುವುದು ಕಾಣುತ್ತಿದೆ. ಕಾರಣ ಕರ್ನಾಟಕದಲ್ಲಿರುವ ಕನ್ನಡಿಗರು ಬೇರೊಂದು ಭಾಷೆಯನ್ನು ಕಲಿತು ದ್ವಿಭಾಷಿಕರಾಗುವ ಅವಶ್ಯಕತೆಗಿಂತ ಇತರೆ ಭಾಷಾಗುಂಪಿನ ಭಾಷಿಕರು ಕನ್ನಡವನ್ನು ಕಲಿತು ದ್ವಿಭಾಷಿಕರಾಗುವ ಪ್ರಮಾಣ ಹೆಚ್ಚಾಗುತ್ತಿದೆ. ಕರ್ನಾಟಕದಲ್ಲಿ ಆಡಳಿತ ಭಾಷೆ ಕನ್ನಡ ಆಗಿರುವುದರಿಂದ ಭಾಷಾ ಅಲ್ಪಸಂಖ್ಯಾತರೇ ಹೆಚ್ಚು ಕನ್ನಡವನ್ನು ಕಲಿತು ದ್ವಿಭಾಷಿಕರಾಗಿದ್ದಾರೆ. ಇದಕ್ಕೆ ವಿರುದ್ಧವಾಗಿ ಕನ್ನಡಿಗರು ಸಮಾಜದಲ್ಲಿ ಉಂಟಾಗುತ್ತಿರುವ ಇತ್ತೀಚಿನ ಹಲವು ಬೆಳವಣಿಗೆಗಳಿಂದಾಗಿ ಉನ್ನತ ಮಟ್ಟದ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಮತ್ತು ಅಧಿಕಾರದ ಸ್ಥಾನಮಾನಗಳನ್ನು ಪಡೆಯಲು ಇಂಗ್ಲಿಶ್ ಭಾಷೆಯನ್ನು ಕಲಿತು ದ್ವಿಭಾಷಿಕರಾಗುತ್ತಿರುವುದೇ ಹೆಚ್ಚಾಗುತ್ತಿದೆ.

ಕೋಷ್ಟಕ 2 ರಲ್ಲಿ ಭಾಷಾ ಅಲ್ಪ ಸಂಖ್ಯಾತರಲ್ಲಿ ಎರಡನೇ ಭಾಷೆಯಾಗಿ ಕನ್ನಡವನ್ನು ಬಲ್ಲವರ ಪ್ರಮಾಣವನ್ನು ನೋಡಿದಾಗ ಕನ್ನಡವನ್ನು ಕಲಿತು ದ್ವಿಭಾಷಿಕರಾದ ಪ್ರಮಾಣದಲ್ಲಿ ಕೊಡವ ಭಾಷಿಕರು 75 % ಗಳಷ್ಟಿದ್ದರೆ, ತುಳು ಮತ್ತು ಕೊಂಕಣಿ ಭಾಷಿಕರು 62 % ಗಳಷ್ಟಿರುವುದು ಕಾಣುತ್ತಿದೆ. ಕರ್ನಾಟಕ ಆಂಧ್ರದ ಅತಿ ಉದ್ದದ ಗಡಿಭಾಗವನ್ನು ಹೊಂದಿರುವುದರಿಂದ ಗಡಿ ಮತ್ತು ಕರ್ನಾಟಕದ ಇತರೆ ಭಾಗಗಳಲ್ಲಿ ಇರುವ ತೆಲುಗು ಭಾಷಿಕರು 55.1 % ಗಳಷ್ಟು ಕನ್ನಡವನ್ನು ಕಲಿತು ದ್ವಿಭಾಷಿಕರಾಗುವುದು ಕಾಣುತ್ತಿದೆ. ಮರಾಠಿ, ಉರ್ದು, ಮಲೆಯಾಳಂ, ಮತ್ತು ತಮಿಳು ಭಾಷಿಕರು ಕನ್ನಡವನ್ನು ಕಲಿತು ದ್ವಿಭಾಷಿಕರಾಗಿರುವುದು ಪ್ರಮಾಣದಲ್ಲಿ ಸ್ವಲ್ಪ ಮಟ್ಟಿಗೆ ಕಡಿಮೆ ಎನ್ನಬಹುದು. ಇಂಗ್ಲಿಶ್ ಭಾಷಿಕರು ಕನ್ನಡವನ್ನು ಕಲಿತು ದ್ವಿಭಾಷಿಕರಾದ ಪ್ರಮಾಣದಲ್ಲಿ ತುಂಬಾ ಕಡಿಮೆ ಪ್ರಮಾಣದಲ್ಲಿದೆ. ಭಾಷಾ ಅಲ್ಪಸಂಖ್ಯಾತರಲ್ಲಿ ಎರಡನೇ ಭಾಷೆಯಾಗಿ ಕನ್ನಡವನ್ನು ಕಲಿತು ದ್ವಿಭಾಷಿಕರಾದವರಲ್ಲಿ ಕೊಡವ, ತುಳು ಮತ್ತು ಕೊಂಕಣಿ ಭಾಷಿಕರೇ

ಕ್ರಮವಾಗಿ ಮೊದಲ ಮೂರು ಸ್ಥಾನಗಳಲ್ಲಿ ಇರುವುದಕ್ಕೆ ಕಾರಣ. ಆ ಭಾಷೆಗಳು ಕೇವಲ ಆಡುಭಾಷೆಗಳಾಗಿದ್ದು, ಈ ಭಾಷೆಗಳಿಗೆ ಲಿಪಿ ಇಲ್ಲದಿದ್ದರಿಂದ ಬರವಣಿಗೆಯ ನೆಲೆಯಲ್ಲಿ ಈ ಭಾಷೆಗಳನ್ನು ಬಳಸಲು ಸಾಧ್ಯವಿಲ್ಲ. ಇತ್ತೀಚೆಗಷ್ಟೆ ತುಳು ಭಾಷೆಯಲ್ಲಿ ಕನ್ನಡ ಲಿಪಿಯನ್ನು ಬಳಸಲಾಗುತ್ತಿದೆ. ಈ ಕಾರಣದಿಂದಾಗಿ ಕೊಡವ, ತುಳು ಮತ್ತು ಕೊಂಕಣಿ ಭಾಷಿಕರು ಮೌಖಿಕ ನೆಲೆಗಳಲ್ಲಿ ತಮ್ಮ ಭಾಷೆಗಳನ್ನು ಬಳಸಿದರೂ, ಸಾಕ್ಷರತೆಯ ನೆಲೆಗಳಿಗೆ ಒಳಗಾಗುವಾಗ ಕರ್ನಾಟಕದ ಸಂದರ್ಭದಲ್ಲಿ ಕನ್ನಡ ಮತ್ತು ಇಂಗ್ಲಿಶ್‌ನ ಸಾಕ್ಷರತೆಯ ಸಂದರ್ಭಗಳಿಗೆ ಒಳಗಾಗುವುದರಿಂದಲೂ, ಶಿಕ್ಷಣ, ಉದ್ಯೋಗ, ವ್ಯಾಪಾರ, ಆಡಳಿತದ ಕಾರಣಗಳು ಮುಂತಾದ ಕಾರಣಗಳಿಂದಾಗಿ ಕನ್ನಡಿಗರೊಂದಿಗೆ ದಿನನಿತ್ಯದ ವ್ಯವಹಾರಗಳಿಗೆ ಸಂಪರ್ಕಿಸುವ ಅಗತ್ಯವಿರುವುದರಿಂದ ಇವರಲ್ಲಿ ಕನ್ನಡವನ್ನು ಎರಡನೇ ಭಾಷೆಯಾಗಿ ಕಲಿತು ದ್ವಿಭಾಷಿಕರಾದ ಪ್ರಮಾಣ ಹೆಚ್ಚಿದೆ. ಮಿಕ್ಕಂತೆ ಮರಾಠಿ, ಉರ್ದು, ಮಲೆಯಾಳಂ, ತಮಿಳು, ಹಿಂದಿ ಭಾಷಿಕರಲ್ಲಿ ಕನ್ನಡವನ್ನು ಕಲಿತು ದ್ವಿಭಾಷಿಕರಾಗುವ ಅವಶ್ಯಕತೆಗಳು ಸಾಮಾಜೀಕರಣದಿಂದ ಮಾತ್ರವೇ ಹೆಚ್ಚು ಇರುವುದು ಶೈಕ್ಷಣಿಕ ಸಂದರ್ಭಗಳಿಗೆ ಈ ಭಾಷಿಕರು ಒಳಗಾಗುವಾಗ ಕನ್ನಡಕ್ಕಿಂತ ಇಂಗ್ಲಿಶ್ ಭಾಷೆಗೆ ಹೆಚ್ಚು ಒಳಗಾಗುತ್ತಾರೆ. ಕನ್ನಡದ ಶೈಕ್ಷಣಿಕ ಸಂದರ್ಭಗಳಿಗೆ ಒಳಗಾದರೂ ಬಹಳ ಕಡಿಮೆ ಪ್ರಮಾಣದಲ್ಲಿ. ಹಿಂದಿ ಭಾಷಿಕರು ಕರ್ನಾಟಕದಲ್ಲಿ ಹಲವಾರು ಕಾರಣಗಳಿಗಾಗಿ ನೆಲೆಸಿರುವುದರಿಂದ ಸಾಮಾಜೀಕರಣದಿಂದಾಗಿ, ಕನ್ನಡವನ್ನು ಕಲಿತಿರಬಹುದು. ಕನ್ನಡದ ಶೈಕ್ಷಣಿಕ ಸಂದರ್ಭಗಳಿಗೆ ಹಿಂದಿ ಭಾಷಿಕರು ಒಳಗಾಗುವ ಪ್ರಮಾಣ ಬೆರಳೆಣಿಕೆಯಷ್ಟು ಮಾತ್ರವಾದ್ದರಿಂದ ಮೌಖಿಕ ನೆಲೆಗಳಲ್ಲಿ ಮಾತ್ರ ಕನ್ನಡ ಭಾಷೆಯ ಕೌಶಲಗಳನ್ನು ಪಡೆದಿರುತ್ತಾರೆ. ಕಡೆಯದಾಗಿ ಇಂಗ್ಲಿಶ್ ಭಾಷಿಕರಿಗೆ ಕನ್ನಡವನ್ನು ಕಲಿತು ದ್ವಿಭಾಷಿಕರಾಗುವ ಪ್ರಮಾಣ ಕಡಿಮೆ. ಕನ್ನಡಿಗರೇ ಹೆಚ್ಚಾಗಿ ಇಂಗ್ಲಿಶ್ ಭಾಷೆಗೆ ನುಡಿಪಲ್ಲಟ ಮಾಡುವುದರಿಂದಲೂ, ಇಂಗ್ಲಿಶ್ ಭಾಷೆಯನ್ನು ಕಲಿಯುವ ಆಸಕ್ತಿಯನ್ನು ಹೊಂದಿರುವುದರಿಂದಲೂ, ಇಂಗ್ಲಿಶ್ ಭಾಷಿಕರಿಗೆ ಕನ್ನಡವನ್ನು ಕಲಿತು ದ್ವಿಭಾಷಿಕರಾಗುವುದಕ್ಕಿಂತ ಕನ್ನಡಿಗರೇ ಇಂಗ್ಲಿಶ್ ಭಾಷೆಯನ್ನು ಕಲಿತು ದ್ವಿಭಾಷಿಕರಾಗುವ ಅವಶ್ಯಕತೆಗಳು ಇಂದಿನ ದಿನಗಳಲ್ಲಿ ಹೆಚ್ಚಾಗುತ್ತಿವೆ. ಕನ್ನಡ ಕರ್ನಾಟಕದಲ್ಲಿ ಆಡಳಿತ ಭಾಷೆಯಾದ ಕಾರಣದಿಂದಾಗಿ ಆಡಳಿತದಲ್ಲಿ ವ್ಯವಹರಿಸುವ ಸಂದರ್ಭಗಳಲ್ಲಿ ಮಾತ್ರ ಇಂಗ್ಲಿಶ್ ಭಾಷಿಕರು ಕನ್ನಡವನ್ನು ಕಲಿಯುವ ಅನಿವಾರ್ಯಗಳು ಉಂಟಾಗಬಹುದಷ್ಟೆ.

ಕೋಷ್ಟಕ - 3 ರಲ್ಲಿ ಕಾಣುವಂತೆ ಕರ್ನಾಟಕದಲ್ಲಿ ದ್ವಿತೀಯ ಭಾಷೆಯನ್ನು ಬಲ್ಲ ಕನ್ನಡಿಗರ ಪ್ರಮಾಣವನ್ನು ನೋಡಿದಾಗ 1991 ರ ಅಂಕಿ - ಅಂಶಗಳಲ್ಲಿ ಕನ್ನಡಿಗರು ದ್ವಿಭಾಷಿಕರಾಗಿರುವ ಪ್ರಮಾಣದಲ್ಲಿ ಇಂಗ್ಲಿಶ್ ಭಾಷೆಯನ್ನು ಕಲಿತು ದ್ವಿಭಾಷಿಕರಾಗಿರುವ ಪ್ರಮಾಣ 10 % ಗಳಷ್ಟಿದ್ದು, ಎರಡನೆಯ ಸ್ಥಾನದಲ್ಲಿ ತೆಲುಗು ಭಾಷೆಯನ್ನು 5 % ಗಳಷ್ಟು ಕಲಿತು ದ್ವಿಭಾಷಿಕರಾಗಿರುವುದು ಕಾಣುತ್ತಿದೆ. ಮೂರನೇ ಸ್ಥಾನದಲ್ಲಿ ಹಿಂದಿ ಭಾಷೆಯಲ್ಲಿ 3.53 % ಗಳಷ್ಟು ದ್ವಿಭಾಷಿಕರಾಗಿರುವುದು ಕಾಣುತ್ತಿದೆ. ಮರಾಠಿಯನ್ನು ಕಲಿತು ದ್ವಿಭಾಷಿಕರಾದವರು 1 % ಗಳಷ್ಟು ಮಾತ್ರ ಇದೆ. ಕನ್ನಡಿಗರು ಇಂಗ್ಲಿಶ್, ತೆಲುಗು, ಹಿಂದಿ ಭಾಷೆಗಳಲ್ಲಿ ದ್ವಿಭಾಷಿಕರಾಗುತ್ತಿರುವ ಪ್ರಮಾಣ ಪ್ರತಿ ಹತ್ತು ವರ್ಷಗಳಲ್ಲಿ

ಹೆಚ್ಚಾಗುತ್ತಿದೆ. ಜಾಗತಿಕ ಸಂದರ್ಭದಲ್ಲಾಗುತ್ತಿರುವ ಹಲವು ಬದಲಾವಣೆಗಳಿಂದಾಗಿ ಉನ್ನತವಾದ ಸ್ಥಾನಮಾನಗಳನ್ನು ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಪಡೆದುಕೊಳ್ಳಲು ಮತ್ತು ಉನ್ನತವಾದ ಅಧಿಕಾರದ ಸ್ಥಾನಮಾನಗಳಿಗಾಗಿ ಇಂಗ್ಲಿಶ್ ಅವಶ್ಯವಿರುವುದರಿಂದಲೂ ಕನ್ನಡಿಗರು ಶಿಕ್ಷಣದ ಮೂಲಕ ಇಂಗ್ಲಿಶ್ ಭಾಷೆಯನ್ನು ಕಲಿತು ದ್ವಿಭಾಷಿಕರಾಗಿರುವುದು ಹೆಚ್ಚಾಗುತ್ತಿದೆ. ಸಾಮಾಜೀಕರಣದಿಂದ ಇಂಗ್ಲಿಶ್ ಭಾಷೆಯನ್ನು ಕನ್ನಡಿಗರು ಪಡೆಯುವ ಸಂದರ್ಭಗಳು ಕಡಿಮೆ ಇರುವುದಲ್ಲದೆ, ಇತರ ಭಾಷೆಗಳಂತೆ ಇಂಗ್ಲಿಶ್ ಭಾಷೆಯ ಕಲಿಕೆಯು ಸಹಜವಾಗಿ ಲಭಿಸದೇ ಇರುವುದು ಇನ್ನೊಂದು ಕಾರಣ. ಕರ್ನಾಟಕ - ಆಂಧ್ರಪ್ರದೇಶದ ಬಹು ಉದ್ದದ ತೆಲುಗು ಗಡಿಭಾಗವನ್ನು ಹೊಂದಿರುವುದರಿಂದ ದಿನನಿತ್ಯದ ವ್ಯವಹಾರಗಳಿಗಾಗಿ, ವ್ಯಾಪಾರ - ವಾಣಿಜ್ಯ, ಶಿಕ್ಷಣ, ಉದ್ಯೋಗ, ವೈವಾಹಿಕ ಸಂಬಂಧಗಳು ಗಡಿಭಾಗದ ಜನರೊಂದಿಗೆ ಮತ್ತು ಕರ್ನಾಟಕದ ಇತರ ಭಾಗದ ಕನ್ನಡಿಗರೊಂದಿಗೆ ನಡೆಯುವುದರಿಂದ ಕನ್ನಡಿಗರು ತೆಲುಗು ಭಾಷೆಯನ್ನು ಕಲಿತು ದ್ವಿಭಾಷಿಕರಾಗಿರುವುದು ಕಾಣುತ್ತದೆ. ಹಿಂದಿ ಭಾಷೆಯು ಭಾರತದ ಆಡಳಿತ ಭಾಷೆಯಾಗಿರುವುದರಿಂದಲೂ, ಕೇಂದ್ರ ಸರ್ಕಾರದ ಉದ್ಯೋಗಗಳಿಗೆ ಹಿಂದಿ ಭಾಷೆಯ ಅವಶ್ಯಕತೆ ಇರುವುದರಿಂದಲೂ, ಕೇಂದ್ರ ಲೋಕ ಸೇವಾ ಆಯೋಗದಂತಹ ಸ್ಪರ್ಧಾತ್ಮಕ ಪರೀಕ್ಷೆಗಳಿಗಾಗಿಯೂ, ಎಲ್ಲಕ್ಕಿಂತ ಮುಖ್ಯವಾಗಿ ಶಿಕ್ಷಣದಲ್ಲಿ ತ್ರಿಭಾಷಾ ಸೂತ್ರದಲ್ಲಿ ಹಿಂದಿಯನ್ನು ಪಠ್ಯವಾಗಿ ಕಲಿಯುವುದರಿಂದಲೂ, ಕನ್ನಡಿಗರು ಹಿಂದಿಯನ್ನು ಕಲಿತು ದ್ವಿಭಾಷಿಕರಾಗಿರುವುದನ್ನು ಕಾಣಬಹುದು. ಮರಾಠಿಯನ್ನು ಕಲಿತು ದ್ವಿಭಾಷಿಕರಾಗುವ ಕನ್ನಡಿಗರಲ್ಲಿ ಮಹಾರಾಷ್ಟ್ರ - ಕರ್ನಾಟಕ ಗಡಿ ಪ್ರದೇಶದ ಭಾಷಿಕರಾಗಿದ್ದು, ಅನೇಕ ಕಾರಣಗಳಿಗಾಗಿ ಮರಾಠಿ ಭಾಷಿಕರೊಂದಿಗೆ ವ್ಯವಹರಿಸುವುದರಿಂದ ಮರಾಠಿಯನ್ನು ಕಲಿತು ದ್ವಿಭಾಷಿಕರಾಗುವ ಅವಶ್ಯಕತೆ ಇದೆ. ಆದರೆ ಇದರ ಪ್ರಮಾಣ ಕಡಿಮೆ. ಕನ್ನಡಿಗರು ತಮಿಳು ಭಾಷೆಯನ್ನು ಕಲಿತು ದ್ವಿಭಾಷಿಕರಾದ ಪ್ರಮಾಣದಲ್ಲಿ 0.51 % ಗಳಷ್ಟಿರುವುದು ಕಾಣುತ್ತಿದೆ. ತಮಿಳರು ಹೆಚ್ಚು ನೆಲೆಸಿರುವ ಬೆಂಗಳೂರು, ಕೆ.ಜಿ.ಎಫ್. ನಗರ ಸಂದರ್ಭಗಳಲ್ಲಿ ಮಾತ್ರ ಕನ್ನಡ - ತಮಿಳು ದ್ವಿಭಾಷಿಕತೆ ಕಾಣಬಹುದಾಗಿದೆ. ಉದ್ಯೋಗಗಳಲ್ಲಿರುವವರು ಆತ್ಮೀಯತೆಗಾಗಿಯೋ, ಅಕ್ಕಪಕ್ಕದಲ್ಲಿ ತಮಿಳು ಕುಟುಂಬಗಳ ಜೊತೆ ವ್ಯವಹರಿಸುವ ಸಂದರ್ಭಗಳಿದ್ದರೆ ಮಾತ್ರ ಕನ್ನಡಿಗರು ತಮಿಳನ್ನು ಕಲಿತು ದ್ವಿಭಾಷಿಕರಾಗಿರುವುದು ಬೆಂಗಳೂರಿನಂತಹ ನಗರ ಸಂದರ್ಭದಲ್ಲಿ ಗಮನಿಸಬಹುದಾಗಿದೆ. ಕನ್ನಡಿಗರು ತಮಿಳನ್ನು ಕಲಿತು ದ್ವಿಭಾಷಿಕರಾಗಿದ್ದರೂ ತಮಿಳಿಗೆ ಆಂಶಿಕ ಪಲ್ಲಟವನ್ನು ಮಾತ್ರ ಮಾತನಾಡುತ್ತಿರುತ್ತಾರೆ. ಮಿಕ್ಕಂತೆ ಇತರೆ ಭಾಷೆಗಳನ್ನು ಕಲಿತು ದ್ವಿಭಾಷಿಕರಾಗುವ ಅವಶ್ಯಕತೆಗಳು ಕನ್ನಡಿಗರಿಗೆ ಕರ್ನಾಟಕದ ಸಂದರ್ಭದಲ್ಲಿ ಕಡಿಮೆ ಪ್ರಮಾಣದಲ್ಲಿದೆ.

**ಕೋಷ್ಟಕ - 1**

## ಕರ್ನಾಟಕದಲ್ಲಿ ಭಾಷಾಗುಂಪುಗಳಲ್ಲಿನ ದ್ವಿಭಾಷಿಕರ ಪ್ರಮಾಣ

| ಭಾಷಾಗುಂಪುಗಳ ಸ್ವಭಾಷೆ | ಭಾಷಾಗುಂಪುಗಳಲ್ಲಿ 2ನೇ ಭಾಷೆಯನ್ನು ಬಲ್ಲವರ ಶೇಕಡಾವಾರು | | | |
|---|---|---|---|---|
| | 1961 | 1971 | 1981 | 1991 |
| ಕನ್ನಡ | 9.1 | 11.7 | 12.5 | 20.1 |
| ತೆಲುಗು | 47.1 | 50.1 | 56.9 | 64.2 |
| ತಮಿಳು | 43.6 | 50.6 | 56.5 | 58.6 |
| ಮಲೆಯಾಳಂ | 51.8 | 55.3 | 62.8 | 73.7 |
| ಮರಾಠಿ | 36.9 | 40.5 | 47.3 | 50.6 |
| ಕೊಂಕಣಿ | 67.6 | 70.3 | 78.6 | 82.0 |
| ತುಳು | 34.6 | 44.1 | 56.4 | 68.8 |
| ಕೊಡವ | 54.6 | 49.0 | 52.8 | 57.6 |
| ಉರ್ದು | 47.3 | 49.0 | 52.8 | 57.6 |
| ಹಿಂದಿ | 57.3 | 57.2 | 62.4 | 66.2 |
| ಇಂಗ್ಲಿಶ್ | 59.3 | 75.9 | 76.8 | 74.4 |

ಮೂಲ : ಭಾರತೀಯ ಜನಗಣತಿಯನ್ನು ಆಧರಿಸಿ ಸ್ಯಾಮುಯಲ್ ಜಾನ್‌ಸನ್‌ರವರು ಸಿದ್ಧಪಡಿಸಿದ ಕೋಷ್ಟಕ

"Communication and Linguistic situation in Karnataka : Demographic perspectives". 2001 (Working Paper-92) ISEC, Bangalore.

ಕೋಷ್ಟಕ - 2

## ಕರ್ನಾಟಕದಲ್ಲಿ ಭಾಷಾ ಅಲ್ಪಸಂಖ್ಯಾತರಲ್ಲಿ ೨ನೇ ಭಾಷೆಯಾಗಿ ಕನ್ನಡವನ್ನು ಬಲ್ಲವರು

| ಭಾಷಾ ಅಲ್ಪಸಂಖ್ಯಾತರು | ಭಾಷಾ ಅಲ್ಪಸಂಖ್ಯಾತರಲ್ಲಿ ಕನ್ನಡವನ್ನು ೨ನೇ ಭಾಷೆಯಾಗಿ ಬಳಸುತ್ತಿರುವವರ ಶೇಕಡಾವಾರು | | | |
|---|---|---|---|---|
| | 1961 | 1971 | 1981 | 1991 |
| ತೆಲುಗು | 42.5 | 45.8 | 53.8 | 55.1 |
| ತಮಿಳು | 28.7 | 34.2 | 48.9 | 50.1 |
| ಮಲೆಯಾಳಂ | 20.0 | 25.7 | 39.4 | 48.7 |
| ಮರಾಠಿ | 28.8 | 31.5 | 37.0 | 36.0 |
| ಕೊಂಕಣಿ | 47.4 | 49.4 | 63.0 | 62.5 |
| ತುಳು | 33.3 | 42.3 | 55.5 | 67.3 |
| ಕೊಡವ | 47.5 | 72.3 | 79.0 | 75.0 |
| ಉರ್ದು | 39.0 | 39.5 | 45.1 | 43.6 |
| ಹಿಂದಿ | 37.2 | 48.8 | 56.2 | 53.5 |
| ಇಂಗ್ಲಿಶ್ | 0 | 18.9 | 24.6 | 28.5 |

ಮೂಲ : ಭಾರತೀಯ ಜನಗಣತಿಯನ್ನು ಆಧರಿಸಿ ಸ್ಯಾಮುಯಲ್ ಜಾನ್‌ಸನ್‌ರವರು ಸಿದ್ಧಪಡಿಸಿದ ಕೋಷ್ಟಕ

"Communication and Linguistic situation in Karnataka : Demographic perspectives". 2001 (Working Paper-92) ISEC, Bangalore.

**ಕೋಷ್ಟಕ - 3**

## ಕರ್ನಾಟಕದಲ್ಲಿ ದ್ವಿತೀಯ ಭಾಷೆಯನ್ನು ಬಲ್ಲ ಕನ್ನಡಿಗರು ಶೇಕಡಾವಾರುಗಳಲ್ಲಿ

| ಕನ್ನಡಿಗರು ಬಲ್ಲ 2ನೇ ಭಾಷೆಗಳು | ಕನ್ನಡಿಗರು ಬಲ್ಲ ಭಾಷೆಗಳು ಶೇಕಡಾವಾರುಗಳಲ್ಲಿ | | | |
|---|---|---|---|---|
| | 1961 | 1971 | 1981 | 1991 |
| ತೆಲುಗು | 3.63 | 3.52 | 4.34 | 5.00 |
| ತಮಿಳು | 0.28 | 0.31 | 0.54 | 0.51 |
| ಮಲೆಯಾಳಂ | 0.02 | 0.05 | 0.06 | ಮಾಹಿತಿಯಿಲ್ಲ |
| ಮರಾಠಿ | 1.25 | 1.14 | 1.17 | 1.00 |
| ಕೊಂಕಣಿ | 0.09 | 0.12 | 0.14 | ಮಾಹಿತಿಯಿಲ್ಲ |
| ತುಳು | 0.47 | 0.43 | 0.59 | ಮಾಹಿತಿಯಿಲ್ಲ |
| ಕೊಡವ | 0.03 | 0.02 | 0.00 | ಮಾಹಿತಿಯಿಲ್ಲ |
| ಉರ್ದು | 0.50 | 0.39 | 0.34 | ಮಾಹಿತಿಯಿಲ್ಲ |
| ಹಿಂದಿ | 0.93 | 1.37 | — | 3.53 |
| ಇಂಗ್ಲಿಶ್ | 1.84 | 4.33 | — | 10.06 |
| ಯಾವುದೇ 2ನೇ ಭಾಷೆ | 9.13 | 11.70 | 12.47 | 20.10 |

ಮೂಲ : ಭಾರತೀಯ ಜನಗಣತಿಯನ್ನು ಆಧರಿಸಿ ಸ್ಯಾಮುಯಲ್ ಜಾನ್‌ಸನ್‌ರವರು ಸಿದ್ಧಪಡಿಸಿದ ಕೋಷ್ಟಕ

"Communication and Linguistic situation in Karnataka : Demographic perspectives". 2001 (Working Paper-92) ISEC, Bangalore.



■

ಅಧ್ಯಾಯ : ನಾಲ್ಕು

# ಬಳ್ಳಾರಿ ಜಿಲ್ಲೆಯ ದ್ವಿಭಾಷಿಕ ಪರಿಸರದ ಹಿನ್ನೆಲೆ

೧. ಭೌಗೋಳಿಕ ಇತಿಹಾಸ

೨. ರಾಜಕೀಯ ಇತಿಹಾಸ

೩. ವಿಜಯನಗರ ಕಾಲದಿಂದ ಇಲ್ಲಿಯವರೆಗಿನ ಕನ್ನಡ - ತೆಲುಗು ಸಂಬಂಧಗಳು

೪. ಭಾಷಾವಾರು ಪ್ರಾಂತ ರಚನೆಯ ಇತಿಹಾಸ

೫. ವಲಸಿಗರು ಮತ್ತು ಪ್ರವಾಸಿಗರಿಂದ ಉಂಟಾದ ದ್ವಿಭಾಷಿಕತೆ

೬. ಜನಗಣತಿಯನ್ನು ಆಧರಿಸಿದ ಸ್ವಭಾಷಿಕ - ದ್ವಿಭಾಷಿಕರ ಸಂಖ್ಯೆ ಪ್ರಮಾಣಗಳು

೭. ದ್ವಿತೀಯ ಭಾಷೆಗಳಾಗಿ ಕನ್ನಡ - ತೆಲುಗು ಭಾಷೆಗಳನ್ನು ಮಾತನಾಡುವವರು

೮. ಬಳ್ಳಾರಿ ಕನ್ನಡದ ಮೇಲೆ ಬಂದಿರುವ ಲೇಖನಗಳ ಅವಲೋಕನ

## ಅಧ್ಯಾಯ : ನಾಲ್ಕು

# ಬಳ್ಳಾರಿ ಜಿಲ್ಲೆಯ ದ್ವಿಭಾಷಿಕ ಪರಿಸರದ ಹಿನ್ನೆಲೆ

ಕರ್ನಾಟಕದ ರಾಜಧಾನಿಯಿಂದ ಸುಮಾರು 350 ಕಿಲೋಮೀಟರ್ ದೂರದಲ್ಲಿರುವ ಬಳ್ಳಾರಿಯು ಅನೇಕ ರಾಜಮನೆತನಗಳು ಆಳಿದ ಮಹತ್ವದ ಸಾಂಸ್ಕೃತಿಕ ಕೇಂದ್ರವಾಗಿದೆ. 1953ರ ವರೆಗೆ ಬಳ್ಳಾರಿ ಜಿಲ್ಲೆ ಮದ್ರಾಸ್ ಪ್ರಾಂತ್ಯದ ಒಂದು ಜಿಲ್ಲೆಯಾಗಿತ್ತು. ಕರ್ನಾಟಕದಲ್ಲಿ ಅತಿ ಹೆಚ್ಚು ಕಾಲ ಬ್ರಟಿಷ್‌ರ ಆಳ್ವಿಕೆಯಲ್ಲಿದ್ದ ಬಳ್ಳಾರಿಯು ಹೈದರಾಬಾದ್ ನಿಜಾಮನ ಆಳ್ವಿಕೆಗೂ ಕೆಲಕಾಲ ಒಳಪಟ್ಟಿತ್ತು. ಹೀಗಾಗಿ ಬಳ್ಳಾರಿಯು ಬ್ರಿಟಿಶ್ ವಸಾಹತು ಶಾಹಿಯ ಮದ್ರಾಸ್ ಪ್ರಾಂತ್ಯಕ್ಕೂ ಇತ್ತ ಹೈದರಾಬಾದ್ ನಿಜಾಮನ ಸಂಸ್ಥಾನದ ಅಧಿಕಾರ ವ್ಯಾಪ್ತಿಗೂ ಸೇರಿಕೊಂಡಿದ್ದರಿಂದ ಇದರ ಚರಿತ್ರೆ ಸಂಕೀರ್ಣ ಸ್ವರೂಪದಲ್ಲಿ ಸಾಗಿ ಬಂದಿದೆ. ಇಲ್ಲಿನ ಬಹುಸಂಖ್ಯಾತ ಕನ್ನಡಿಗರಿಗೆ ತೆಲುಗು ಭಾಷೆಯ ದ್ವಿಭಾಷಿಕ ಸಂದರ್ಭದೊಟ್ಟಿಗೆ ಆಡಳಿತಾತ್ಮಕ ಕಾರಣಗಳಿಗಾಗಿ ಉರ್ದು ಹಾಗೂ ವಸಾಹತುಶಾಹಿ ಇಂಗ್ಲಿಶ್‌ಗಳನ್ನು ಮುಖಾಮುಖಿಯಾಗುವ ಅವಕಾಶಗಳು ಏರ್ಪಟ್ಟವು. ಹಾಗಾಗಿ ಬಳ್ಳಾರಿ ಜಿಲ್ಲೆಗೆ ತನ್ನದೇ ಆದ ವಿಶಿಷ್ಟವಾದ ಭಾಷಾ ಸಂಕೀರ್ಣ ಚರಿತ್ರೆ ಇದೆ. ಇದು ಭಾಷಾವಾರು ಪ್ರಾಂತ್ಯದ ಭಾಗವಾಗಿ ಕರ್ನಾಟಕದ ಒಂದು ಜಿಲ್ಲೆಯಾಗಿ ರೂಪುಗೊಳ್ಳುವವರೆಗೆ ಈ ಪ್ರದೇಶದಲ್ಲಿ ದ್ವಿ-ಬಹುಭಾಷಿಕ ಪರಿಸರಗಳು ಚಲನಶೀಲವಾಗಿ ಬೆಳೆದು ಬಂದವು. ಏಕೀಕರಣೋತ್ತರ ಸಂದರ್ಭದಲ್ಲಿ ಕನ್ನಡ ಭಾಷೆಗೆ ಹೆಚ್ಚಿನ ಅಧಿಕೃತತೆ ದೊರೆತಂತಾಯಿತು.

## ಅ. ಭೌಗೋಳಿಕ ಇತಿಹಾಸ

ಈ ಜಿಲ್ಲೆ ದೀರ್ಘಕಾಲದಿಂದ ದ್ವಿಭಾಷಾ ಪ್ರದೇಶವಾಗಿದೆ. ಭಾಷಾವಾರು ಪ್ರಾಂತ್ಯಗಳು ರಚನೆಯಾದ ಮೇಲೆ ಇದರ ಪೂರ್ವಭಾಗ ಸಂಪೂರ್ಣ ಆಂಧ್ರ ಪ್ರದೇಶದ ಗಡಿಯನ್ನು ಹೊಂದಿದೆ. "ಈ ಜಿಲ್ಲೆಯು 15° - 30' ಕರ್ನಾಟಕದ ಪೂರ್ವಭಾಗ ಮಧ್ಯದಲ್ಲಿ ದಕ್ಷಿಣೋತ್ತರವಾಗಿ ಹಬ್ಬಿದೆ. 14° - 30' ಉತ್ತರ ಅಕ್ಷಾಂಶ, ಹಾಗೂ 75° - 40' ಮತ್ತು 77° - 11' ಪೂರ್ವ ರೇಖಾಂಶ ಇವುಗಳ ಮಧ್ಯದಲ್ಲಿದೆ. ಈ ಜಿಲ್ಲೆಯು ಉತ್ತರದಲ್ಲಿ ರಾಯಚೂರು ಜಿಲ್ಲೆ, ಪಶ್ಚಿಮದಲ್ಲಿ ಗದಗ ಜಿಲ್ಲೆ, ದಕ್ಷಿಣದಲ್ಲಿ ಚಿತ್ರದುರ್ಗ ಜಿಲ್ಲೆ ಹಾಗೂ ಪೂರ್ವದಲ್ಲಿ ಆಂಧ್ರ ಪ್ರದೇಶದ ಕರ್ನೂಲ್ ಜಿಲ್ಲೆ ಮತ್ತು ಅನಂತಪುರ ಜಿಲ್ಲೆಗಳಿಂದ ಸುತ್ತುವರೆದಿದೆ. ತುಂಗಭದ್ರಾ ನದಿಯು ಜಿಲ್ಲೆಯ ಪೂರ್ವ ಮತ್ತು ಉತ್ತರಾಭಿಮುಖವಾಗಿ ಹರಿಯುತ್ತದೆ. ಇದರ ಉಪನದಿಗಳು ಹಗರಿ ಮತ್ತು ಚಿಕ್ಕ ಹಗರಿ. ಈ ಜಿಲ್ಲೆಯಲ್ಲಿ ಬೆಣಚು ಕಲ್ಲುಗಳಿಂದ ಕೂಡಿದ ಕಪ್ಪು ಮಣ್ಣಿನ ಭೂಮಿ ಹೆಚ್ಚಾಗಿದೆ" (ಎಲ್.ಎಸ್.ಶೇಷಗಿರಿರಾವ್ 1994:346).

"ಈ ಜಿಲ್ಲೆ ರಾಜ್ಯದ ಅಧಿಕ ಉಷ್ಣಾಂಶ ಇರುವ ಜಿಲ್ಲೆಗಳಲ್ಲಿ ಒಂದಾಗಿದೆ. ಚಳಿಗಾಲದಲ್ಲಿ ಕೆಲವೊಮ್ಮೆ 15° ಸೆ. ಯಷ್ಟು ಕನಿಷ್ಠ ಉಷ್ಣಾಂಶವನ್ನು ಹೊಂದಿರುವುದನ್ನು ಬಿಟ್ಟರೆ ವರ್ಷದ ಹೆಚ್ಚಿನ ಅವಧಿಯಲ್ಲಿ ಅಧಿಕ ಉಷ್ಣಾಂಶ ಇರುತ್ತದೆ. ಜಿಲ್ಲೆಯ ವಿಸ್ತೀರ್ಣ 9885 ಚದುರ ಕಿಲೋ ಮೀಟರ್‌ಗಳಷ್ಟಿದೆ. ಇದು ರಾಜ್ಯದ ಒಟ್ಟು ವಿಸ್ತೀರ್ಣದ ಶೇ 5.16ರಷ್ಟಿದ್ದು, 11ನೇ ಸ್ಥಾನದಲ್ಲಿದೆ. ಇಲ್ಲಿ ಸಿಗುವ ಕಬ್ಬಿಣ ಮತ್ತು ಮ್ಯಾಂಗನೀಸ್ ಖನಿಜಗಳಿಗೆ ವಿಶ್ವ ಮಾರುಕಟ್ಟೆಯಲ್ಲಿ ಉತ್ತಮ ಸ್ಥಾನವಿದೆ. ಇದರ ಜೊತೆಗೆ ಇನ್ನೂ ಅನೇಕ ಲೋಹ ಮತ್ತು ಲೋಹೇತರ ಖನಿಜಗಳೂ ದೊರೆಯುತ್ತವೆ. ಇತ್ತೀಚಿಗಿನ ವರದಿಗಳ ಪ್ರಕಾರ ಇಲ್ಲಿನ ಕಬ್ಬಿಣದ ಅದಿರಿನ ನಿಕ್ಷೇಪ ಪ್ರಮಾಣ 18.81ದಶಲಕ್ಷ ಟನ್‌ಗಳೆಂದು ಅಂದಾಜು ಮಾಡಲಾಗಿದೆ. ಇಲ್ಲಿ ಉತ್ಪಾದನೆಯಾಗುವ ಕಬ್ಬಿಣದ ಅದಿರು ಅರ್ಧಕ್ಕಿಂತ ಹೆಚ್ಚು ಭಾಗವು ವಿದೇಶಗಳಿಗೆ ರಫ್ತಾಗುತ್ತದೆ". ಬಿ.ಶೇಷಾದ್ರಿ (1998:01) ಅತಿ ಹೆಚ್ಚು ಖನಿಜ ಸಂಪತ್ತು ಹೊಂದಿರುವ ಈ ಪ್ರದೇಶವು ಹೆಚ್ಚಿನ ಉದ್ಯೋಗ (ಕೂಲಿ)ವನ್ನು ಸೃಷ್ಟಿಸಿರುವುದರಿಂದ ಬೇರೆ - ಬೇರೆ ಪ್ರದೇಶಗಳಿಂದ ಉದ್ಯೋಗವನ್ನರಿಸಿ ಬರುವವರ ಸಂಖ್ಯೆ ಸಹಜವಾಗಿದೆ. ಇಲ್ಲಿನ ಪ್ರಮುಖ ಬೆಳೆಗಳೆಂದರೆ ಭತ್ತ, ಜೋಳ, ಕಬ್ಬು, ಸಜ್ಜೆ, ನವಣೆ, ಮೆಣಸಿನಕಾಯಿ, ಹತ್ತಿ, ಶೇಂಗಾ, ತೊಗರಿ. 1953 ರಲ್ಲಿ ತುಂಗಭದ್ರಾ ಜಲಾಶಯ ಯೋಜನೆ ಕಾರ್ಯಗತವಾದಾಗ ಈ ಜಿಲ್ಲೆಯಲ್ಲಿ ಹಸಿರು ಕ್ರಾಂತಿ ಪ್ರಾರಂಭವಾಯಿತು. ಇಂದು ಅಧಿಕ ಪ್ರಮಾಣದಲ್ಲಿ ನೀರಾವರಿ ಸೌಕರ್ಯ ಪಡೆದಿರುವ ಜಿಲ್ಲೆಗಳ ಪೈಕಿ ಇದೂ ಒಂದು.

## ಆ. ರಾಜಕೀಯ ಇತಿಹಾಸ

ಜಿಲ್ಲೆಯ ಇತಿಹಾಸ ಮೌರ್ಯರ ಕಾಲದಿಂದ ಪ್ರಾರಂಭವಾಗುತ್ತದೆ. ಇವರ ನಂತರ ಕ್ರಮವಾಗಿ ಶಾತವಾಹನರು, ಬನವಾಸಿಯ ಕದಂಬರು, ಬಾದಾಮಿ ಚಾಲುಕ್ಯರು, ನೊಳಂಬರು ಮತ್ತು ಗಂಗರ ಅಧೀನದಲ್ಲಿ ಈ ಜಿಲ್ಲೆಯ ಕೆಲವು ಭಾಗಗಳು ಇದ್ದವೆಂದು ಚಾರಿತ್ರಿಕ ದಾಖಲೆಗಳಿಂದ ತಿಳಿದು ಬರುತ್ತದೆ. 11 - 12ನೇ ಶತಮಾನದಲ್ಲಿ ಕಲ್ಯಾಣದ ಚಾಳುಕ್ಯರ ಸಾಮಂತರಾಗಿದ್ದ ಉಚ್ಚಂಗಿಯ ಪಾಂಡ್ಯರು ಈ ಪ್ರದೇಶದಲ್ಲಿ ಆಳುತ್ತಿದ್ದು ಮೊಹಮದ್ - ಬಿನ್ - ತುಘಲಕ್‌ನ ಕಾಲದಲ್ಲಿ ಅಂತಿಮವಾಗಿ ಇದು ಪತನವಾಯಿತು. ಮುಂದೆ ಸುಮಾರು ಮುನ್ನೂರು ವರ್ಷಗಳ ಕಾಲ ಇಡೀ ದಕ್ಷಿಣ ಭಾರತವನ್ನು ಒಳಗೊಂಡು ಆಳಿದ ವಿಜಯನಗರ ಸಾಮ್ರಾಜ್ಯದ ರಾಜಧಾನಿ ನೆಲೆಗೊಂಡಿದ್ದುದು ಈ ಜಿಲ್ಲೆಯ ಹಂಪಿಯಲ್ಲೆ. 1565ರ ರಕ್ಕಸತಂಗಡಿ ಕದನದಲ್ಲಿ ವಿಜಯನಗರದ ಅರಸರು ಸೋತ ಮೇಲೆ ವಿಜಯನಗರ ಹಾಳು ಹಂಪೆಯಾಯಿತು. ಕದನದ ಆನಂತರದಲ್ಲಿ ಈ ಜಿಲ್ಲೆ ಆದಿಲ್‌ಶಾಹಿ ಸುಲ್ತಾನರ ಮತ್ತು ಹಲವು ಪಾಳೇಗಾರರ ಆಳ್ವಿಕೆಗೆ ಒಳಪಟ್ಟಿತು. ತರುವಾಯ ಮರಾಠರು ಮತ್ತು ಮೊಘಲರು ಇಲ್ಲಿ ಅಧಿಪತ್ಯ ನಡೆಸಿದರು. 18ನೇ ಶತಮಾನ ಕೊನೆಯ ಭಾಗದಲ್ಲಿ ಮೈಸೂರಿನ ಹೈದರ್ ಆಲಿ ಮತ್ತು ಟಿಪ್ಪು ಸುಲ್ತಾನ್ ಈ ಜಿಲ್ಲೆಯನ್ನು ಸಂಪೂರ್ಣವಾಗಿ ತನ್ನ ಅಧೀನಗೊಳಿಸಿಕೊಂಡರು. 1792ರ ಒಪ್ಪಂದದ ಪ್ರಕಾರ ಈ ಜಿಲ್ಲೆಯ ಕೆಲವು ಭಾಗಗಳು ಟಿಪ್ಪು ಹೈದರಾಬಾದಿನ ನಿಜಾಮನಿಗೆ ಬಿಟ್ಟುಕೊಟ್ಟ. ಶ್ರೀರಂಗಪಟ್ಟಣದ ಪತನಾನಂತರ 1800ರ ಹೊತ್ತಿಗೆ ಈ ಜಿಲ್ಲೆ ಬ್ರಿಟಿಷರಿಗೆ ಸೇರಿ ಮದರಾಸು ಪ್ರಾಂತ್ಯದ ಭಾಗವಾಯಿತು. ಕನ್ನಡ ವಿಶ್ವಕೋಶ (1983:946) 1953ರಲ್ಲಿ ವಾಂಛ್ಯುರವರ ವರದಿಯ ಪ್ರಕಾರ ಆಂಧ್ರ ಪ್ರದೇಶವೆಂದು ಕರೆಯಲಾದ ರಾಜ್ಯದಲ್ಲಿ ಅಂದಿನ ಬಳ್ಳಾರಿ ಜಿಲ್ಲೆಯ ಆದವಾನಿ, ಆಲೂರು ಮತ್ತು ರಾಯದುರ್ಗ ತಾಲ್ಲೂಕುಗಳ ವಿನಾ ಮಿಕ್ಕ ಭಾಗ ಮೈಸೂರು ಸಂಸ್ಥಾನಕ್ಕೆ ಸೇರಿತು. ಹೀಗೆ ಕಳೆದ ಇನ್ನೂರು - ಮುನ್ನೂರು ವರ್ಷಗಳ ಕಾಲಾವಧಿಯಲ್ಲಿ ಬಳ್ಳಾರಿ ಜಿಲ್ಲೆಯ ಗಡಿ ರೇಖೆಗಳು ಪುನರ್ರಚಿಸಲಾಗಿದೆ. ಅನೇಕ ಅಧಿಪತ್ಯಗಳ ಆಳ್ವಿಕೆಯ ಅನುಭವವು ಈ ಜಿಲ್ಲೆಗಿದೆ. ಈ ಜಿಲ್ಲೆ ಏಳು ತಾಲ್ಲೂಕುಗಳನ್ನು ಒಳಗೊಂಡಿದೆ. 1. ಬಳ್ಳಾರಿ, 2. ಹೊಸಪೇಟೆ, 3. ಹಡಗಲಿ 4. ಹಗರಿಬೊಮ್ಮನಹಳ್ಳಿ, 5. ಕೂಡ್ಲಿಗಿ, 6. ಸಂಡೂರು ಮತ್ತು 7. ಸಿರುಗುಪ್ಪ ಇದನ್ನು ಭೂಪಟ - 1 ರಲ್ಲಿ ಕಾಣಬಹುದು. 1947ಕ್ಕೆ ಹಿಂದೆ ಬಳ್ಳಾರಿ ಜಿಲ್ಲೆ 9 ತಾಲ್ಲೂಕುಗಳನ್ನು ಒಳಗೊಂಡಿತ್ತು. ಅವುಗಳಲ್ಲಿ ಆಲೂರು, ಆದವಾನಿ ಮತ್ತು ರಾಯದುರ್ಗ ಪ್ರಮುಖವಾದವು. ರಾಜ್ಯ ಪುನರ್‌ವಿಂಗಡನೆಯ ಸಮಯದಲ್ಲಿ ಈ ತಾಲ್ಲೂಕುಗಳು ಆಂಧ್ರ ಪ್ರದೇಶಕ್ಕೆ ವರ್ಗಾಯಿಸಲ್ಪಟ್ಟವು (ಇಂದು ರಾಯದುರ್ಗವು ನೆರೆಯ ರಾಜ್ಯವಾದ ಆಂಧ್ರದ ಅನಂತಪುರ ಜಿಲ್ಲೆಯ ಭಾಗವಾಗಿದ್ದರೆ, ಆಲೂರು ಮತ್ತು ಆದವಾನಿಗಳು ಕರ್ನೂಲು ಜಿಲ್ಲೆಯ ಭಾಗವಾಗಿವೆ). ಅನೇಕ ಶತಮಾನಗಳ ಕಾಲ ಬಳ್ಳಾರಿ ಜಿಲ್ಲೆ ಹಾಗೂ ಆಂಧ್ರದಲ್ಲಿರುವ ಕರ್ನೂಲು, ಕಡಪ ಮತ್ತು ಅನಂತಪುರ ಜಿಲ್ಲೆಗಳು ಒಂದೇ ಅಧಿಪತ್ಯದಲ್ಲಿದ್ದವು. ಈ ಪ್ರದೇಶವನ್ನು 1800ರಲ್ಲಿ ಹೈದ್ರಾಬಾದ್‌ನ ನಿಜಾಮನು ಬ್ರಿಟಿಷರಿಗೆ ನೀಡಿದ್ದರಿಂದ ಇವುಗಳನ್ನು 'ಸೀಡೆಡ್ ಡಿಸ್ಟ್ರಿಕ್ಟ್' (ದತ್ತ ಮಂಡಲದ ಭಾಗ) ಎಂದು ಕರೆಯಲಾಗಿದೆ. (ಇದನ್ನು ಭೂಪಟ 2 ರಲ್ಲಿ ಕಾಣಬಹುದು)




ಮೂಲ: ಬಿ. ಗಷ್ಪಾತಿ ಮತ್ತು ಟಿ. ಆರ್. ಚಂದ್ರಶೇಖರ (ಸಂ), 1998 'ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ' ಪ್ರಸಾರಾಂಗ, ಹಂಪಿ ಕನ್ನಡ ವಿಶ್ವ




ಕ್ರಿ.ಶ. ೧೮೦೦ರಲ್ಲಿ ಸೀಡೆಡ್ ಜಿಲ್ಲೆಗಳು

ಮೂಲ: ಬಿ. ಶೇಷಾದ್ರಿ ಮತ್ತು ಟಿ. ಆರ್. ಚಂದ್ರಶೇಖರ್ (ಸಂ). 1998 'ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ' ಪ್ರಸಾರಾಂಗ. ಹಂಪಿ ಕನ್ನಡ ವಿಶ್ವವಿದ್ಯಾಲಯ.

ಬಳ್ಳಾರಿ ಜಿಲ್ಲೆಯಲ್ಲಿರುವ ಸಿರುಗುಪ್ಪ, ಬಳ್ಳಾರಿ, ಸಂಡೂರು ಮತ್ತು ಹೊಸಪೇಟೆ ತಾಲ್ಲೂಕುಗಳನ್ನು ಪೂರ್ವಭಾಗದ ತಾಲ್ಲೂಕುಗಳೆಂದೂ ಹಡಗಲಿ, ಕೂಡ್ಲಿಗಿ ಮತ್ತು ಹಗರಿಬೊಮ್ಮನಹಳ್ಳಿ ತಾಲ್ಲೂಕುಗಳನ್ನು ಪಶ್ಚಿಮ ಭಾಗದ ತಾಲ್ಲೂಕುಗಳೆಂದೂ ಕರೆಯುವುದು ರೂಢಿಯಲ್ಲಿದೆ. ಪ್ರಾಕೃತಿಕವಾಗಿ ಹಾಗೂ ಆರ್ಥಿಕವಾಗಿ ಜಿಲ್ಲೆಯ ಪೂರ್ವ ಭಾಗವು ಸಮೃದ್ಧಿಯಾಗಿದ್ದರೆ, ಪಶ್ಚಿಮ ಭಾಗವು ಅಭಾವದ ಪ್ರದೇಶವಾಗಿದೆ. ಕೃಷಿಯನ್ನು ಬದುಕನ್ನಾಗಿ ಮಾಡಿಕೊಂಡಿರುವ ಜನರ ಪ್ರಮಾಣದ ದೃಷ್ಟಿಯಿಂದ ಈ ಜಿಲ್ಲೆಯ ಪಶ್ಚಿಮ ಭಾಗದ ತಾಲ್ಲೂಕುಗಳು ಮೊದಲು ಮೂರು ಸ್ಥಾನಗಳಲ್ಲಿವೆ. ಅಂದರೆ ಕೃಷಿಯೇತರ ಚಟುವಟಿಕೆಗಳು ಇಲ್ಲವೇ ಇಲ್ಲ. ಇದರಿಂದಾಗಿ ಆರ್ಥಿಕವಾಗಿ ಮತ್ತು ಪ್ರಾಕೃತಿಕವಾಗಿ ಸಮೃದ್ಧಿಯಾಗಿರುವ ಜಿಲ್ಲೆಯ ಪೂರ್ವಭಾಗದಲ್ಲೇ ಹೆಚ್ಚು ಔದ್ಯಮೀಕರಣ ಪ್ರಕ್ರಿಯೆಯು ನೆಲೆಗೊಂಡಿದೆ.) ಆದಕಾರಣ ಔದ್ಯಮೀಕರಣ ಪ್ರಕ್ರಿಯೆಯು ಸೃಷ್ಟಿಸಿರುವ ಉದ್ಯೋಗಾವಕಾಶಗಳಿಂದಾಗಿ ಕನ್ನಡ - ತೆಲುಗು ದ್ವಿಭಾಷಿಕತೆಯ ಪ್ರಮಾಣ ಈ ಭಾಗದಲ್ಲಿ ಹೆಚ್ಚಾಗಿದೆ. (ಕರ್ನಾಟಕದಲ್ಲಿ ಉಳುಮೆಗಾರರಿಗಿಂತ ಕೃಷಿ ಕಾರ್ಮಿಕರು ಅಧಿಕವಾಗಿರುವ ಜಿಲ್ಲೆಗಳಲ್ಲಿ ಬಳ್ಳಾರಿಯೂ ಒಂದಾಗಿದೆ. ಇಲ್ಲಿನ ಸಾಕ್ಷರತೆ ಪ್ರಮಾಣವು ಅತ್ಯಂತ ಕೆಳಮಟ್ಟದಲ್ಲಿದೆ. ಮಹಿಳೆಯರ ಸಾಕ್ಷರತೆಯು ಪುರುಷರ ಸಾಕ್ಷರತೆ ಪ್ರಮಾಣಕ್ಕಿಂತ ಶೇ 26.74ರಷ್ಟು ಕಡಿಮೆ ಇದೆ. ಆದ್ದರಿಂದ ಕನ್ನಡ ಏಕಭಾಷಿಕರು ಹೆಚ್ಚಾಗಿರುವುದನ್ನು ಗಮನಿಸಬಹುದಾಗಿದೆ. ಇತ್ತೀಚಿನ ಜನಗಣತಿಯ ಮಾಹಿತಿಯ ಪ್ರಕಾರ ಸಾಕ್ಷರತೆಯ ಪ್ರಮಾಣವು ಸ್ವಲ್ಪ ಪ್ರಮಾಣದಲ್ಲಿ ಹೆಚ್ಚಾಗುತ್ತಿರುವ ಅಂಶಗಳು ಕಂಡುಬಂದಿವೆ. ಇದರಿಂದಲೇ ದ್ವಿಭಾಷಿಕ ಭಾಷಾ ಬಳಕೆಯ ನೆಲೆಗಳಲ್ಲೂ ಬದಲಾವಣೆ ಉಂಟಾಗಿರಬಹುದು.

## ಇ. ವಿಜಯನಗರದ ಕಾಲದಿಂದ ಇಲ್ಲಿಯವರೆಗಿನ ಕನ್ನಡ - ತೆಲುಗು ಸಂಬಂಧಗಳು

ತೆಲುಗರಿಗೂ ಕನ್ನಡಿಗರಿಗೂ ಇರುವ ಸಂಬಂಧ ಪ್ರಾಚೀನವಾದುದು. ಭಾಷಾ ವಿಷಯವಾಗಿಯೇ ಅಲ್ಲದೆ, ಚಾರಿತ್ರಿಕವಾಗಿಯೂ ಕೂಡ ಇವರ ಮಧ್ಯೆ ಹತ್ತಿರದ ಸಂಬಂಧವಿದೆ. ಭಾಷಾವಾರು ಪ್ರಾಂತಗಳ ವಿಂಗಡನೆಯ ನಂತರವಷ್ಟೇ ತೆಲುಗು ಮತ್ತು ಕನ್ನಡ ಭಾಷೆಗಳನ್ನಾಡುವ ಪ್ರದೇಶಗಳನ್ನು ಆಂಧ್ರ ಮತ್ತು ಕರ್ನಾಟಕ ಎಂಬುದಾಗಿ ಗುರುತಿಸುತ್ತೇವೆ. ಆದರೆ ಪ್ರಾರಂಭ ಕಾಲಕ್ಕೆ ಈ ರೀತಿ ಇರಲಿಲ್ಲ. "ವಿಜಯನಗರದ ಪ್ರಾರಂಭಕಾಲದ ರಾಜರುಗಳ ಆಳ್ವಿಕೆಯ ಕಾಲದಲ್ಲಿ ತೆಲುಗು ಮಾತನಾಡುವ ಪ್ರದೇಶವು ಕನ್ನಡ ಮಾತನಾಡುವ ಪ್ರದೇಶಗಳ ನಿಕಟ ಸಂಪರ್ಕ ಹೊಂದಿತ್ತು. ಅದರ ರಾಜಧಾನಿಯು ದ್ವಿಭಾಷಾ ಪ್ರದೇಶದಲ್ಲಿ ನೆಲೆಗೊಂಡಿತ್ತು. ವಿಜಯನಗರ ಸಾಮ್ರಾಜ್ಯದಲ್ಲಿ ಅರ್ಧದಷ್ಟು ಭಾಗವು ತೆಲುಗು ಮಾತನಾಡುವ ಪ್ರದೇಶಗಳಿಂದ ಕೂಡಿತ್ತಾದರೂ ವಿಜಯನಗರದ ಮೊದಲನೆಯ ರಾಜವಂಶವು ಕನ್ನಡ ವಿದ್ವಾಂಸರಿಗೆ ಆಶ್ರಯವನ್ನು ನೀಡಿತ್ತೆಂದು" ಕೆ. ಈಶ್ವರದತ್ತ ಅವರು ತಮ್ಮ 'ವಿಜಯನಗರ ಸಾಮ್ರಾಜ್ಯದ ಕಾಲದ ತೆಲುಗು ಸಾಹಿತ್ಯ' ಸಂ : ದೀಕ್ಷಿತ್ (1991:147) ಎಂಬ ಲೇಖನದಲ್ಲಿ ಹೇಳಿದ್ದಾರೆ. 14ನೇ ಶತಮಾನದಲ್ಲಿ ತೆಲುಗು ಮಾತನಾಡುವ ಇಡೀ ಪ್ರದೇಶವು ಮೂರು ಭಾಗಗಳಾಗಿ ಪ್ರತ್ಯೇಕಿಸಲ್ಪಟ್ಟಿತ್ತು.

ತೆಲುಗು, ಕನ್ನಡ ಜನರ ಸಂಬಂಧಗಳು ವಿಜಯನಗರ ಸಾರ್ವಭೌಮರ ಆಳ್ವಿಕೆಯಲ್ಲಿ ಹಿಂದೆಂದಿಗಿಂತಲೂ ದೃಢವಾಗಿತ್ತು. 'ದೇಶಭಾಶಲಂದು ತೆಲುಗು ಲೆಸ್ಸ' ಎಂದು ತೆಲುಗು ಭಾಷೆಯನ್ನು ಪ್ರಶಂಸಿಸಿದ ಶ್ರೀಕೃಷ್ಣದೇವರಾಯನು ಹೆಸರಿಗೆ ಕನ್ನಡಿಗನೇ ಆದರೂ ತೆಲುಗನ್ನು ಕೀರ್ತಿಸಿದ. ತೆಲುಗಿನಲ್ಲಿ ಸಾಹಿತ್ಯವನ್ನು ರಚಿಸಿದ. ಅನೇಕ ತೆಲುಗು ವಿದ್ವಾಂಸರಿಗೆ ಆಶ್ರಯ ನೀಡಿದ್ದ. ಇದರಿಂದ ಅಂದಿನ ಪ್ರಭುಗಳಿಗೆ ತೆಲುಗು ಭಾಷೆ ಸಾಹಿತ್ಯಗಳ ಬಗ್ಗೆ ಅಪಾರವಾದ ಆದರದ ಭಾವನೆ ಇತ್ತೆಂದು ನಿಸ್ಸಂಶಯವಾಗಿ ಹೇಳಬಹುದು. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಮೇರು ಕವಿಗಳೆಂದು ಮೆರೆದವರನೇಕರು ತೆಲುಗಿನವರೆಂದು, ಆ ದಿನಗಳಲ್ಲಿ ತೆಲುಗು ಕವಿಗಳು ತೆಲುಗು-ಕನ್ನಡಗಳಲ್ಲಿ ರಚನೆಗಳನ್ನು ಮಾಡುತ್ತಿದ್ದರೆಂದೂ ಹೇಳಬಹುದು. ಹಾಗೆಯೇ ತೆಲುಗು - ಕನ್ನಡಿಗರ ಮಧ್ಯೆ ಅಪೂರ್ವವಾದ ಮೈತ್ರಿ ಭಾವನೆಯು ನೆಲೆಸಿತ್ತೆಂದು ಹಲವು ಚರಿತ್ರೆಕಾರರು ಅಭಿಪ್ರಾಯಪಟ್ಟಿದ್ದಾರೆ.

ಯಾವುದೇ ದ್ವಿಭಾಷಾ ಸಮಾಜವನ್ನು ಏಕಮುಖ ದೃಷ್ಟಿಕೋನದಿಂದ ನೋಡಲಾಗದು. ಏಕೆಂದರೆ ಒಂದು ಸಮಾಜದಲ್ಲಿ ಎರಡು ಭಾಷೆಗಳು ಬಳಕೆಯಾಗುತ್ತಿದೆ ಎಂದರೆ ಅಲ್ಲಿ ಸಾಮರಸ್ಯವೂ ಇರಬಹುದು, ಸಂಘರ್ಷವೂ ಇರಬಹುದು. ಯಾವುದೋ ಒಂದು ಅಂಶ ಮಾತ್ರ ಪ್ರಧಾನವಲ್ಲ. ಭಾಷಾವಾರು ಜಿಲ್ಲೆ ರಚನೆಯ ಇತಿಹಾಸವೇ ಇದಕ್ಕೆ ಸಾಕ್ಷಿ. ಅನೇಕ ವರ್ಷಗಳಿಂದ ಒಟ್ಟಿಗೆ ಬದುಕುತ್ತಿದ್ದ ಕನ್ನಡ - ತೆಲುಗು ಭಾಷಿಕರಲ್ಲಿ ಉಂಟಾದ ಸಂಘರ್ಷದಿಂದಾಗಿ ಭಾಷಾವಾರು ಜಿಲ್ಲೆ ವಿಂಗಡನೆಯ ಹೋರಾಟಕ್ಕೆ ಎಡೆಮಾಡಿಕೊಟ್ಟಿತು. 1956ರಲ್ಲಿ ಆಂಧ್ರ - ಕರ್ನಾಟಕ ಪ್ರದೇಶಗಳಿಗೆ ಭಾಷಿಕರು ಹಂಚಿಹೋದರು. ಆಂಧ್ರ - ಕರ್ನಾಟಕವೆಂದು ಗಡಿಗಳನ್ನು ಹಾಕಲಾಯಿತು. ಆದರೆ ವಾಸ್ತವದಲ್ಲಿ ಭಾಷಿಕ ಗಡಿಗಳನ್ನು ಹಾಕಲು ಸಾಧ್ಯವಿಲ್ಲ. ಆಂಧ್ರದಲ್ಲಿ ಕನ್ನಡಿಗರು, ಕರ್ನಾಟಕದಲ್ಲಿ ತೆಲುಗರು ತಮ್ಮ ಭಾಷೆಗಳನ್ನು ಸಂದರ್ಭಾನುಸಾರ ಸಮಾಜದಲ್ಲಿನ ಹಲವಾರು ಆವರಣಗಳಲ್ಲಿ ಬಳಸುತ್ತಿದ್ದಾರೆ. ಇದರಿಂದ ಕೆಲವೆಡೆಗಳಲ್ಲಿ ದ್ವಿಭಾಷಿಕತೆ ಸಂದರ್ಭಗಳು ಇನ್ನೂ ಉಳಿದುಕೊಂಡಿರುವುದೇ ಸಾಕ್ಷಿ (ಕೋಲಾರ, ಆನೇಕಲ್, ತುಮಕೂರು, ರಾಯಚೂರು ಜಿಲ್ಲೆಗಳ ದ್ವಿಭಾಷಾ ಪರಿಸರಗಳು ಕನ್ನಡ - ತೆಲುಗು) ಬಳ್ಳಾರಿ ಪರಿಸರದಲ್ಲಿ ಕನ್ನಡಿಗರಾಗಬಹುದು, ತೆಲುಗರಾಗಬಹುದು. ತಮ್ಮ ಮನರಂಜನೆಯ ಅವಶ್ಯಕತೆಗಳು ಬಹಳ ದೊಡ್ಡ ಪ್ರಮಾಣದಲ್ಲಿ ತೆಲುಗು ಸಿನಿಮಾ, ಈ ಟಿ.ವಿ., ಜೆಮಿನಿ ಟಿ.ವಿ.ಯ ಕಾರ್ಯಕ್ರಮಗಳನ್ನು ನೋಡುವುದರ ಮೂಲಕ ಪೂರೈಸಿಕೊಳ್ಳುತ್ತಿರುವುದು, ಭಾಷಾ ಗಡಿಗಳನ್ನೂ ಮೀರಿ ಸಹಜೀವನ ನಡೆಸುತ್ತಿರುವುದು, ವಿವಾಹ ಸಂಬಂಧಗಳನ್ನು ಏರ್ಪಡಿಸಿಕೊಳ್ಳುತ್ತಿರುವುದು, ಉಡುಗೆ - ತೊಡುಗೆ, ಊಟೋಪಚಾರ ಇತ್ಯಾದಿ ದಿನನಿತ್ಯದ ಜೀವನ ಕ್ರಮದಲ್ಲಿನ ಆಗು - ಹೋಗುಗಳನ್ನು ಕನ್ನಡಿಗರು - ತೆಲುಗರು ಪರಸ್ಪರ ಹಂಚಿಕೊಳ್ಳುವುದರ ಮೂಲಕ ಆರೋಗ್ಯಕರವಾದ ಸಂಬಂಧಗಳನ್ನು ಉಳಿಸಿಕೊಂಡು ಹೋಗುತ್ತಿದ್ದಾರೆ.

## ಈ. ಭಾಷಾವಾರು ಪ್ರಾಂತ ರಚನೆಯ ಇತಿಹಾಸ

ಕಾವೇರಿಯಿಂದ ಗೋದಾವರಿಯವರೆಗೆ ಮಾತ್ರವಲ್ಲದೆ ನರ್ಮದೆಯ ತೀರದವರೆಗೆ ಕರ್ನಾಟಕದ ವ್ಯಾಪ್ತಿ ಇತ್ತೆಂಬುದು ಹಲವು ವಿದ್ವಾಂಸರ ಅಭಿಪ್ರಾಯ. ಹೀಗೆ "ವಿಸ್ತಾರವಾಗಿದ್ದ ಕರ್ನಾಟಕ ಹಲವು ಬಾರಿ ತನ್ನ ಪ್ರದೇಶಗಳನ್ನು ಬೇರೆ ರಾಜರುಗಳಿಗೆ ಯುದ್ಧಗಳ ಮೂಲಕ ಕಳೆದುಕೊಳ್ಳುತ್ತಿತ್ತು. ಹಿಗ್ಗುತ್ತಾ, ಕುಗ್ಗುತ್ತಾ ಇದ್ದ ಕರ್ನಾಟಕ ಬ್ರಿಟಿಷರ ಕಾಲಕ್ಕೂ ಮೊದಲೇ ಹರಿದು ಹಂಚಿಹೋಗಿದ್ದರೂ, ಬ್ರಿಟಿಷರ ಕಾಲದಲ್ಲಿ ಮತ್ತಷ್ಟು ವಿಭಜನೆ ಅಥವಾ ಹಂಚಿಕೆಗಳಾಗಿ ಕನ್ನಡ ಭಾಷಿಕರ ಕರ್ನಾಟಕ ಒಡೆದುಹೋಗಿತ್ತು. ಹಾಗೆ ಒಡೆದ ಕೆಲವು ಆಡಳಿತ ವಿಭಾಗಗಳಲ್ಲಿ ಕನ್ನಡಿಗರು ಪರಕೀಯರಂತೆ ಇರಬೇಕಾಯಿತು. ಬೇರೊಂದು ಭಾಷೆ ಮತ್ತು ಸಂಸ್ಕೃತಿಯನ್ನು ಬಲವಂತವಾಗಿ ಒಪ್ಪಬೇಕಾದ ಪರಿಸ್ಥಿತಿಯಿತ್ತು. ಇಂತಹ ಸಂದರ್ಭದಲ್ಲಿ ಕನ್ನಡಿಗರು ತಾವೆಲ್ಲರೂ ಒಂದಾಗುವ ಪ್ರಯತ್ನ ಮಾಡಿದ್ದು, ಕರ್ನಾಟಕ ಏಕೀಕರಣ ಇತಿಹಾಸದಲ್ಲೊಂದು ಪ್ರಮುಖ ಘಟ್ಟ" (ಎಚ್.ಎಸ್.ಗೋಪಾಲಕೃಷ್ಣ 1996:116). ಭಾರತದಲ್ಲಿ ಭಾರತೀಯರ ಹಕ್ಕುಬಾಧ್ಯತೆಗಳಿಗಾಗಿ, ಸ್ವಾತಂತ್ರಕ್ಕಾಗಿ ಹೋರಾಟ ಆರಂಭವಾದಾಗಲೇ ಭಾಷಿಕ ಪ್ರಜ್ಞೆಯು ಮೂಡಿದ್ದು ಸಹಜವೇ ಆಗಿತ್ತು. ಬಳ್ಳಾರಿ ಮೊದಲಿನಿಂದಲೂ ಕನ್ನಡ ಮತ್ತು ತೆಲುಗು ಭಾಷೆಗಳನ್ನಾಡುವ ದ್ವಿಭಾಷಾ ಪ್ರದೇಶವಾಗಿದೆ. ಅನೇಕ ಶತಮಾನಗಳ ಕಾಲ ಬಳ್ಳಾರಿ ಜಿಲ್ಲೆ ಹಾಗೂ ಇಂದು ಆಂಧ್ರ ರಾಜ್ಯದಲ್ಲಿರುವ ಕರ್ನೂಲು, ಕಡಪ ಮತ್ತು ಅನಂತಪುರ ಜಿಲ್ಲೆಗಳು ಒಂದೇ ಅಧಿಪತ್ಯದಲ್ಲಿದ್ದವು. ಕನ್ನಡ ಮತ್ತು ತೆಲುಗು ಭಾಷಿಕರು ಇಲ್ಲಿ ಇಂದಿಗೂ ಜೊತೆಯಲ್ಲೇ ಬದುಕುತ್ತಿದ್ದಾರೆ. ಬ್ರಿಟಿಷರು ಪ್ರಾಂತಗಳನ್ನು ಕೇವಲ ತಮ್ಮ ಆಡಳಿತದ ಅನುಕೂಲಕ್ಕೆ ತಕ್ಕಂತೆ ನಿರ್ಮಿಸಿದ್ದರು. ಅವರಿಗೆ ಪ್ರದೇಶಗಳ ಭೌಗೋಳಿಕ ಲಕ್ಷಣಗಳಾಗಲೀ, ಭಾಷಿಕ ಸಂಗತಿಗಳಾಗಲೀ, ಸಾಂಸ್ಕೃತಿಕ ಪರಂಪರೆಗಳಾಗಲೀ ಮುಖ್ಯವಾಗಿರಲಿಲ್ಲ. ಇದಕ್ಕಿಂತ ಮುಖ್ಯವಾಗಿ ಕರ್ನಾಟಕ ಪ್ರಾಂತ್ಯವೆಂಬುದು ಬ್ರಿಟಿಷರ ಆಡಳಿತ ಕಾಲದಲ್ಲಿ ಇರಲಿಲ್ಲ. ಕರ್ನಾಟಕದ ಕೆಲವು ಭಾಗಗಳು ಮದ್ರಾಸು ಪ್ರಾಂತ್ಯ ಮತ್ತು ಮುಂಬೈ ಪ್ರಾಂತ್ಯದಲ್ಲಿ ಹಂಚಿಹೋಗಿದ್ದವು. ಮೈಸೂರು ಸಂಸ್ಥಾನ ಮತ್ತು ಹೈದ್ರಾಬಾದ್ ನಿಜಾಮನ ಸಂಸ್ಥಾನಗಳಲ್ಲಿ ಉಳಿದ ಭಾಗಗಳು ಹಂಚಿಹೋಗಿದ್ದವು.

ಬಳ್ಳಾರಿ ಜಿಲ್ಲೆಯು ದ್ವಿಭಾಷಾ ಪ್ರದೇಶವಾಗಿದ್ದುದರಿಂದ ಅಲ್ಲಿ ಅನೇಕ ಸಮಸ್ಯೆಗಳು ಹುಟ್ಟಿಕೊಂಡಿದ್ದವು. ಕನ್ನಡ ಮತ್ತು ತೆಲುಗು ಭಾಷೆಗಳನ್ನಾಡುವ ಕಾಂಗ್ರೆಸ್ಸಿಗರ ನಡುವೆ ಸೌಹಾರ್ದಯುತ ಸಂಬಂಧವಿರಲಿಲ್ಲ. 1921ರಲ್ಲಿ ಭಾಷಾವಾರು ಪ್ರಾಂತೀಯ ಕಾಂಗ್ರೆಸ್ ಸಮಿತಿಗಳನ್ನು ರಚಿಸಲು ತೀರ್ಮಾನಿಸಿದಾಗ ಬಳ್ಳಾರಿ ಯಾವ ಪ್ರಾಂತೀಯ ಕಾಂಗ್ರೆಸ್ ಸಮಿತಿಗೆ ಸೇರಬೇಕು ಎಂಬ ಸಮಸ್ಯೆ ಉದ್ಭವಿಸಿತು. ತೆಲುಗು ಭಾಷಿಕರು ಮತ್ತು ಆಂಧ್ರವಾದಿಗಳು ಬಳ್ಳಾರಿ ಜಿಲ್ಲೆ ಆಂಧ್ರ ಪ್ರದೇಶದ ಕಾಂಗ್ರೆಸ್ ಸಮಿತಿಯ ವ್ಯಾಪ್ತಿಗೆ ಸೇರಬೇಕು ಎಂದು ಒತ್ತಾಯಿಸತೊಡಗಿದರು. ಕನ್ನಡಿಗರು ಇಡೀ ಜಿಲ್ಲೆಯು ಕರ್ನಾಟಕ ಪ್ರಾಂತ ಕಾಂಗ್ರೆಸ್ ಸಮಿತಿಯ ವ್ಯಾಪ್ತಿಯಲ್ಲಿರಬೇಕು ಎಂದು ವಾದ ಮಾಡುತ್ತಿದ್ದರು. ಈ ವಾದವನ್ನು ಬಗೆಹರಿಸಲು 'ಕೇಳ್ಕರ್ ಸಮಿತಿ'ಯನ್ನು ರಚಿಸಲಾಯಿತು. ಬಳ್ಳಾರಿ ಜಿಲ್ಲೆಯ ಭಾಷಾವಾರು

ಜನಸಂಖ್ಯೆಯನ್ನು ಪರಿಶೀಲಿಸಿ ಬಳ್ಳಾರಿ ಜಿಲ್ಲೆಯ ಬಳ್ಳಾರಿ, ಹೊಸಪೇಟೆ, ಸಿರುಗುಪ್ಪ, ಹಡಗಲಿ, ಹರಪನಹಳ್ಳಿ, ಕೂಡ್ಲಿಗಿ ತಾಲ್ಲೂಕುಗಳು ಕರ್ನಾಟಕ ಪ್ರಾಂತ ಕಾಂಗ್ರೆಸ್ ವ್ಯಾಪ್ತಿಯಲ್ಲಿರಬೇಕೆಂದೂ ಮತ್ತು ಉಳಿದ ಮೂರು ತಾಲ್ಲೂಕುಗಳು ಅಂದರೆ ಆಲೂರು, ಆದೋನಿ ಮತ್ತು ರಾಯದುರ್ಗಗಳು ಆಂಧ್ರ ಪ್ರದೇಶ ಕಾಂಗ್ರೆಸ್ ಸಮಿತಿಯ ವ್ಯಾಪ್ತಿಯಲ್ಲಿರಬೇಕೆಂದೂ ಕೇಳ್ಕರ್ ಸಮಿತಿಯು ಶಿಫಾರಸ್ಸು ಮಾಡಿತು. ಆಗ ಒಡೆದ ಬಳ್ಳಾರಿ ಜಿಲ್ಲೆಯನ್ನು ಒಂದುಗೂಡಿಸುವ ಪ್ರಯತ್ನ ಅನಂತರ ಬಹಳ ವರ್ಷ ಕಾಲ ಮುಂದುವರೆದರೂ ಫಲಿಸಲಿಲ್ಲ. ಶೇಷಾದ್ರಿ ಮತ್ತು ಟಿ.ಆರ್.ಚಂದ್ರಶೇಖರ್ (1998:25)

ಕೋ. ಚೆನ್ನಬಸಪ್ಪನವರ ಪ್ರಕಾರ ಬಳ್ಳಾರಿಯಲ್ಲಿ ಏಕೀಕರಣದ ವಿಷಯವಾಗಿ ಹೋರಾಟ ಆರಂಭವಾದದ್ದು 1916ರಲ್ಲಿ. ಆಂಧ್ರ ವಿಶ್ವವಿದ್ಯಾಲಯವಾದಾಗ ಬಳ್ಳಾರಿಯ ಕಾಲೇಜುಗಳನ್ನು ಅಲ್ಲಿಗೆ ಸೇರಿಸಲಾಯಿತು. ಅದನ್ನು ಪ್ರತಿಭಟಿಸಿ ಹೋರಾಟ ನಡೆಯಿತು. ಮದ್ರಾಸು ವಿಶ್ವವಿದ್ಯಾಲಯದಲ್ಲೇ ಇರಬೇಕೆಂದು ಅಭಿಪ್ರಾಯವಿತ್ತು. ಅದೇ ಕನ್ನಡ - ಕರ್ನಾಟಕ ಪರ ಹೋರಾಟದ ಆರಂಭ. 1920ರ ವರೆಗೂ ಬಳ್ಳಾರಿಯಲ್ಲಿ ಕನ್ನಡ ಶಾಲೆಗಳೇ ಇರಲಿಲ್ಲ. ಬಳ್ಳಾರಿಯಲ್ಲಿ ಕನ್ನಡಿಗರು ತೆಲುಗು ನಾಟಕ ಆಡುತ್ತಿದ್ದರು. ಅನಂತಪುರದಲ್ಲಿ ತೆಲುಗರು ಕನ್ನಡ ಬಯಲಾಟ ಆಡುತ್ತಿದ್ದರು. ಮದ್ರಾಸ್ ರಾಜ್ಯದಲ್ಲಿ ಕನ್ನಡ ಅಂದರೆ ದಕ್ಷಿಣ ಕನ್ನಡದ ಭಾಗವಷ್ಟೆ ನೆನಪಾಗುತ್ತಿತ್ತು. ಬಳ್ಳಾರಿಯ ನೆನಪೇ ಆಗುತ್ತಿರಲಿಲ್ಲ. ಬಳ್ಳಾರಿಗೆ ಬರುತ್ತಿದ್ದುದು ತಮಿಳು ಅಥವಾ ತೆಲುಗು ಅಧಿಕಾರಿಗಳು ಮಾತ್ರ. 1946ರಲ್ಲಿ ಬಳ್ಳಾರಿಯ ಗರ್ಲ್ಸ್ ಹೈಸ್ಕೂಲ್‌ನಲ್ಲೂ ಕನ್ನಡ ಶಿಕ್ಷಣ ಇರಲಿಲ್ಲ. ಕನ್ನಡ ಶಿಕ್ಷಣ ಕೊಡಿ ಎಂದು ಸರ್ಕಾರವನ್ನು ಕೇಳಿದರೆ ಕನ್ನಡ ಕಲಿಯುವ ಹುಡುಗರೆಲ್ಲಿ ಎಂದು ಕೇಳುತ್ತಿದ್ದರಂತೆ. ಎಚ್.ಎಸ್.ಗೋಪಾಲರಾವ್ (1996:114)

ಎಚ್.ಎಸ್.ಗೋಪಾಲರಾವ್‌ರವರು 'ಕರ್ನಾಟಕ ಏಕೀಕರಣ ಇತಿಹಾಸ'(1996) ದಲ್ಲಿ ಮದ್ರಾಸ್ ಅಧಿಪತ್ಯದ ಕನ್ನಡ ಪ್ರದೇಶಗಳ ಸ್ಥಿತಿಗತಿಗಳ ಬಗೆಗೆ ಹೇಳುತ್ತಾ 'ಮದ್ರಾಸ್ ಅಧಿಪತ್ಯಕ್ಕೆ ಸೇರಿದ್ದ ಬಳ್ಳಾರಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಕನ್ನಡದ ಸ್ಥಿತಿಗಳು ಮುಂಬಯಿ ಅಧಿಪತ್ಯ ಮತ್ತು ಹೈದ್ರಾಬಾದ್ ಸಂಸ್ಥಾನಗಳಲ್ಲಿನ ಸ್ಥಿತಿಗತಿಗಳಿಗಿಂತ ಉತ್ತಮವಾಗಿದ್ದವು. ಬಳ್ಳಾರಿ ಜಿಲ್ಲೆಯಲ್ಲಿ ತೆಲುಗರ ಪ್ರಭಾವ ಅಧಿಕವಾಗಿದ್ದರೂ ಕನ್ನಡಿಗರ ಬಲವನ್ನು ಕುಂದಿಸುವಂತಹ ಕೆಲಸಗಳು ಆರಂಭದ ಕಾಲದಿಂದಲೂ ಆಗಲಿಲ್ಲ. ಬಳ್ಳಾರಿ ನಗರ ಮತ್ತು ಜಿಲ್ಲೆಯ ಪೂರ್ವ ಭಾಗಗಳಲ್ಲಿ ತೆಲುಗರು ತಮ್ಮ ಪ್ರತಿನಿಧಿತ್ವವನ್ನು ಬಲಪಡಿಸಿಕೊಳ್ಳಲು ಪ್ರಯತ್ನಿಸಿದರಾದರೂ ಆ ನಿಟ್ಟಿನಲ್ಲಿ ಜಯಶಾಲಿಗಳಾಗಲಿಲ್ಲ. ವಿಜಯನಗರದ ಅರಸರು ತೆಲುಗರು ಎಂದು ಪ್ರತಿಪಾದಿಸುವ ತೆಲುಗರಿಗೆ ಬಳ್ಳಾರಿ ಮತ್ತು ಅದಕ್ಕೆ ಹೊಂದಿಕೊಂಡ ಪ್ರದೇಶಗಳೆಲ್ಲ ತಮಗೇ ಸೇರಿದ್ದು ಎಂಬ ಆತ್ಮಾಭಿಮಾನ. ಬಳ್ಳಾರಿ ಜಿಲ್ಲೆದಲ್ಲಿ ಅಧಿಕಾರಿಗಳಾಗಿ ನೇಮಕಗೊಳ್ಳುತ್ತಿದ್ದವರಲ್ಲಿ ತೆಲುಗರ ಸಂಖ್ಯೆಯೇ ಅಧಿಕವಾಗಿತ್ತು. ಈ ಕಾರಣದಿಂದಲೂ ತೆಲುಗಿನ ಪ್ರಭಾವದಿಂದ

ಆ ಭಾಗ ಬಿಡುಗಡೆ ಹೊಂದಲಿಲ್ಲ. ಆದರೂ ಕನ್ನಡವನ್ನು ಸಶಕ್ತವಾಗಿ ಉಳಿಸಿಕೊಂಡ ಕೀರ್ತಿ ಅಲ್ಲಿನ ಹಲವು ಗಣ್ಯರಿಗೆ ಮತ್ತು ಗ್ರಾಮೀಣ ಜನತೆಗೆ ಸಲ್ಲಬೇಕು. ತೆಲುಗು ಭಾಷಿಕ ರಾಜಕಾರಣಿಗಳು ಬಳ್ಳಾರಿ ಜಿಲ್ಲೆಯಲ್ಲಿ ಕನ್ನಡಿಗರನ್ನು ದುರ್ಬಲಗೊಳಿಸಲು ನಿರಂತರವಾಗಿ ಭಾಷಣ, ಹೇಳಿಕೆ, ಪ್ರಚಾರ ಇತ್ಯಾದಿ ಅನೇಕ ಕಾರ್ಯ ವಿಧಾನಗಳ ಮೂಲಕವಲ್ಲದೆ, ರಾಜಕೀಯವಾಗಿಯೂ ಪ್ರಯತ್ನಿಸಿದರು. ಆದರೆ ಬಳ್ಳಾರಿಯ ಕನ್ನಡಿಗರು ಎದೆಗುಂದಲಿಲ್ಲ. ಸರ್ಕಾರದ ಮತ್ತು ಸಂಬಂಧಿತ ಅಧಿಕಾರಿಗಳ ಇಬ್ಬಂದಿತನ, ರಾಜಕಾರಣಿಗಳ ಸಂಚುಗಳ ನಡುವೆ ಬಳ್ಳಾರಿಯ ಕನ್ನಡಿಗರು ತಮ್ಮ ಭಾಷಿಕ ಹಕ್ಕನ್ನು ಕಾಯ್ದುಕೊಂಡಿದ್ದರು.

ಭಾರತ ರಾಜ್ಯ ಘಟನಾ ಸಮಿತಿಯು ಭಾಷಾವಾರು ಪ್ರಾಂತ ರಚನೆಗೆ ಸಂಬಂಧಿಸಿದಂತೆ ವರದಿ ನೀಡಲು ಎಸ್.ಕೆ.ಧರ್ ಅಧ್ಯಕ್ಷತೆಯಲ್ಲಿ ಭಾಷಾವಾರು ಪ್ರಾಂತ ರಚನಾ ಆಯೋಗವನ್ನು ನೇಮಿಸಿತು. ಬಳ್ಳಾರಿಯ ಪೂರ್ವ ಕರ್ನಾಟಕ ಏಕೀಕರಣ ಸಮಿತಿ ಅದಕ್ಕೆ ಉತ್ತರಿಸುತ್ತಾ ಬಳ್ಳಾರಿ ಜಿಲ್ಲೆ ಇಡಿಯಾಗಿ ಒಂದೇ ಘಟಕವಾಗಿದೆ. ಅಲ್ಲಿನ ಜನರಲ್ಲಿ ಅಧಿಕ ಸಂಖ್ಯೆಯಲ್ಲಿರುವವರು ಕನ್ನಡಿಗರು ಮತ್ತು ಅವರೆಲ್ಲರೂ ತಾವೂ ಕರ್ನಾಟಕದಲ್ಲಿ ವಿಲೀನಗೊಳ್ಳುವ ಅಭಿಪ್ರಾಯ ಹೊಂದಿದ್ದಾರೆಂದು ಸ್ಪಷ್ಟಪಡಿಸಿದ್ದರೂ, ಕೆಲವು ಆಂಧ್ರರು ಹಕ್ಕು ಸ್ಥಾಪಿಸಲು ಪ್ರಯತ್ನಿಸಿದರು. ಬಳ್ಳಾರಿಯಲ್ಲೂ ಒಟ್ಟು 47,436 ಜನರಲ್ಲಿ ಶೇಕಡಾ 36ರಷ್ಟು ಕನ್ನಡಿಗರು, ಶೇಕಡಾ 35ರಷ್ಟು ತೆಲುಗರು ಎಂದು ತಿಳಿಯಲಾಗಿತ್ತು. ಆಂಧ್ರಪರ ಜನಗಣತಿಕಾರರು ಎಲ್ಲಾ ಜನರನ್ನು ತೆಲುಗು ಬರತ್ತದೆಯೇ? ತೆಲುಗು ಅರ್ಥವಾಗುತ್ತದೆಯೇ? ಎಂಬ ಪ್ರಶ್ನೆಗಳನ್ನು ಕೇಳಿ ಹೌದು ಎಂದು ಉತ್ತರ ಬಂದರೆ, ತಕ್ಷಣ ಅಂತಹವರ ಭಾಷೆ ತೆಲುಗು ಎಂದು ದಾಖಲಿಸುತ್ತಿದ್ದರು. ಹೀಗಾಗಿ ತೆಲುಗನ್ನು ಮಾತನಾಡಲು ಮತ್ತು ಅರ್ಥಮಾಡಿಕೊಳ್ಳಬಲ್ಲ ಕನ್ನಡಿಗರ ಸ್ವಭಾಷೆ ತೆಲುಗು ಎಂದೇ ದಾಖಲಿಸಲಾಯಿತು. ಪ್ರಬಲ ವಿರೋಧಗಳಿದ್ದರೂ ಕನ್ನಡ ಮಾಧ್ಯಮ ಶಾಲೆಗಳಿಗೆ ಬದಲು ತೆಲುಗು ಮಾಧ್ಯಮದ ಶಾಲೆಗಳೇ ಅಧಿಕಗೊಂಡವು. ತೆಲುಗರು ಮತ್ತು ತಮಿಳರ ವಲಸೆ ಹೆಚ್ಚಾಯಿತು. ಇದನ್ನು ತಪ್ಪಿಸಲು ಮತ್ತು ಖಚಿತವಾದ ಕನ್ನಡಿಗರ ಸಂಖ್ಯೆಯನ್ನು ಗುರುತಿಸಲು ಏಕೀಕರಣ ಸಮಿತಿಯು ಗ್ರಾಮ ಸರ್ವೇಕ್ಷಣೆಯನ್ನು ಮಾಡಿ ವಿಷಯ ಸಂಗ್ರಹಿಸಿತು. 1931ರಲ್ಲಿ ಜನಗಣತಿಯ ಪ್ರಕಾರ ಶೇಕಡಾ 18ರಷ್ಟು ಜನ ಕನ್ನಡಿಗರಿದ್ದಾರೆಂದು ದಾಖಲಾದ ಹಳ್ಳಿಗಳಲ್ಲೇ 1948ರಲ್ಲಿ ಶೇಕಡಾ 75ರಷ್ಟು ಜನ ಕನ್ನಡಿಗರಿದ್ದುದು ಏಕೀಕರಣ ಸಮಿತಿ ದಾಖಲು ಮಾಡಿತು.

ಆಂಧ್ರ ಪ್ರಾಂತ ರಚನೆ ಮಾಡಲು ನಿರ್ಧರಿಸಿದ ಕೇಂದ್ರ ಸರ್ಕಾರ ಬಳ್ಳಾರಿ ಜಿಲ್ಲೆಯ ಬಗೆಗೆ ಖಚಿತವಾದ ನಿರ್ಧಾರ ಮಾಡುವುದು ಅನಿವಾರ್ಯವಾಗಿತ್ತು. 1921ರಲ್ಲಿ ಕೇಳ್ಕರ್ ಸಮಿತಿಯು ನೀಡಿದ್ದ ಸಲಹೆಯ ಆಧಾರದ ಮೇಲೆ ಆಲೂರು, ಆದವಾನಿ ಮತ್ತು ರಾಯದುರ್ಗಗಳು ತೆಲುಗು ಭಾಷಿಕರ ಪ್ರದೇಶವೆಂದು ಮತ್ತು ಅವು ಬಳ್ಳಾರಿ ಜಿಲ್ಲೆಯಿಂದ

ಆಂಧ್ರಪ್ರದೇಶಕ್ಕೆ ವರ್ಗಾವಣೆಯಾಗಬೇಕೆಂದೂ ಪ್ರಬಲವಾದ ಕೂಗೆದ್ದಿತು. ಈ ಸಮಸ್ಯೆಯ ಪರಿಹಾರಕ್ಕೆ ಮುಖ್ಯ ನ್ಯಾಯಾಧೀಶ ವಾಂಛೂ ಅವರನ್ನು ಆಂಧ್ರ ಜಿಲ್ಲೆ ರಚನೆಯ ಬಗ್ಗೆ ವರದಿ ಸಲ್ಲಿಸಲು ಕೇಂದ್ರ ಸರ್ಕಾರ ನೇಮಿಸಿತು. ವಾಂಛೂ ಅವರನ್ನು ಬಳ್ಳಾರಿಯ ಅನೇಕ ಸಂಘ, ಸಂಸ್ಥೆಗಳು, ರಾಜಕೀಯ ಪಕ್ಷದವರು ಭೇಟಿ ಮಾಡಿ ಮನವಿಗಳನ್ನು ಸಲ್ಲಿಸಿದರು. ವಾಂಛೂ ಬಳ್ಳಾರಿ ಜಿಲ್ಲೆಯೂ ಆಂಧ್ರದೊಡನೆ ಸೇರಲು ಹಲವು ತೊಂದರೆಗಳಿರುವುದನ್ನು ಗಮನಿಸಿದರು. ಆಂಧ್ರ ಪರವಾದಿಸಿದವರು ಬಳ್ಳಾರಿ ಜಿಲ್ಲೆಯು ಇಡಿಯಾಗಿ ಆಂಧ್ರಕ್ಕೆ ಸೇರಬೇಕೆಂದು ಒತ್ತಾಯಿಸಿದರು. ವಿಜಯನಗರ ಅರಸರ ಕಾಲದಿಂದಲೂ ಅದು ತೆಲುಗರಿಗೇ ಸೇರಿದ್ದು ಎಂಬುದು ಅವರ ನಂಬಿಕೆಯಾಗಿತ್ತು. ಆದರೆ ಬಳ್ಳಾರಿ ಇಡಿಯಾಗಿ ಆಂಧ್ರಕ್ಕೆ ಸೇರಬೇಕೆಂಬ ಅವರ ವಾದವನ್ನು ಕನ್ನಡಿಗರು ಒಪ್ಪಲು ಸಾಧ್ಯವಿರಲಿಲ್ಲ.

ವಾಂಛೂರವರು ಅನೇಕ ವಾದ ಪ್ರತಿವಾದಗಳನ್ನು ಕೇಳಿ ಬಳ್ಳಾರಿ ಜಿಲ್ಲೆಯಲ್ಲಿ ವಾಸ್ತವ ಪರಿಸ್ಥಿತಿಯನ್ನು ಖುದ್ದು ನೋಡಿ ಸಿದ್ಧಪಡಿಸಿದ ವರದಿಯನ್ನು ಕೇಂದ್ರ ಸರ್ಕಾರಕ್ಕೆ ಒಪ್ಪಿಸಿದರು. ಈ ವರದಿಯ ಪ್ರಕಾರ ಬಳ್ಳಾರಿಯ ಆಲೂರು, ಆದವಾನಿ ಮತ್ತು ರಾಯದುರ್ಗ ತಾಲ್ಲೂಕುಗಳು ಆಂಧ್ರಕ್ಕೆ ವರ್ಗಾವಣೆಯಾಗಬೇಕೆಂದು ಶಿಫಾರಸ್ಸು ಮಾಡಿತ್ತು. ಈ ವರದಿಯನ್ನು ಆಧರಿಸಿ ಬಳ್ಳಾರಿ ಜಿಲ್ಲೆಯ ವಿಭಜನೆಯನ್ನು 25.03.1953ರಂದು ಲೋಕಸಭೆಯಲ್ಲಿ ಘೋಷಿಸಲಾಯಿತು. ಈ ಸಮಿತಿಯು ಬಳ್ಳಾರಿ ಜಿಲ್ಲೆಯ ಪಶ್ಚಿಮ ಭಾಗದ ತಾಲ್ಲೂಕುಗಳಾದ ಹೊಸಪೇಟೆ, ಕೂಡ್ಲಿಗಿ, ಹರಪನಹಳ್ಳಿ, ಹಡಗಲಿ, ಸಂಡೂರು ಹಾಗೂ ಪೂರ್ವ ಭಾಗದ ಸಿರುಗುಪ್ಪ ತಾಲ್ಲೂಕು ಮತ್ತು ಮಲ್ಲಪುರ ತಾಲ್ಲೂಕುಗಳನ್ನು ಇವುಗಳನ್ನು ಮೈಸೂರು ರಾಜ್ಯಕ್ಕೆ ಸೇರಿಸಲು ಶಿಫಾರಸ್ಸು ಮಾಡಿತ್ತು. ಇವೆಲ್ಲವನ್ನು ವಿಭಜನೆ ಮಾಡಿದ ವಾಂಛೂ ಸಮಿತಿಯು ಬಳ್ಳಾರಿ ತಾಲ್ಲೂಕಿನ ಬಗ್ಗೆ ಯಾವುದೇ ತೀರ್ಮಾನವನ್ನು ನೀಡಲು ಸಾಧ್ಯವಾಗಲಿಲ್ಲ. ಏಕೆಂದರೆ ಬಳ್ಳಾರಿ ತಾಲ್ಲೂಕು ಮಿಶ್ರ ಭಾಷೆಯ ಪ್ರದೇಶವೆಂದು ವಾದಗ್ರಸ್ತವಾದ್ದರಿಂದ ಈ ಬಗ್ಗೆ ಯಾವ ತೀರ್ಮಾನವನ್ನು ಮಾಡಲಿಲ್ಲ.

ಬಳ್ಳಾರಿ ತಾಲ್ಲೂಕಿನ ಸಮಸ್ಯೆಯು ಬಗೆಹರಿಯದ ಕಾರಣ ಆತಂಕಕಾರಿ ಸ್ವರೂಪ ತಳೆಯಿತು. ಇದನ್ನು ಗಮನಿಸಿದ ಭಾರತದ ರಾಷ್ಟ್ರಪತಿಗಳು ನ್ಯಾಯಮೂರ್ತಿ ಎಸ್.ಎಲ್.ಮಿಶ್ರಾರವರ ನೇತೃತ್ವದಲ್ಲಿ ಒಂದು ಸಮಿತಿಯನ್ನು ನೇಮಿಸಿ, ಬಳ್ಳಾರಿ ಜಿಲ್ಲೆಯ ಬಳ್ಳಾರಿ ತಾಲ್ಲೂಕಿನ ಪ್ರಶ್ನೆಯನ್ನು ಬಗೆಹರಿಸಲು ಕೇಳಿಕೊಂಡರು. ಮಿಶ್ರಾರವರು 1891ರಿಂದ 1951ರವರೆಗಿನ ಜನಗಣತಿಯ ಅಂಕಿ - ಅಂಶಗಳನ್ನು ತರಿಸಿಕೊಂಡು ಅದರ ಪ್ರಕಾರ ಎಲ್ಲಾ ಸಂದರ್ಭಗಳಲ್ಲೂ ಬಳ್ಳಾರಿ ಜಿಲ್ಲೆಯಲ್ಲಿ ಕನ್ನಡಿಗರು ಅರ್ಧಕ್ಕಿಂತಲೂ ಅಧಿಕವಾಗಿರುವುದನ್ನು ಮಿಶ್ರಾ ಸಮಿತಿ ಗುರುತಿಸಿತು. ಚಾರಿತ್ರಿಕ ಹಾಗೂ ಆಡಳಿತಾತ್ಮಕ ಅಂಶಗಳನ್ನು ಗಮನಿಸಲಾಗಿ ಎಲ್ಲೆಡೆಯಲ್ಲೂ ಪ್ರಚಲಿತ ಭಾಷೆ ಕನ್ನಡ ಎಂಬುದು ನಿರ್ವಿವಾದವಾಗಿ ದಾಖಲಾಗಿದೆ. ಈಚಿನ ಜನಗಣತಿಯ ಅಂಕಿ - ಅಂಶಗಳಲ್ಲಿ ಮಾತ್ರ ಕೆಲವು ವೈಪರೀತ್ಯಗಳು

ಕಂಡುಬಂದಿವೆ. ಬಳ್ಳಾರಿ ನಗರದಲ್ಲಿ ತೆಲುಗರ ಸಂಖ್ಯೆ ಅಧಿಕವೆನಿಸಿದರೂ ಇಡಿಯಾಗಿ ಬಳ್ಳಾರಿ ತಾಲ್ಲೂಕಿನಲ್ಲಿ ಕನ್ನಡಿಗರ ಸಂಖ್ಯೆ ಅಧಿಕವಾಗಿರುವುದರಿಂದ ಇಡೀ ತಾಲ್ಲೂಕನ್ನು ಒಂದು ಘಟ್ಟವಾಗಿ ಪರಿಗಣಿಸಬೇಕೆಂಬ ಕನ್ನಡಿಗರ ಪ್ರಮುಖ ವಾದವನ್ನು ಒಪ್ಪಿಕೊಂಡು ಯಾವ ದೃಷ್ಟಿಯಿಂದಲೂ ಬಳ್ಳಾರಿ ನಗರ ಮತ್ತು ತಾಲ್ಲೂಕು ಭಾಷಿಕವಾಗಿ ಆಂಧ್ರಕ್ಕೆ ಸೇರಲು ಸಾಧ್ಯವಿಲ್ಲ. ಆಂಧ್ರದ ಬೇಡಿಕೆ ನ್ಯಾಯಯುತ ಬೇಡಿಕೆಯಲ್ಲ ಎಂಬ ಅಭಿಪ್ರಾಯಕ್ಕೆ ಬಂದು, ಬಳ್ಳಾರಿ ತಾಲ್ಲೂಕು ಸಂಪೂರ್ಣವಾಗಿ ಮೈಸೂರು ರಾಜ್ಯಕ್ಕೆ ಸೇರಬೇಕೆಂದು ಶಿಫಾರಸ್ಸು ಮಾಡಲಾಯಿತು. ಅದರಂತೆ ಅನೇಕ ಸಮಸ್ಯೆಗಳ ನಡುವೆ 1.10.1953ರಂದು ಬಳ್ಳಾರಿಯ 7 ತಾಲ್ಲೂಕುಗಳಾಗಿ ಬಳ್ಳಾರಿ, ಸಿರುಗುಪ್ಪ, ಸಂಡೂರು, ಹೊಸಪೇಟೆ, ಕೂಡ್ಲಿಗಿ, ಹರಪನಹಳ್ಳಿ, ಹಡಗಲಿ, ಮಲ್ಲಪುರ - ಇವು ಮೈಸೂರು ರಾಜ್ಯದೊಂದಿಗೆ ವಿಲೀನಗೊಂಡು ಏಕೀಕರಣ ಪ್ರಕ್ರಿಯೆಗೆ ನಾಂದಿ ಹಾಡಿದವು. ಕನ್ನಡಿಗರ ಪ್ರದೇಶವೆಂದು ಬಳ್ಳಾರಿಗೆ ರಾಜಕೀಯವಾಗಿ ಗಡಿಯನ್ನು ಹಾಕಲಾಯಿತೇ ಹೊರತು ಭಾಷಿಕ ಗಡಿಗಳನ್ನು ಹಾಕಲು ಸಾಧ್ಯವಾಗಲಿಲ್ಲ. ಆದ್ದರಿಂದ ರಾಜಕೀಯ ಗಡಿಗಳನ್ನು ಮೀರಿದ ಭಾಷಿಕ ಪ್ರಕ್ರಿಯೆಗಳು ದ್ವಿಭಾಷಾ ಸಂದರ್ಭದಲ್ಲಿ ನಡೆದುಕೊಂಡು ಬಂದವು.

## ಉ. ವಲಸಿಗರು ಮತ್ತು ಪ್ರವಾಸಿಗರಿಂದ ಉಂಟಾದ ದ್ವಿಭಾಷಿಕತೆ

ಬಳ್ಳಾರಿ ಜಿಲ್ಲೆ ಅನೇಕ ಹೊರ ರಾಜ್ಯಗಳ ಜನರನ್ನು ಆಕರ್ಷಿಸಿದೆ. ಬೇರೆ ಬೇರೆ ಧರ್ಮದ, ಭಾಷೆಯ ಜನರು ಇಲ್ಲಿ ವಲಸೆ ಬಂದು ಅನೇಕ ವರ್ಷಗಳಿಂದ ಇಲ್ಲೇ ನೆಲೆಸಿದ್ದಾರೆ. 1960ರಿಂದ 1970ರ ದಶಕದಲ್ಲಿ ತುಂಗಭದ್ರಾ ಅಣೆಕಟ್ಟು ನಿರ್ಮಾಣದಲ್ಲಿ ದೊರೆತಂತಹ ಕೂಲಿ, ನಂತರದಲ್ಲಿನ ನೀರಾವರಿ ಸೌಲಭ್ಯ; ಬಳ್ಳಾರಿ ಮತ್ತು ಹೊಸಪೇಟೆ ತಾಲ್ಲೂಕುಗಳ ಸುತ್ತ - ಮುತ್ತಲ ಪ್ರದೇಶದಲ್ಲಿ ಯಥೇಚ್ಛವಾಗಿ ದೊರೆಯುತ್ತಿದ್ದ ವ್ಯವಸಾಯದ ಭೂಮಿ; ಈ ಜಿಲ್ಲೆಯ ಔದ್ಯಮೀಕರಣ; ಆಧುನೀಕರಣದಿಂದ ಸೃಷ್ಟಿಯಾದ ವಿವಿಧ ಉದ್ಯೋಗಾವಕಾಶಗಳ ಕಾರಣವಾಗಿ ತಮಿಳರು, ತೆಲುಗರು, ಉತ್ತರ ಭಾರತದವರು, ರಾಜಸ್ಥಾನಿಗಳು ಮುಂತಾದ ಅನೇಕ ಭಾಷಿಕರು ಬಂದು ನೆಲೆಸಿರುವುದು - ಇವು ಇಲ್ಲಿನ ದ್ವಿಭಾಷಿಕ ಹಾಗೂ ಬಹುಭಾಷಿಕ ಪರಿಸರಗಳು ಉಂಟಾಗಲು ಕಾರಣಗಳಾಗಿವೆ. ಜೊತೆಗೆ ವಿಜಯನಗರದ ಪ್ರಸಿದ್ಧ ರಾಜಧಾನಿಯಾದ ಹಂಪಿಯ ಕಾರಣಕ್ಕಾಗಿ ಅನೇಕ ದೇಶೀಯ ಹಾಗೂ ವಿದೇಶಿಯ ಪ್ರವಾಸಿಗರು ಇಲ್ಲಿಗೆ ಬಂದು ಹೋಗುವುದರಿಂದ ಇಲ್ಲಿನ ಪ್ರವಾಸಿ ಗೈಡ್‌ಗಳು, ಹೋಟೆಲ್ ಮಾಣಿಗಳು, ವ್ಯಾಪಾರಿಗಳು, ವಾಹನ ಚಾಲಕರುಗಳು ಹಲವು ಭಾಷೆಗಳಲ್ಲಿ ವ್ಯವಹರಿಸುವುದನ್ನು ಕಲಿತಿದ್ದಾರೆ. ವ್ಯಕ್ತಿ ಯಾವ ಸಾಮಾಜಿಕ ಪರಿಸರದಲ್ಲಿ ವಾಸಿಸುವನೋ ಆಯಾ ಸಾಮಾಜಿಕ ಪರಿಸರದ ಭಾಷೆಯನ್ನು ತಮ್ಮ ವ್ಯವಹಾರಿಕ ಭಾಷೆಯನ್ನಾಗಿ ಸ್ವೀಕರಿಸಬೇಕಾಗುತ್ತದೆ. ಹೀಗಾಗಿ ಇಲ್ಲಿಗೆ ವಲಸೆ ಬಂದ ಅನೇಕ ವಲಸಿಗ ಸಮುದಾಯದವರು ತಮ್ಮ ಪ್ರಥಮ ಭಾಷೆಯನ್ನು ಕೆಲವೇ ಆವರಣಗಳಲ್ಲಿ ಉಳಿಸಿಕೊಂಡು ಕನ್ನಡವನ್ನು ಹೆಚ್ಚಿನ ಸಂವಹನ ಸಂದರ್ಭಗಳಿಗೆ ಬಳಸುವಂತವರಾಗಿದ್ದಾರೆ. ಇವರಲ್ಲಿ ಕೆಲವರು

ಸಾಮಾಜಿಕ ಸಂಪರ್ಕ ಕಡಿಮೆ ಇರುವ ಹೆಂಗಸರು, ಕಲಿಯುವ ಸಾಮರ್ಥ್ಯ ಮಾಸಿದ ವೃದ್ಧರು, ಒಂದೇ ಭಾಷಾ ಕುಟುಂಬಗಳ ಹೆಚ್ಚು ಹತ್ತಿರವಿರುವವರಲ್ಲಿ ಏಕಭಾಷಿಗಳಾಗಿ ಉಳಿದಿದ್ದಾರೆ. ಹಾಗೆಯೇ ಎಲ್ಲಾ ದ್ವಿಭಾಷಿಗರು ವಲಸಿಗರಲ್ಲ.

## ಊ. ಜನಗಣತಿಯನ್ನು ಆಧರಿಸಿದ ಸ್ವಭಾಷಿಕ - ದ್ವಿಭಾಷಿಕರ ಸಂಖ್ಯಾ ಪ್ರಮಾಣಗಳು

ಸ್ವಭಾಷಿಕರ ಸಂಖ್ಯೆಯ ದೃಷ್ಟಿಯಿಂದ ಕನ್ನಡ, ಉರ್ದು, ತೆಲುಗು, ತಮಿಳು, ಮರಾಠಿ, ಲಂಬಾಣಿ, ಮಲಯಾಳಂ, ಹಿಂದಿ ಭಾಷೆಗಳು ಮುಖ್ಯವಾಗಿವೆ. ಉಳಿದ ಭಾರತೀಯ ಭಾಷೆಗಳನ್ನಾಡುವವರು ಈ ಜಿಲ್ಲೆಯಲ್ಲಿ ಅತ್ಯಲ್ಪ. ವಿದೇಶಿ ಭಾಷೆಗಳನ್ನು ಕಲಿತು ಬಳಸುವವರೂ ಸಹ ಹಂಪಿಯಂತಹ ಪ್ರವಾಸಿ ಸ್ಥಳಗಳಲ್ಲಿ ಕಂಡುಬರುತ್ತಾರೆ. 1951ರಿಂದ 1991ರವರೆಗಿನ ಜನಗಣತಿಯ ಪ್ರಕಾರ ಈ ಜಿಲ್ಲೆಯ ಒಟ್ಟೂ ಜನಸಂಖ್ಯೆ, ಅದರಲ್ಲಿ ಕನ್ನಡವನ್ನೇ ಮನೆಮಾತಾಗಿವುಳ್ಳವರು , ತೆಲುಗನ್ನು ಮನೆಮಾತಾಗಿವುಳ್ಳವರು. ಅದರ ಪ್ರತಿಶತ ಪ್ರಮಾಣ ಹಾಗೂ ಅವರಲ್ಲಿಯ ಹಳ್ಳಿ - ಪಟ್ಟಣ ನಿವಾಸಿಗರ ಪ್ರತಿಶತ ಪ್ರಮಾಣಗಳು, ಪುರುಷರ ಮತ್ತು ಮಹಿಳೆಯರ ಪ್ರತಿಶತ ಪ್ರಮಾಣಗಳನ್ನು ಕೋಷ್ಟಕ - 1 ರಲ್ಲಿ ಕೊಡಲಾಗಿದೆ.

# 1951ರಿಂದ 1991ರವರೆಗಿನ ಬಳ್ಳಾರಿ ಜಿಲ್ಲೆಯ ಜನಗಣತಿ ಆಧಾರಿತ ಕನ್ನಡ - ತೆಲುಗು ಭಾಷೆಯ ವಿವರಗಳು

**ಕೋಷ್ಟಕ - 1**

| ರ್ಷ ...ವಾರು | ಬಳ್ಳಾರಿ ಜಿಲ್ಲೆಯ ಒಟ್ಟು ಜನಸಂಖ್ಯೆ | ಕನ್ನಡಿಗರು | ತೆಲುಗರು | ಹಳ್ಳಿಯಲ್ಲಿನ ಕನ್ನಡಿಗರು | ಹಳ್ಳಿಯಲ್ಲಿನ ತೆಲುಗರು | ಪಟ್ಟಣದಲ್ಲಿನ ಕನ್ನಡಿಗರು | ಪಟ್ಟಣದಲ್ಲಿನ ತೆಲುಗರು | ಪುರುಷರ ಪ್ರಮಾಣ | ಮಹಿಳೆಯರ ಪ್ರಮಾಣ |
|---|---|---|---|---|---|---|---|---|---|
| 51 | | 5,54,499<br>71.40 % | 96,147<br>12.40 % | ಮಾಹಿತಿ ಇಲ್ಲ | ಮಾಹಿತಿ ಇಲ್ಲ | ಮಾಹಿತಿ ಇಲ್ಲ | ಮಾಹಿತಿ ಇಲ್ಲ | ಮಾಹಿತಿ ಇಲ್ಲ | ಮಾಹಿತಿ ಇಲ್ಲ |
| 61 | | 6,75,676 | 93,456 | ಮಾಹಿತಿ ಇಲ್ಲ | ಮಾಹಿತಿ ಇಲ್ಲ | ಮಾಹಿತಿ ಇಲ್ಲ | ಮಾಹಿತಿ ಇಲ್ಲ | ಮಾಹಿತಿ ಇಲ್ಲ | ಮಾಹಿತಿ ಇಲ್ಲ |
| 71 | 11,22,686 | 8,23,594<br>73.36 % | 1,12,028<br>10.00 % | 6,77,707<br>82.20 % | 57,352<br>51.10 % | 1,45,887<br>17.70 % | 54,676<br>48.80 % | *4,16,665<br>50.60 %<br>**57,145<br>51.00 % | *4,06,929<br>49.40 %<br>**54,883<br>49.00 % |
| 81 | 14,89,225 | 10,67,961<br>71.70 % | 1,54,259<br>10.30 % | 8,27,747<br>77.50 % | 79,364<br>51.00 % | 2,46,214<br>23.00 % | 74,895<br>48.50 % | 5,36,062<br>50.20 %<br>*78,419<br>50.80 % | 5,39,899<br>50.60 %<br>*75,840<br>49.20 % |
| 91 | 18,90,092 | 13,84,445<br>73.25 % | 1,91,288<br>10.12 % | 11,08,012<br>80.00 % | 88,514<br>46.27 % | 2,76,433<br>19.97 % | 1,02,774<br>53.73 % | | |

ನ್ನಡಿಗರು, **ತೆಲುಗರು

ಲ : ಭಾರತೀಯ ಜನಗಣತಿಯನ್ನು ಆಧರಿಸಿ ಸಿದ್ಧಪಡಿಸಿದ ಕೋಷ್ಟಕ

rnataka State District Profile - 1951 to 1991

ಕೋಷ್ಟಕ - 1ರ ಆಧಾರದಿಂದ ಈ ಕೆಲವು ಸಂಗತಿಗಳನ್ನು ಗಮನಿಸಬಹುದು. ಜಿಲ್ಲೆಯಲ್ಲಿ ಕನ್ನಡಿಗರು ಮೊದಲ ಸ್ಥಾನದಲ್ಲಿದ್ದು, ಎರಡನೆ ಸ್ಥಾನದಲ್ಲಿ ಉರ್ದು ಭಾಷಿಕರು, ಮೂರನೆಯ ಸ್ಥಾನದಲ್ಲಿ ತೆಲುಗು ಭಾಷಿಕರಿರುವುದು ಕಂಡುಬಂದಿದೆ. ಒಟ್ಟು ಕರ್ನಾಟಕ ರಾಜ್ಯದ ಭಾಷೆಯ ಸ್ಥಾನದಲ್ಲೂ ಕ್ರಮವಾಗಿ ಕನ್ನಡ - ಉರ್ದು - ತೆಲುಗು ಭಾಷೆಗಳು ಮೊದಲ ಮೂರು ಸ್ಥಾನದಲ್ಲಿ ಇವೆ. 1951ರಿಂದ 1991ರವರೆಗಿನ ಜನಗಣತಿಯ ಅಂಕಿ - ಅಂಶಗಳನ್ನು ಗಮನಿಸಿದರೆ ಒಟ್ಟಾರೆಯಾಗಿ ಕನ್ನಡಿಗರೇ ಅಧಿಕ ಸಂಖ್ಯೆಯಲ್ಲಿರುವುದು ಕಂಡುಬಂದಿದೆ. ಹಳ್ಳಿಯಲ್ಲಿ ಕನ್ನಡಿಗರ ಸಂಖ್ಯೆ ಅಧಿಕವಾಗಿ ಕಂಡುಬರುತ್ತಿದೆ. ತೆಲುಗರಲ್ಲಿ ಹಳ್ಳಿ-ಪಟ್ಟಣಗಳ ಹಂಚಿಕೆ ಬಹುಮಟ್ಟಿಗೆ (ಸ್ವಲ್ಪ ವ್ಯತ್ಯಾಸ ಬಿಟ್ಟರೆ) ಒಂದೇ ರೀತಿಯಾಗಿದೆ. ಉರ್ದು, ತಮಿಳು, ಮರಾಠಿ, ಮಲಯಾಳಂ ಭಾಷಿಕರು ಹೆಚ್ಚಿನ ಸಂಖ್ಯೆಯಲ್ಲಿ ಪಟ್ಟಣವಾಸಿಗಳು. ತಮಿಳು, ಮಲಯಾಳಂ ಭಾಷಿಕರಲ್ಲಿ ಹೆಚ್ಚಿನವರು ಹೊಸಪೇಟೆ ನಗರ ಮತ್ತು ಹೊಸಪೇಟೆ ತಾಲ್ಲೂಕು ತುಂಗಭದ್ರಾ ಜಲಾಶಯ ಪ್ರದೇಶದಲ್ಲೇ ಹೆಚ್ಚು ಕೇಂದ್ರೀಕೃತರಾಗಿದ್ದಾರೆ.

1951ರ ಬಳ್ಳಾರಿ ಜಿಲ್ಲೆಯ ಜನಗಣತಿಯ ಅಂಕಿ - ಅಂಶಗಳ ಪ್ರಕಾರ 71.4% ಕನ್ನಡಿಗರಿಗೆ 12.4% ತೆಲುಗು ಭಾಷಿಕರಿದ್ದಾರೆ. ಈ ಅಂಕಿ - ಅಂಶಗಳ ಬಗೆಗೆ ಗೊಂದಲಗಳಿವೆ. ಏಕೆಂದರೆ, 1951ರ ಸಂದರ್ಭದಲ್ಲಿ ಬಳ್ಳಾರಿಯಲ್ಲಿ ಇನ್ನೂ ಭಾಷಾವಾರು ಪ್ರಾಂತ ರಚನೆಯ ಹೋರಾಟ ನಡೆಯುತ್ತಿತ್ತು. ಇಂತಹ ಸಂದರ್ಭದಲ್ಲಿ ಜನಗಣತಿಯ ಕಾರ್ಯ ಪ್ರಾರಂಭವಾದಾಗ ಕೆಲವು ಭಾಷಿಕರು ಚಾತುರ್ಯದಿಂದ ತಮ್ಮ ಮನೆಮಾತನ್ನು ಮರೆಮಾಡಿ, ಕನ್ನಡ ಬಲ್ಲವರೂ ತಮಗೆ ಕನ್ನಡ ಬರದೆಂದೂ, ತೆಲುಗು ಮಾತ್ರ ಬರುತ್ತದೆಂದೂ ಹೇಳಿಕೆ ನೀಡಿದ್ದರು.

ಜನಗಣತಿ ಪ್ರಾರಂಭವಾಗುವುದಕ್ಕೆ ಮುಂಚೆ ಕೆಲವು ಆಂಧ್ರರು ಹಕ್ಕು ಸ್ಥಾಪಿಸಲು ಪ್ರಯತ್ನಿಸಿದ ಬಳ್ಳಾರಿಯಲ್ಲಿ ಒಟ್ಟು 47,436 ಜನರಲ್ಲಿ ಶೇಕಡಾ 36ರಷ್ಟು ಕನ್ನಡಿಗರು, ಶೇಕಡಾ 35ರಷ್ಟು ತೆಲುಗರು ಎಂದು ತಿಳಿಯಲಾಗಿತ್ತು. ಆಂಧ್ರಪರ ಜನಗಣತಿಕಾರರು ಎಲ್ಲಾ ಜನರನ್ನು ತೆಲುಗು ಬರುತ್ತದೆಯೇ? ತೆಲುಗು ಅರ್ಥವಾಗುತ್ತದೆಯೇ? ಎಂಬ ಪ್ರಶ್ನೆಗಳನ್ನು ಕೇಳಿ, ಹೌದು ಎಂದು ಉತ್ತರ ಬಂದರೆ, ತಕ್ಷಣ ಅಂತವರ ಮನೆಮಾತು ತೆಲುಗು ಎಂದೇ ದಾಖಲಿಸುತ್ತಿದ್ದರು. ಹೀಗಾಗಿ ತೆಲುಗನ್ನು ಮಾತನಾಡಲು ಮತ್ತು ಅರ್ಥಮಾಡಿಕೊಳ್ಳಲು ಬಲ್ಲ ಕನ್ನಡಿಗರ ಭಾಷೆಯೂ ತೆಲುಗು ಎಂದೇ ದಾಖಲಾಯಿತು. ಆಗ ಏಕೀಕರಣ ಸಮಿತಿಯು ಗ್ರಾಮ ಸರ್ವೇಕ್ಷಣೆಯನ್ನು ಮಾಡಿ ಖಚಿತವಾದ ಕನ್ನಡಿಗರ ಸಂಖ್ಯೆಯನ್ನು ಸಂಗ್ರಹಿಸಿದರು. 1931ರ ಜನಗಣತಿಯ ಪ್ರಕಾರ ಶೇಕಡಾ 18ರಷ್ಟು ಜನ ಕನ್ನಡಿಗರಿದ್ದಾರೆಂದು ದಾಖಲಾದ ಹಳ್ಳಿಗಳಲ್ಲೇ 1948ರಲ್ಲಿ ಶೇಕಡಾ 75ರಷ್ಟು ಜನ ಕನ್ನಡಿಗರಿದ್ದುದನ್ನು ಏಕೀಕರಣ ಸಮಿತಿಯು ದಾಖಲು ಮಾಡಿತು. ಈ ಸಂದರ್ಭದಲ್ಲಿ ನ್ಯಾಯಮೂರ್ತಿ ಮಿಶ್ರ ನೇತೃತ್ವದ ಸಮಿತಿಯೊಂದನ್ನು ಬಳ್ಳಾರಿ ತಾಲ್ಲೂಕಿನ ಭಾಷಾವಾರು ಪ್ರಾಂತದ ಸಮಸ್ಯೆಯನ್ನು ಬಗೆಹರಿಸಲು ಭಾರತ ಸರ್ಕಾರ ನೇಮಿಸಿತು. 1891ರಿಂದ 1951ರವರೆಗಿನ ಜನಗಣತಿಯ ಅಂಕಿ - ಅಂಶಗಳ ಪ್ರಕಾರ ಎಲ್ಲಾ ಸಂದರ್ಭಗಳಲ್ಲೂ ಬಳ್ಳಾರಿಯಲ್ಲಿ ಕನ್ನಡಿಗರು ಅರ್ಧಕ್ಕಿಂತಲೂ ಅಧಿಕವಾಗಿರುವುದನ್ನು ಮಿಶ್ರಾ ಸಮಿತಿ ಗುರುತಿಸಿತು. ಬಳ್ಳಾರಿಯಲ್ಲಿನ ಪ್ರಚಲಿತ ಭಾಷೆಯು ಕನ್ನಡ ಎಂದು ನಿರ್ವಿವಾದವಾಗಿ ದಾಖಲಾಯಿತು.

ಈ ಜನಗಣತಿಯ ಅಂಕಿ - ಅಂಶಗಳಲ್ಲಿ ಮಾತ್ರ ಕೆಲವು ವೈಪರೀತ್ಯಗಳು ಕಂಡುಬಂದಿವೆ ಎಂದು ಮಿಶ್ರಾ ತಿಳಿಸಿದರು. ಐತಿಹಾಸಿಕ ಅಂಶಗಳು, ಸಾಂಸ್ಕೃತಿಕ ಸಂಬಂಧಗಳು, ಆಡಳಿತಾನುಕೂಲ, ಆರ್ಥಿಕ ಪ್ರಗತಿ ಇತ್ಯಾದಿ ಎಲ್ಲ ಅಂಶಗಳನ್ನೂ ಗಮನದಲ್ಲಿಟ್ಟುಕೊಂಡು ಮಿಶ್ರಾ ಅವರು ಬಳ್ಳಾರಿ ತಾಲ್ಲೂಕು ಸಂಪೂರ್ಣವಾಗಿ ಕೆಲವು ತಾತ್ಕಾಲಿಕ ಮಧ್ಯಕಾಲದ ಏರ್ಪಾಡುಗಳಿಗೆ ಒಳಪಟ್ಟು ಮೈಸೂರಿಗೆ ಸೇರಬೇಕೆಂದು ವಿಶದವಾಗುತ್ತದೆ ಎಂದು ಅಂತಿಮ ತೀರ್ಪು ನೀಡಿ ತಾತ್ಕಾಲಿಕ ಮಧ್ಯಕಾಲೀನ ಏರ್ಪಾಡುಗಳಿಗೆ ಕೆಲವು ಸಲಹೆಗಳನ್ನು ನೀಡಿದರು. ಈ ದೃಷ್ಟಿಯಲ್ಲಿ 1951ರ ಬಳ್ಳಾರಿ ಜಿಲ್ಲೆಯ ಜನಗಣತಿಯ ಅಂಕಿ ಅಂಶಗಳು ಜಿಲ್ಲೆಯ ಇತಿಹಾಸದಲ್ಲಿ ಹೊಸ ಅಧ್ಯಾಯವೊಂದನ್ನು ತೆರೆದಂತಾಯಿತು. 1961ರಲ್ಲಿನ ಜನಗಣತಿಯಲ್ಲಿ ದಾಖಲಾಗಿರುವ ಹಾಗೆ 6,75,676 ಜನ ಕನ್ನಡಿಗರಿಗೆ 93,456 ಜನ ತೆಲುಗು ಭಾಷಿಕರು ಕಂಡುಬರುತ್ತಿರುವುದಕ್ಕೆ ಕಾರಣ ಬಳ್ಳಾರಿಯ ಭಾಷಾವಾರು ಪ್ರಾಂತ ವಿಂಗಡನೆಯಿಂದಾಗಿ ಆಲೂರು, ಆದವಾನಿ ಮತ್ತು ರಾಯದುರ್ಗಗಳು ನೆರೆ ರಾಜ್ಯವಾದ ಆಂಧ್ರಕ್ಕೆ ಹಂಚಿಹೋದದ್ದು. ತೆಲುಗು ಮಾತನಾಡುತ್ತಿದ್ದ ಭಾಷಿಕರು ಆಂಧ್ರ ರಾಜ್ಯದಲ್ಲಿ ಸೇರಿ ಹೋಗಿದ್ದು. 1971ರ ಜನಗಣತಿಯಲ್ಲಿ ಒಟ್ಟು ಜನಸಂಖ್ಯೆಯ 11,22,686ರಲ್ಲಿ 73.36% ಕನ್ನಡಿಗರಿಗೆ 10 % ತೆಲುಗು ಭಾಷಿಕರು ಮಿಕ್ಕವರು ಉಳಿದ ಭಾರತೀಯ ಭಾಷೆಗಳನ್ನಾಡುವವರು. 1971 - 1981 - 1991ರ ಜನಗಣತಿಯಲ್ಲಿ ಕ್ರಮವಾಗಿ 73.36 % ಕನ್ನಡಿಗರಿಗೆ 10 % ತೆಲುಗರು 71.7 % ಕನ್ನಡಿಗರಿಗೆ 10.3 % & 73.2 % ಕನ್ನಡಿಗರಿಗೆ 10.1 % ತೆಲುಗು ಭಾಷಿಕರು ಕಂಡುಬರುತ್ತಿದ್ದಾರೆ. ಒಟ್ಟು ಜನಸಂಖ್ಯೆಯ ಬೆಳವಣಿಗೆಯು ಶೇಕಡಾ ಹೆಚ್ಚಿದಷ್ಟು ಶೇಕಡಾ ಭಾಷಿಕರು ಹೆಚ್ಚಾಗಿದ್ದಾರೆ. ಇಲ್ಲಿ ಅಂತಹ ಹೆಚ್ಚಿನ ವ್ಯತ್ಯಾಸಗಳೇನೂ ಕಂಡುಬರುವುದಿಲ್ಲ. 70 - 80ರ ದಶಕದಲ್ಲಿ ಮಾತ್ರ ತೆಲುಗರ ವಲಸೆ ಹೆಚ್ಚಾಗಿ ಕಂಡುಬಂದಿರುವುದು ಜನಗಣತಿಯ ಅಂಕಿ - ಅಂಶಗಳಿಂದ ತಿಳಿದುಬರುತ್ತದೆ. ಕಾರಣ, ಬಳ್ಳಾರಿ ಜಿಲ್ಲೆಯಲ್ಲುಂಟಾದ ಔದ್ಯಮೀಕರಣ ಪ್ರಕ್ರಿಯೆ, ತುಂಗಭದ್ರಾ ಜಲಾಶಯ ನಿರ್ಮಾಣ, ಗಣಿಗಳ್ಲಿನ ಕೂಲಿಗಾಗಿ, ವ್ಯಾಪಾರ ವಹಿವಾಟಿಗಾಗಿ, ಆಂಧ್ರದಲ್ಲುಂಟಾದ ಪ್ರಕೃತಿ ವಿಕೋಪಗಳಿಂದಾಗಿ ಅನೇಕ ತೆಲುಗರು ಇಲ್ಲಿಗೆ ವಲಸೆ ಬಂದು ನೆಲೆಸಿದ್ದಾರೆ. ಕೂಲಿಗಾಗಿ ಕೆಲವರು ವಲಸೆ ಬಂದರೆ, ಇನ್ನು ಕೆಲವರು ಇಲ್ಲಿನ ಕೃಷಿಗಾಗಿ ವಲಸೆ ಬಂದಿದ್ದಾರೆ. ಕೆಲವರು ವೈವಾಹಿಕ ಸಂಬಂಧಗಳಿಂದಾಗಿ ಬಂದು ನೆಲಸಿರುವವರಾಗಿದ್ದಾರೆ. ಇನ್ನು ಕೆಲವರು ಕರ್ನಾಟಕದಲ್ಲೇ ಹುಟ್ಟಿ ಬೆಳೆದು ತೆಲುಗನ್ನೆ ಮನೆಮಾತಾಗಿ ಹೊಂದಿರುವವರು. ಹಳ್ಳಿ ಪಟ್ಟಣಗಳಲ್ಲಿ ಹಂಚಿಹೋಗಿರುವ ತೆಲುಗರ ಸಂಖ್ಯೆ ಹೇಳಿಕೊಳ್ಳುವಷ್ಟು ವ್ಯತ್ಯಾಸಗಳೇನೂ ಕಂಡುಬರುವುದಿಲ್ಲ. 1991ರ ದಶಕದಲ್ಲಿ ಮಾತ್ರ ಔದ್ಯೋಗೀಕರಣ, ನಗರೀಕರಣ, ವ್ಯಾಪಾರ, ಶಿಕ್ಷಣ ಮುಂತಾದ ಕಾರಣಗಳಿಗಾಗಿ ಪಟ್ಟಣದಲ್ಲಿ ತೆಲುಗರು ಹೆಚ್ಚು ಕೇಂದ್ರೀಕೃತವಾಗುತ್ತಿರುವುದು ಕಂಡುಬರುತ್ತಿದೆ. ಕನ್ನಡಿಗರು ಹೆಚ್ಚಾಗಿ ಹಳ್ಳಿಯಲ್ಲೇ ಕೇಂದ್ರೀಕೃತವಾಗಿರುವುದು ಕಂಡುಬರುತ್ತಿದೆ. 1971 ರ ಜನಗಣತಿಯಲ್ಲಿ ಪುರುಷರು ಮತ್ತು ಮಹಿಳೆಯರು ಕನ್ನಡ ತೆಲುಗು ಭಾಷಿಕ ಪ್ರಮಾಣವನ್ನು ನೋಡಿದರೆ 50.6 % ಕನ್ನಡಿಗರಿಗೆ 51 % ತೆಲುಗರು ಪುರುಷರಲ್ಲಿ ಕಾಣುತ್ತಿದ್ದರೆ, 49.4 % ಕನ್ನಡಿಗರಿಗೆ 49% ಮಹಿಳೆಯರ ಪ್ರಮಾಣ ಕಾಣುತ್ತಿದೆ. ಹಾಗೆಯೆ 1981 ರ

ಜನಗಣತಿ ಅಂಕಿ - ಅಂಶಗಳಲ್ಲಿ 50.2 % ಕನ್ನಡಿಗ ಪುರುಷರಿಗೆ 50.8 % ತೆಲುಗರು 50.6 % ಮಹಿಳೆಯರಲ್ಲಿ 19.2 % ತೆಲುಗು ಭಾಷಿಕರಲ್ಲಿ ಕಾಣುತ್ತಿದ್ದಾರೆ. 1991ರ ಜನಗಣತಿಯ ಲಿಂಗಾಧಾರಿತ ಅಂಕಿ ಅಂಶಗಳು ದೊರೆತಿಲ್ಲ.

ಈ ಮೇಲಿನ ಅಂಕಿ - ಅಂಶಗಳೆಲ್ಲದರಿಂದ ತಿಳಿಯುವ ಕೆಲವು ಅಂಶಗಳೆಂದರೆ ಇಲ್ಲಿನ (ಬಳ್ಳಾರಿಯ) ದ್ವಿಭಾಷಿಕರಲ್ಲಿ ತೆಲುಗರು ಕನ್ನಡ ಭಾಷೆಯನ್ನು ಕಲಿತು ದ್ವಿಭಾಷಿಕರಾದ ಪ್ರಮಾಣವೇ ಅತಿ ಹೆಚ್ಚಿದೆ. ಇದಕ್ಕೆ ವಿರುದ್ಧವಾಗಿ ಕನ್ನಡ ಭಾಷಿಕರು ದ್ವಿಭಾಷಿಕರಾದ ಪ್ರಮಾಣ ಕಡಿಮೆ. ಇದರಿಂದ ಕನ್ನಡ ಭಾಷಿಕರು ತೆಲುಗನ್ನು ಕಲಿಯುವ ಅವಶ್ಯಕತೆಗಿಂತ ತೆಲುಗು ಭಾಷಿಕರು ಕನ್ನಡವನ್ನು ಕಲಿಯುವಂತೆ ಒತ್ತಾಯಿಸುವ ಸನ್ನಿವೇಶಗಳು ಹೆಚ್ಚು ಇವೆ ಎನ್ನಬಹುದು. ಈ ಎರಡು ದ್ವಿಭಾಷಿಕ ವರ್ಗಗಳಲ್ಲಿಯೂ ಗಂಡಸರಿಗೆ ಹೋಲಿಸಿದಲ್ಲಿ ಹೆಂಗಸರು ದ್ವಿಭಾಷಿಕರಾದ ಪ್ರಮಾಣ ಕಡಿಮೆ.

## ಎ. ದ್ವಿತೀಯ ಭಾಷೆಗಳಾಗಿ ಕನ್ನಡ - ತೆಲುಗು ಭಾಷೆಗಳನ್ನು ಬಳಸುತ್ತಿರುವವರು

ತಮ್ಮ ಮನೆಮಾತುಗಳು ಉರ್ದು, ತಮಿಳು, ಹಿಂದಿ ಮಲೆಯಾಳಂ, ಮರಾಠಿ, ಲಂಬಾಣಿ ಭಾಷೆಗಳನ್ನಾಡುವ ಭಾಷಿಕರು ಹಲವಾರು ಆವರಣಗಳಲ್ಲಿ ಕನ್ನಡ ಮತ್ತು ತೆಲುಗು ಭಾಷೆಗಳನ್ನು ದ್ವಿತೀಯ ಭಾಷೆಗಳಾಗಿ ಬಳಸುತ್ತಿರುವ ಸಂದರ್ಭಗಳು ಬಳ್ಳಾರಿ ಜಿಲ್ಲೆಯ ಅನೇಕ ಭಾಷಿಕ ಸಂದರ್ಭಗಳನ್ನು ಗಮನಿಸಿದರೆ ಕಂಡುಬರುತ್ತಿದೆ. ಮುಸಲ್ಮಾನರಲ್ಲಿರುವ ಪಿಂಜಾರ ಪಂಗಡದವರ ಮನೆಮಾತು ಕನ್ನಡ, ಅವರ ದ್ವಿತೀಯ ಭಾಷೆ ತೆಲುಗು. ಇವರಲ್ಲಿ ಕನ್ನಡ ತೆಲುಗುಗಳನ್ನು ಪರಸ್ಪರ ಅವಲಂಬಿಸುವ ಪ್ರಮಾಣ ಪುರುಷರಲ್ಲೂ ಮಹಿಳೆಯರಲ್ಲೂ ಸಮವಾಗಿ ಕಾಣುವಂತಿದೆ. ಜೊತೆಗೆ ಉರ್ದು ಮನೆಮಾತಾಗಿವುಳ್ಳ ಮುಸ್ಲಿಂರಲ್ಲೂ ಸಹ ಕನ್ನಡ - ತೆಲುಗನ್ನು ದ್ವಿತೀಯ ಭಾಷೆಗಳಾಗಿ ಬಳಸಲಾಗುತ್ತಿದ್ದು ಹೆಚ್ಚಿನ ಸಂದರ್ಭದಲ್ಲಿ ಪುರುಷರು ತೆಲುಗನ್ನು ಬಳಸುತ್ತಾರೆ. ಮಾರ್ವಾಡಿ ಹಿಂದಿ ಮಾತನಾಡುವ ಭಾಷಿಕರಲ್ಲಿ ಹೆಚ್ಚಿನವರು ವ್ಯಾಪಾರಸ್ಥರು. ಇವರ ವ್ಯಾಪಾರ - ವಹಿವಾಟಿನ ಭಾಷೆ ಬಹುಭಾಷೆಗಳಲ್ಲಾದರೂ, ಕನ್ನಡ ತೆಲುಗನ್ನು ಬಳಸುವವರಾಗಿದ್ದಾರೆ. ಇವರಲ್ಲಿ ಕನ್ನಡ ತೆಲುಗು ಪರಸ್ಪರ ಅವಲಂಬಿಸುವ ಪ್ರಮಾಣ ಮಹಿಳೆಯರಿಗಿಂತ ಪುರುಷರಲ್ಲೇ ಹೆಚ್ಚಾಗಿದೆ. ಆಕರ್ಷಣೆಯನ್ನೊಡ್ಡಿ ವ್ಯಾಪಾರ ಮಾಡುವ ಸಂದರ್ಭಗಳಲ್ಲಿ ಕೊಳ್ಳುವವರ ಭಾಷೆಗೆ ನುಡಿಪಲ್ಲಟವಾಗುವ ಸಂದರ್ಭಗಳು ಇವರಲ್ಲಿ ಹೆಚ್ಚುತ್ತಿರುವುದರಿಂದ ಕನ್ನಡ - ತೆಲುಗು ಭಾಷೆಗಳನ್ನು ಸರ್ವೇ ಸಾಮಾನ್ಯವಾಗಿ ಬಳಸುತ್ತಾರೆ. ಇವರಲ್ಲಿ ಆದರೆ ಮಹಿಳೆಯರಿಗೆ ಹೆಚ್ಚಿನ ಸಂಪರ್ಕ ಕನ್ನಡಿಗರೊಂದಿಗೆ ಇರುವುದಿಲ್ಲವಾದ್ದರಿಂದ ಕನ್ನಡ - ತೆಲುಗು ಕಲಿಯುವ ಅವಕಾಶವಿಲ್ಲ. ತಮಿಳು, ಮಲೆಯಾಳಂ, ಭಾಷಿಕರಲ್ಲಿ ಹೆಚ್ಚು ಜನ ವಲಸಿಗರಾಗಿದ್ದು, ತಮಿಳುನಾಡು, ಕೇರಳದಿಂದ ವಲಸೆ ಬಂದು ಇಲ್ಲೆ ನೆಲೆನಿಂತಿರುವ ಇವರು ಹೆಚ್ಚಿನ ಸಂದರ್ಭದಲ್ಲಿ ತಮ್ಮ ಮನೆಮಾತುಗಳನ್ನು ಎಲ್ಲಾ ಮಟ್ಟದ ಸಂವಹನದಲ್ಲಿ ಬಳಸುವವರಾಗಿದ್ದಾರೆ. ಇವರಲ್ಲಿ ಶಿಕ್ಷಣದಿಂದ ದ್ವಿಭಾಷಿಕರಾದವರಲ್ಲಿ ಕನ್ನಡದ ಬಳಕೆಯು ಹೆಚ್ಚು. ಇವರಲ್ಲಿ ಕನ್ನಡ ತೆಲುಗನ್ನು ಪರಸ್ಪರ ಅವಲಂಬಿಸುವವರಲ್ಲಿ

ಮಹಿಳೆಯರಿಗಿಂತ ಪುರುಷರಲ್ಲೇ ಹೆಚ್ಚಿದೆ. ಮತ್ತು ಇವರು ದ್ವಿತೀಯ ಭಾಷೆಯಾಗಿ ಕನ್ನಡವನ್ನು ಬಳಸುವ ಸಾಧ್ಯತೆಗಳು ಹೆಚ್ಚು ಕಂಡುಬರುತ್ತಿದೆ. ಮರಾಠಿ ಭಾಷಿಕರು ಮನೆ ಆವರಣ, ಕೆಲವು ವ್ಯಾಪಾರದಂಗಡಿಗಳಲ್ಲಿ, ಸಂಬಂಧಿಕರ ಬಳಿ ತಮ್ಮ ಮನೆ ಮಾತನ್ನು ಉಳಿಸಿಕೊಂಡು, ಮಿಕ್ಕಂತೆ ಕನ್ನಡ - ತೆಲುಗು ಭಾಷೆಗಳನ್ನು ವ್ಯವಹಾರಕ್ಕೆ ಬಳಸುವವರಾಗಿದ್ದಾರೆ. ಲಂಬಾಣಿ ಭಾಷೆಯಲ್ಲಿ ಮಾತನಾಡುವವರು ಹೆಚ್ಚಾಗಿ ಮನೆ ಆವರಣದಲ್ಲಿ ಮಾತ್ರ ತಮ್ಮ ಭಾಷೆಯನ್ನು ಉಳಿಸಿಕೊಂಡು ವ್ಯವಹಾರಿಕವಾಗಿ ತೆಲುಗು - ಕನ್ನಡ ಭಾಷೆಯನ್ನು ಸಂವಹನ ಸಂದರ್ಭಗಳಿಗೆ ಬಳಸುವವರಾಗಿದ್ದಾರೆ. ಕ್ಷೇತ್ರಕಾರ್ಯದಲ್ಲಿ ದೊರೆತ ಮಾಹಿತಿಯಲ್ಲಿ ಕನ್ನಡ - ತೆಲುಗು ಭಾಷೆಗಳನ್ನು ಎರಡನೆಯ ಭಾಷೆಯಾಗಿ ಬಳಸುವವರ ಬಗೆಗಿನ ವಿವರಗಳು ಈ ಕೆಳಕಂಡಂತಿವೆ.

| **ಭಾಷಿಕರು** | | **ಪ್ರಥಮ ಭಾಷೆ** | **ದ್ವಿತೀಯ ಭಾಷೆ** | | ಎರಡೂ ಭಾಷೆಗಳನ್ನು ದ್ವಿತೀಯ ಭಾಷೆಯೆಂದು ಹೇಳಿಕೊಳ್ಳುತ್ತಿರುವವರು |
|---|---|---|---|---|---|
| | | | **ಕನ್ನಡ** | **ತೆಲುಗು** | **ಕನ್ನಡ / ತೆಲುಗು** |
| ಮುಸ್ಲಿಂ | 95 | ಉರ್ದು | 66 | 07 | 22 |
| ಲಂಬಾಣಿ | 16 | ಲಂಬಾಣಿ | 09 | 04 | 03 |
| ಮರಾಠಿ | 22 | ಮರಾಠಿ | 11 | 04 | 08 |
| ತಮಿಳು | 27 | ತಮಿಳು | 14 | 16 | 14 |
| ಜೈನ | 18 | ಮಾರ್ವಾಡಿ ಹಿಂದಿ | 18 | - | 18 |
| ಮಲೆಯಾಳಂ | 08 | ಮಲೆಯಾಳಂ | 06 | - | 02 |
| ಒಟ್ಟು | **186** | | | | |

## ಲಂಬಾಣಿ

ಲಂಬಾಡಿ, ಬಂಜಾರಾ, ಬ್ರಂಜಾರಿ, ಸುಕಾಲಿ, ಸುಗಾಲಿ ಅಥವಾ ಬಂಜಾರ ಎಂಬ ಹೆಸರುಗಳಿಂದ ಇವರನ್ನು ಕರೆಯುತ್ತಾರೆ. ಇವರು ರಾಜ್ಯದ ಹಲವಾರು ಕಡೆಗಳಲ್ಲಿ ನೆಲೆಸಿದ್ದಾರೆ. ಇವರು ಮೂಲಭೂತವಾಗಿ ಒಂದು ಅಲೆಮಾರಿ ಜನಾಂಗ. ಅವರಲ್ಲಿ ಹಲವಾರು ಬಗೆಯ ಉದ್ಯೋಗಗಳಲ್ಲಿ ತೊಡಗಿದ್ದಾರೆ. ಆದರೂ ಕೂಲಿ, ಕೃಷಿ ಕೂಲಿ ಮಾಡುವುದೇ ಹೆಚ್ಚು. ಲಂಬಾಣಿ ಎಂಬ ಆಡುಭಾಷೆಯನ್ನು ಮಾತನಾಡುತ್ತಾರೆ. ಕನ್ನಡ ಮತ್ತು ತೆಲುಗು ಭಾಷೆಯನ್ನು ದ್ವಿತೀಯ ಭಾಷೆಗಳಾಗಿ ಮಾತನಾಡುತ್ತಾರೆ.

ಬಳ್ಳಾರಿ ಜಿಲ್ಲೆಯಲ್ಲಿ ಅಲ್ಲಲ್ಲಿ ಹರಡಿಕೊಂಡಿರುವ ಈ ಸಮುದಾಯವು ಕೆಲವೆಡೆಗಳಲ್ಲಿ ಲಂಬಾಣಿ ತಾಂಡಗಳನ್ನು ಮಾಡಿಕೊಂಡು ವಾಸಿಸುತ್ತಿದ್ದಾರೆ. ಹೊಸಪೇಟೆ, ಕಮ್ಲಿರಾಂಪುರ, ಹಂಪಿ, ಸಂಡೂರು, ಮುಂತಾದ ಕಡೆಗಳಲ್ಲಿ ವಾಸಿಸುತ್ತಿರುವ ಇವರು ಜೀವನೋಪಾಯಕ್ಕಾಗಿ ಅನೇಕ ಸಣ್ಣಪುಟ್ಟ ಕರಕುಶಲ ಕಸಬುಗಳಲ್ಲಿ ನಿರತರಾಗಿದ್ದಾರಲ್ಲದೆ, ಕೂಲಿಯೇ ಹೆಚ್ಚಿನ ಸಂದರ್ಭದಲ್ಲಿ ಇವರ ಕುಟುಂಬದ ಆದಾಯದ ಮೂಲವಾಗಿದೆ. ಈ ಜಿಲ್ಲೆಯಲ್ಲಿರುವ ಲಂಬಾಣಿಗಳು ಮನೆ ಆವರಣದಲ್ಲಿ ಲಂಬಾಣಿ ಭಾಷೆಯಲ್ಲಿ ಮೊದಲ ತಲೆಮಾರಿನವರಲ್ಲಿ ಬಳಸುತ್ತಿದ್ದರೆ, ಈಗಿನ ತಲೆಮಾರುಗಳಲ್ಲಿ ಮಕ್ಕಳನ್ನು ಕನ್ನಡ ಮತ್ತು ತೆಲುಗು ಮಾಧ್ಯಮದ ಶಾಲೆಗಳಿಗೆ ಕಳುಹಿಸುತ್ತಿದ್ದಾರೆ. ಈಗಿನ ತಲೆಮಾರುಗಳಲ್ಲಿ ಇವರಲ್ಲಿ ಕನ್ನಡವನ್ನು ಬಳಸುವ ಆವರಣಗಳು ಹೆಚ್ಚಾಗಿ, ಲಂಬಾಣಿ ಕೇವಲ ಮನೆ ಆವರಣದಲ್ಲಿ ಬಳಕೆಯಾಗುತ್ತಿದೆ.

ಇವರಲ್ಲಿ ಮಹಿಳೆಯರು ಹೆಚ್ಚಿನ ಸಂದರ್ಭದಲ್ಲಿ ಕನ್ನಡಕ್ಕಿಂತ ತೆಲುಗು ಭಾಷೆಗೆ ನುಡಿಪಲ್ಲಟವಾಗುತ್ತಾರೆ. ಪುರುಷರು ಕನ್ನಡದ ಸಾಮಾಜಿಕ ಸಂದರ್ಭಗಳಿಗೆ ತೆರೆದುಕೊಂಡಿರುವವರು ಕನ್ನಡವನ್ನು ಹೆಚ್ಚಿನ ಸಾಮಾಜಿಕ ಸಂದರ್ಭಗಳಿಗೆ ಬಳಸುತ್ತಾರೆ. ಇವರಲ್ಲಿ ವ್ಯಾಪಾರ ಮಾಡುವ ಹೆಂಗಸರಲ್ಲಿ ದ್ವಿಭಾಷಿಕರಾಗುವ ಅವಶ್ಯಕತೆಯು ಹೆಚ್ಚಾಗಿದ್ದು, ತಾಂಡದಲ್ಲಿ ನೆಲೆಸಿರುವ ಅವಿದ್ಯಾವಂತ, ಸಾಮಾಜಿಕ ಸಂಪರ್ಕ ಇಲ್ಲದ ಮಹಿಳೆಯರಲ್ಲಿ ಲಂಬಾಣಿ ಭಾಷೆಯೇ ಅನೇಕ ಆವರಣಗಳಲ್ಲಿ ಬಳಕೆಯಾಗುತ್ತಿದೆ. ಈ ಸಮುದಾಯದಲ್ಲಿ ಆರ್ಥಿಕವಾಗಿ, ಸಾಮಾಜಿಕವಾಗಿ ಹಿಂದುಳಿದಿರುವವರಲ್ಲಿ ಲಂಬಾಣಿ ಭಾಷೆ ಹೆಚ್ಚಾಗಿ ಬಳಕೆಯಾಗುತ್ತಿದೆ. ಇತ್ತೀಚಿನ ಬೆಳವಣಿಗೆಯಲ್ಲಿ ಅನೇಕರು ಶಿಕ್ಷಣವನ್ನು ಪಡೆಯುವುದರ ಮೂಲಕ ಸರ್ಕಾರಿ ನೌಕರಿಯಲ್ಲಿದ್ದಾರೆ. ಇವರಲ್ಲಿ ಲಂಬಾಣಿ ಭಾಷೆ ತೀರ ಮಿತವಾಗಿ ಬಳಕೆಯಾಗುವಂತಿದೆ. ಇವರೆಲ್ಲ ಕನ್ನಡಕ್ಕೆ ಪಲ್ಲಟಗೊಂಡಿರುವಂತೆ ಕಾಣುತ್ತಿದೆ.

**ಮರಾಠಿ**

ಇವರು ಕ್ಷತ್ರಿಯರೆಂದು ಹೇಳಿಕೊಳ್ಳುತ್ತಾರೆ. ಅಲ್ಲದೆ ಇವರ ಮನೆತನದ ಹೆಸರುಗಳಲ್ಲಿ ಹಲವು ಹೆಸರುಗಳು ರಜಪುತ ವಂಶದ ಹೆಸರುಗಳಿಂದ ಬಂದಿವೆ. ಈ ಜನರು ಮಹಾರಾಷ್ಟ್ರದಲ್ಲಿ ಪ್ರಬಲರಾಗಿದ್ದರು. ಮೈಸೂರು ಭಾಗದ ಕೆಲವು ಜಿಲ್ಲೆಗಳಲ್ಲಿಯೂ ಮತ್ತು ಹೆಚ್ಚಿನವರು ಬೆಳಗಾವಿ ಮತ್ತು ಕಲಬುರ್ಗಿ ಭಾಗಗಳಲ್ಲಿಯೂ ಕಂಡುಬರುತ್ತಾರೆ. ಇವರ ಮನೆಮಾತು ಮರಾಠಿ, ಇವರಲ್ಲಿ ಬಹುಪಾಲು ಮಂದಿ ಕೃಷಿ ಮಾಡಿಕೊಂಡಿದ್ದಾರೆ. ಹಲವರು ವ್ಯಾಪಾರದಲ್ಲಿ ತೊಡಗಿದ್ದಾರೆ. ಇವರು ದ್ವಿತೀಯ ಭಾಷೆಗಳಾಗಿ ಕನ್ನಡ - ತೆಲುಗು ಭಾಷೆಯನ್ನು ಮಾತನಾಡುತ್ತಾರೆ.

ಬಳ್ಳಾರಿ ಜಿಲ್ಲೆಯಾದ್ಯಂತ ಮರಾಠಿಯನ್ನು ಮನೆಮಾತಾಗಿ ಮಾತನಾಡುವ ಹಲವು ಕುಟುಂಬಗಳನ್ನು ಅಲ್ಲಲ್ಲಿ ಕಾಣಬಹುದಾಗಿದೆ. ಇವರು ಜಿಲ್ಲೆ ಮತ್ತು ತಾಲ್ಲೂಕು ಪ್ರದೇಶದಲ್ಲೆ ಹೆಚ್ಚಾಗಿ ನೆಲೆಸಿದ್ದಾರೆ. ಇವರುಗಳು ವ್ಯಾಪಾರ, ಸಣ್ಣಪುಟ್ಟ ಸ್ವಉದ್ಯೋಗಗಳಲ್ಲಿ ತೊಡಗಿದ್ದಾರೆ. ಮನೆ ಆವರಣ ಮತ್ತು ಒಳಗುಂಪುಗಳಲ್ಲಿ ಮಾತ್ರ ಮರಾಠಿ ಭಾಷೆಯನ್ನು ಬಳಸುತ್ತಿದ್ದು ಕನ್ನಡದ ಸಾಮಾಜಿಕ ಸಂದರ್ಭಗಳಿಗೆ ಹೆಚ್ಚಾಗಿ ಕನ್ನಡವನ್ನು ಬಳಸುವಂಥವರಾಗಿದ್ದಾರೆ.

ಸಾಕ್ಷರತೆಯ ಕೌಶಲಗಳನ್ನು ಕನ್ನಡ ಮತ್ತು ಇಂಗ್ಲಿಶ್ ಭಾಷೆಯಲ್ಲಿ ಈಗಿನ ತಲೆಮಾರುಗಳಲ್ಲಿ ಪಡೆದುಕೊಳ್ಳಲಾಗುತ್ತದೆ. ಹಳೆ ತಲೆಮಾರುಗಳಲ್ಲಿನ ಜನರು ಕನ್ನಡದ ಜೊತೆಗೆ ತೆಲುಗು ಭಾಷೆಯನ್ನೂ ಸಹ ದ್ವಿತೀಯ ಭಾಷೆಗಳಾಗಿ ಬಳಸುತ್ತಿರುವ ಸನ್ನಿವೇಶಗಳು ಹಲವು ತೆಲುಗಿನ ಸಾಮಾಜಿಕ ಸಂದರ್ಭಗಳಲ್ಲಿ ಕಾಣಬಹುದಾಗಿದೆ. ಒಟ್ಟಾರೆಯಾಗಿ ಇವರಲ್ಲಿ ಕನ್ನಡವನ್ನು ಹೆಚ್ಚಿನ ಸಂದರ್ಭಗಳಲ್ಲಿ ಬಳಸುವ ಅಂಶಗಳೇ ಕಂಡುಬರುತ್ತಿದೆ.

**ಜೈನರು**

ರಾಜ್ಯದಲ್ಲಿರುವ ಒಂದು ಚಿಕ್ಕ ಅಲ್ಪಸಂಖ್ಯಾತ ಸಮುದಾಯ. ಜೈನರ ಎರಡು ಪಂಗಡಗಳಾದ ದಿಗಂಬರ ಮತ್ತು ಶ್ವೇತಾಂಬರರು ಕರ್ನಾಟಕದಲ್ಲಿದ್ದಾರೆ. ಒಂದು ಉತ್ತರ ಭಾರತದಿಂದ ವಲಸೆ ಬಂದ ವ್ಯಾಪಾರಿ ಸಮುದಾಯದ ಮಾರವಾಡಿ ಅಥವಾ ಮೇವಾಡಿ. ಇವರ ಮನೆಮಾತು ಮಾರ್‌ವಾಡಿ ಹಿಂದಿ, ಇನ್ನೊಂದು ಕನ್ನಡ ಮಾತನಾಡುವ ಸ್ಥಳೀಯ ಗುಂಪು, ಇವರಲ್ಲಿ ಮುಖ್ಯವಾಗಿ ಬೆಳಗಾವಿ ಧಾರವಾಡಗಳಲ್ಲಿ ಕಂಡುಬರುತ್ತಾರೆ. ಕನ್ನಡ ಮಾತನಾಡುವವರ ಕಸುಬು ಕೃಷಿ. ಜೈನರು ಕರ್ನಾಟಕದ ಎಲ್ಲಾ ಭಾಗಗಳಲ್ಲಿ ಹಂಚಿಹೋಗಿದ್ದಾರೆ. ಸಾಂಪ್ರದಾಯಿಕವಾಗಿ ಇವರು ವ್ಯಾಪಾರಿಗಳು. ಇವರ ಈಗಿನ ವೃತ್ತಿಗಳೆಂದರೆ ಆಭರಣ ಅಂಗಡಿಗಳು. ಬಳೆ, ತಾಮ್ರ ಮತ್ತು ಹಿತ್ತಾಳೆ ಪಾತ್ರೆಗಳನ್ನು ಮಾರುವುದು. ಕೆಲವರಷ್ಟೆ ಸರ್ಕಾರಿ ಮತ್ತು ಖಾಸಗಿ ಉದ್ಯೋಗದಲ್ಲಿದ್ದಾರೆ. ಬಳ್ಳಾರಿ ಜಿಲ್ಲೆಯಲ್ಲಿನ ಮಾರ್‌ವಾಡಿಗಳು ಹೆಚ್ಚಾಗಿ ಹೊಸಪೇಟೆ ಮತ್ತು ಬಳ್ಳಾರಿಯಂತಹ ನಗರ ಪ್ರದೇಶಗಳಲ್ಲೇ ವಾಸವಾಗಿದ್ದು, ವ್ಯಾಪಾರ ಹೆಚ್ಚಿನ ಸಂದರ್ಭದಲ್ಲಿ ಇವರ ಉದ್ಯೋಗವಾಗಿದೆ. ಅವರಲ್ಲಿ ಅನೇಕರು ಚಿನ್ನದ ಅಂಗಡಿ ವ್ಯಾಪಾರಿಗಳು. ಪಾತ್ರೆ ಪರಡಿ ವ್ಯಾಪಾರಿಗಳು ಸ್ಟೇಷನರಿ ಅಂಗಡಿ ಮಾಲೀಕರು ಆಗಿದ್ದಾರೆ. ಈ ಸಮುದಾಯದಲ್ಲಿ ಪುರುಷರು ಹೆಚ್ಚು ದ್ವಿಭಾಷಿಕರಾಗಿರುವ ಸಂದರ್ಭಗಳು ಕಾಣುತ್ತಿವೆ. ಮಹಿಳೆಯರಲ್ಲಿ ದ್ವಿಭಾಷಿಕರಾಗುವ ಪ್ರಮಾಣ ಕಡಿಮೆ. ಕಾರಣ ಮಹಿಳೆಯರು ಮಾರ್ವಡಿ ಭಾಷೆಯನ್ನು ಹೆಚ್ಚಿನ ಸಂದರ್ಭದಲ್ಲಿ ಉಳಿಸಿಕೊಂಡಿದ್ದು, ಕೇವಲ ಗ್ರಹಿಕೆಯ ನೆಲೆಗಳಲ್ಲಿ ಕನ್ನಡ - ತೆಲುಗು ಭಾಷೆಗಳನ್ನು ಪಡೆದಿರುತ್ತಾರೆ. ಮೌಖಿಕ ನೆಲೆಗಳಲ್ಲಿ ಬಳಸುವ ಸಂದರ್ಭಗಳು ಇವರಲ್ಲಿ ಕಡಿಮೆ. ಈಗಿನ ತಲೆಮಾರಿನವರಲ್ಲಿ ಸಾಕ್ಷರತೆಯ ಕೌಶಲಗಳನ್ನು ಹೆಚ್ಚಾಗಿ ಇಂಗ್ಲಿಶ್ ಭಾಷೆಯಲ್ಲಿಯೂ ಅಲ್ಪ ಪ್ರಮಾಣದಲ್ಲಿ ಕನ್ನಡದಲ್ಲಿಯೂ ಪಡೆಯುತ್ತಿದ್ದಾರೆ. ವ್ಯಾಪಾರದ ಸಂದರ್ಭದಲ್ಲಿ ಹೆಚ್ಚಾಗಿ ಇವರು ಕನ್ನಡವನ್ನು ಬಳಸುತ್ತಿದ್ದರೂ ಅನ್ಯ ಭಾಷಿಕರೊಡನೆ ಅವರವರ ಭಾಷೆಯಲ್ಲೆ ವ್ಯವಹರಿಸುವುದು ಕಂಡುಬರುತ್ತಿದೆ. ಪುರುಷರಲ್ಲಿ ಹೆಚ್ಚಾಗಿ ನುಡಿಪಲ್ಲಟವಾಗುವುದನ್ನು ಕಾಣಬಹುದಾಗಿದೆ. ಇವರೆಲ್ಲಾ ಹೆಚ್ಚಾಗಿ ಒಂದೇ ಕಡೆಯಲ್ಲಿ ವಾಸಿಸುತ್ತಿರುವುದರಿಂದಲೂ, ಅವಿಭಕ್ತ ಕುಟುಂಬಗಳು ಹೆಚ್ಚಾಗಿ ಇರುವುದರಿಂದಲೂ ತಮ್ಮ ಸ್ವಭಾಷೆಗಳನ್ನು ಉಳಿಸಿಕೊಂಡು ಮನೆ ಆವರಣ, ಸಂಬಂಧಿಕರು, ಸ್ನೇಹಿತರೊಂದಿಗೆ ಬಳಸುತ್ತಾರೆ. ಕನ್ನಡ, ತೆಲುಗು, ಉರ್ದು ಭಾಷೆಗಳನ್ನು ವ್ಯಾಪಾರದ ಸಂದರ್ಭಗಳಲ್ಲಿ ಬಳಸುವಂಥವರಾಗಿದ್ದಾರೆ.

## ಮುಸ್ಲಿಂ

ರಾಜ್ಯದಲ್ಲಿ ಹಿಂದುಗಳ ನಂತರ ಮುಸ್ಲಿಮರು ಅತ್ಯಧಿಕ ದೊಡ್ಡ ಸಮುದಾಯದವರಾಗಿದ್ದಾರೆ. ಮಲೆಯಾಳಂ ಗುಂಪಿಗೆ ಸೇರಿದ ಆಡುಭಾಷೆಯನ್ನು ಮಾತನಾಡುವ ಮಾಪಿಳ್ಳೆಗಳು, ಕೊಂಕಣಿ ಮಾತನಾಡುವ ನವಾಯತರು ಮತ್ತು ತಮಿಳು ಮಾತನಾಡುವ ಬಹು ಅಲ್ಪಸಂಖ್ಯಾತರಲ್ಲಿರುವ ಲಬ್ಬೆ ಜನರನ್ನು ಬಿಟ್ಟರೆ, ಉಳಿದ ಬಹುಸಂಖ್ಯೆಯ ಜನರು ಉರ್ದು ಮಾತನಾಡುತ್ತಾರೆ. ಇವರು ವ್ಯಾಪಾರವೊಂದರಲ್ಲೇ ಅಲ್ಲ, ಕೃಷಿ, ಕೈಗಾರಿಕೆ, ಕಸಾಯಿಗಳನ್ನು ಒಳಗೊಂಡಂತೆ ವಿವಿಧ ಉದ್ಯೋಗಗಳಲ್ಲಿ ತೊಡಗಿದ್ದಾರೆ. ಸರ್ಕಾರಿ ಮತ್ತು ಖಾಸಗಿ ವಲಯದಲ್ಲೂ ಅನೇಕರು ಉದ್ಯೋಗ ಮಾಡುತ್ತಾರೆ. ಬಳ್ಳಾರಿ ಪರಿಸರದಲ್ಲಿ ಕನ್ನಡವನ್ನು ಬಳಸುವ ಬಹುಸಂಖ್ಯಾತ ಭಾಷಿಕರ ನಂತರ ಉರ್ದು ಬಳಸುವ ಭಾಷಿಕರಿರುವುದನ್ನು ಜನಗಣತಿಯ ಮಾಹಿತಿಯಿಂದ ತಿಳಿಯಲಾಗಿದೆ. ಹಾಗೆಯೇ ಕ್ಷೇತ್ರಕಾರ್ಯದ ಸಂದರ್ಭದಲ್ಲೂ ಉರ್ದು ಭಾಷಿಕರು ಅಧಿಕವಾಗಿರುವುದನ್ನು ಗಮನಿಸಲಾಗಿದೆ. ಇವರಲ್ಲಿ ಉರ್ದು ಭಾಷೆಯನ್ನು ಕೆಲವೇ ಕೆಲವು ಆವರಣಗಳಲ್ಲಿ ಮಾತ್ರ ಉಳಿಸಿಕೊಂಡು ಮಿಕ್ಕಂತೆ ಹೆಚ್ಚಿನ ಸಂವಹನ ಸಂದರ್ಭಕ್ಕೆ ಕನ್ನಡ ಭಾಷೆಯನ್ನು ಬಳಸುತ್ತಾರೆ. ಬಳ್ಳಾರಿ, ತೋರಣಗಲ್ಲು, ಸಿರುಗುಪ್ಪಗಳಲ್ಲಿ ನೆಲೆಸಿರುವ ಹಲವು ಮುಸ್ಲಿಮರಿಗೆ ಕನ್ನಡಕ್ಕಿಂತ ತೆಲುಗು ದ್ವಿತೀಯ ಭಾಷೆಯಾಗಿದೆ. ಅನೇಕರು ಆಂಧ್ರದ ಇತರೆಡೆಗಳಿಂದ ಬಂದು ನೆಲೆಸಿರುವವರು ಇದ್ದಾರೆ. ಇವರ ಮನೆಮಾತುಗಳು ತೆಲುಗು ಭಾಷೆಯೇ ಆಗಿದ್ದು ಸಾಕ್ಷರತೆಯ ಕೌಶಲಗಳನ್ನು ತೆಲುಗಿನಲ್ಲೇ ಪಡೆಯುತ್ತಿರುವುದು ಕೆಲವೆಡೆಗಳಲ್ಲಿ ಕಾಣಲಾಗಿದೆ. ಮಿಕ್ಕಂತೆ ಉರ್ದು ಮನೆಮಾತಾಗಿರುವ ಹಲವು ಭಾಷಿಕರು ಕನ್ನಡ - ತೆಲುಗು ಎರಡೂ ಭಾಷೆಗಳನ್ನು ದ್ವಿತೀಯ ಭಾಷೆಗಳನ್ನಾಗಿ ಬಳಸುತ್ತಿದ್ದಾರೆ. ಇವರಲ್ಲಿ ಪಿಂಜಾರ ಎನ್ನುವ ಪಂಗಡದವರಿಗೆ ಕನ್ನಡವೇ ಮನೆಮಾತಾಗಿದೆ. ಇವರು ತೆಲುಗನ್ನು ದ್ವಿತೀಯ ಭಾಷೆಯಾಗಿ ಬಳಸುತ್ತಾರೆ. ಮುಸ್ಲಿಮರಲ್ಲಿ ಹೆಚ್ಚಾಗಿ ವ್ಯಾಪಾರ, ಕಸಾಯಿ ಅಂಗಡಿಗಳು, ಹಣ್ಣಿನ ಅಂಗಡಿಗಳು, ವರ್ಕ್‌ಶಾಪ್‌ಗಳು, ಆಟೋ - ಕಾರ್ ಗ್ಯಾರೇಜ್‌ಗಳು ಇವೇ ಮುಂತಾದ ಉದ್ಯೋಗಗಳಲ್ಲಿ ನಿರತರಾಗಿರುವುದರಿಂದ ಒಳಗುಂಪುಗಳಲ್ಲಿ ಅವರ ಸ್ವಭಾಷೆಗಳನ್ನು ಬಳಸಿ ಇತರೆ ಆವರಣಗಳಲ್ಲಿ ಕನ್ನಡ ಮತ್ತು ತೆಲುಗು ಭಾಷೆಯನ್ನು ಬಳಸುತ್ತಾರೆ. ಇವರಲ್ಲಿ ನುಡಿಮಿಶ್ರಣ ಮತ್ತು ನುಡಿಜಿಗಿತವನ್ನು ಹೆಚ್ಚಾಗಿ ಕಾಣಬಹುದಾಗಿದೆ. ಉರ್ದು ಶಾಲೆಗಳಲ್ಲಿ ಓದುವವರ ಪ್ರಮಾಣ ಕಡಿಮೆ ಇದ್ದು ಅನೇಕರು ಇಂಗ್ಲಿಶ್ ಮತ್ತು ಕನ್ನಡ ಮಾಧ್ಯಮಗಳಲ್ಲಿ ಸಾಕ್ಷರತೆಯನ್ನು ಪಡೆಯುತ್ತಿದ್ದಾರೆ.

## ತಮಿಳರು

ತಮಿಳರು ಹೆಚ್ಚಿನ ಸಂಖ್ಯೆಯಲ್ಲಿ ತಮಿಳುನಾಡಿನ ಇತರೆಡೆಗಳಿಂದ ವಲಸೆ ಬಂದು ನೆಲೆಸಿದವರಾಗಿದ್ದಾರೆ. ಬಳ್ಳಾರಿ ಜಿಲ್ಲೆಯ ತುಂಗಭದ್ರ ಆಣೆಕಟ್ಟು ನಿರ್ಮಾಣ ಸಂದರ್ಭದಲ್ಲಿಯೇ ಹೆಚ್ಚಿನ ಸಂಖ್ಯೆಯಲ್ಲಿ ಬಂದು ನೆಲೆಸಿರುವ ಇವರು ಕಿರುವಲಸೆಯನ್ನು ಬಯಸದೆ ಅಲ್ಲಲ್ಲೆ ಕೇಂದ್ರೀಕೃತರಾಗಿದ್ದಾರೆ. ಇವರು ನೆಲೆಸಿರುವ ಪ್ರದೇಶಗಳಲ್ಲಿ ತಮ್ಮ

ಮನೆಮಾತುಗಳನ್ನು ಹೆಚ್ಚಾಗಿ ಉಳಿಸಿಕೊಂಡು ತೆಲುಗು ಮತ್ತು ಕನ್ನಡವನ್ನು ದ್ವಿತೀಯ ಭಾಷೆಯಾಗಿ ಬಳಸುತ್ತಾರೆ. ಹೊಸಪೇಟೆಯ ತುಂಗಭದ್ರಾ ಆಣೆಕಟ್ಟಿನ ಸುತ್ತ - ಮುತ್ತಲ ಪ್ರದೇಶದಲ್ಲಿ, ಹಂಪಿಯ ಕಡ್ಡಿರಾಂಪುರದ ಬಳಿಯ ಪ್ರದೇಶದಲ್ಲಿ ಹೊಸಪೇಟೆ, ಬಳ್ಳಾರಿಯ ಕೆಲವೆಡೆಗಳಲ್ಲಿ ನೆಲೆಸಿರುವ ತಮಿಳರು ಪಶುಪಾಲನೆ, ಕೃಷಿ, ಮುಂತಾದ ಉದ್ಯೋಗಗಳಲ್ಲಿ ನಿರತರಾಗಿದ್ದಾರೆ. ಅನೇಕರು ತುಂಗಭದ್ರಾ ಡ್ಯಾಂನಲ್ಲಿ ಕೆಲಸಗಳಲ್ಲಿ ಇದ್ದಾರೆ. ಇವರಲ್ಲಿ ಅನೇಕರ ಮಕ್ಕಳು ತಮಿಳು ಮಾಧ್ಯಮದಲ್ಲಿ ಶಿಕ್ಷಣವನ್ನು ಪಡೆಯುತ್ತಿದ್ದು ಇತ್ತೀಚೆಗೆ ಇಂಗ್ಲಿಶ್ ಮತ್ತು ಕನ್ನಡ ಮಾಧ್ಯಮಗಳಿಗೆ ಪಲ್ಲಟಗೊಳ್ಳುತ್ತಿದ್ದಾರೆ. ಇವರು ಕನ್ನಡಕ್ಕಿಂತ ಹೆಚ್ಚಾಗಿ ತೆಲುಗು ಭಾಷೆಯನ್ನು ಎರಡನೆಯ ಭಾಷೆಯಾಗಿ ಬಳಸುತ್ತಾರೆ. ಶಿಕ್ಷಕರಲ್ಲಿ ಕನ್ನಡವನ್ನು ಎರಡನೆಯ ಭಾಷೆಯಾಗಿ ಬಳಸುವುದನ್ನು ಹೆಚ್ಚಾಗಿ ಕಾಣುತ್ತೇವೆ. ಸ್ವ ಉದ್ಯೋಗಗಳಲ್ಲಿ ಇವರುಗಳು ತೊಡಗಿರುವುದರಿಂದ ಅನೇಕ ಆವರಣಗಳಲ್ಲಿ ತಮ್ಮ ಮನೆಮಾತುಗಳನ್ನು ಉಳಿಸಿಕೊಂಡಿದ್ದಾರೆ. ಮಹಿಳೆಯರಿಗಿಂತ ಪುರುಷರೇ ಬೇಗ ಕನ್ನಡಕ್ಕೆ ಪಲ್ಲಟವಾಗಿರುವುದು ಇವರಲ್ಲಿ ಕಾಣಲಾಗುತ್ತಿದೆ. ಮಹಿಳೆಯರು ಮಿಶ್ರಭಾಷೆಯನ್ನು ಬಳಸುವುದು ಇವರಲ್ಲಿ ಹೆಚ್ಚಾಗಿ ಕಾಣಲಾಗುತ್ತದೆ.

**ಮಲೆಯಾಳಂ**

ಮಲೆಯಾಳಂ ಭಾಷಿಕರು ಕೇರಳ ರಾಜ್ಯದ ಇತರೆಡೆಗಳಿಂದ ಬಂದು ನೆಲೆಸಿರುವುದು ಬಳ್ಳಾರಿಯ ನಗರ ಪ್ರದೇಶಗಳಲ್ಲಿ ಇವರ ಹೆಚ್ಚಿನ ವಲಸೆ ಶಿಕ್ಷಣಕ್ಕಾಗಿ ಬಂದಂತಿದೆ. ಮಿಕ್ಕಂತೆ ಇವರು ಆಸ್ಪತ್ರೆ, ನರ್ಸಿಂಗ್ ಹೋಂಗಳಲ್ಲಿ ಉದ್ಯೋಗಗಳಲ್ಲಿರುವುದನ್ನು ಕಾಣಬಹುದಾಗಿದೆ. ಇವರು ಶಿಕ್ಷಣದ ಸಂದರ್ಭಗಳಿಗೆ ಬಳಗಾಗುವುದು ಇಂಗ್ಲಿಶ್ ಮಾಧ್ಯಮಗಳಲ್ಲಿ ಕಾಣಬಹುದಾಗಿದೆ. ಕನ್ನಡ ಮಾಧ್ಯಮಗಳಲ್ಲಿ ಓದುತ್ತಿರುವ ಸಂಖ್ಯೆ ಕಡಿಮೆ. ಇವರು ಉದ್ಯೋಗ ಮಾಡುವ ಕಡೆಗಳಲ್ಲಿ ಇವರು ನೆಲೆಸಿರುವ ಕಡೆಗಳಲ್ಲಿ ಅವರವರಲ್ಲೆ ಮನೆಮಾತುಗಳನ್ನು ಹೆಚ್ಚಿನ ಸಂದರ್ಭಗಳಲ್ಲಿ ಉಳಿಸಿಕೊಂಡು ಕನ್ನಡ - ಇಂಗ್ಲಿಶ್ ಭಾಷೆಗಳನ್ನು ದ್ವಿತೀಯ ಭಾಷೆಗಳನ್ನಾಗಿ ಬಳಸುತ್ತಾರೆ. ತೆಲುಗನ್ನು ದ್ವಿತೀಯ ಭಾಷೆಯಾಗಿ ಬಳಸುವ ಪ್ರಮಾಣ ಅತ್ಯಲ್ಪ.

## ಏ. ಬಳ್ಳಾರಿ ಕನ್ನಡದ ಮೇಲೆ ಬಂದಿರುವ ಲೇಖನಗಳ ಅವಲೋಕನ

ಬಳ್ಳಾರಿ ಪರಿಸರದಲ್ಲಿ ಬಳಕೆಯಾಗುತ್ತಿರುವ ಕನ್ನಡ ಭಾಷೆಯನ್ನು ಕುರಿತಂತೆ ಬಂದಿರುವ ಲೇಖನಗಳು ತುಂಬಾ ಕಡಿಮೆ. ಅವುಗಳಲ್ಲಿ ದೊರೆತ ಕೆಲವು ವಿದ್ವಾಂಸರ ವಿಚಾರಗಳನ್ನು ಮಾತ್ರ ಇಲ್ಲಿ ನೀಡಲಾಗಿದೆ. ಬಳ್ಳಾರಿಯಲ್ಲಿ ಬಳಕೆಯಾಗುತ್ತಿರುವ ಕನ್ನಡದ ಪ್ರಭೇದವನ್ನು ಕುರಿತಂತೆ ಮತ್ತು ದ್ವಿಭಾಷಾ ಸ್ಥಿತಿಯನ್ನು ಕುರಿತಂತೆ ಕೆಲವು ವಿದ್ವಾಂಸರ ವಿಚಾರಗಳಲ್ಲಿ ಸಂಗಮೇಶ ಸವದತ್ತಿಮಠ (1976:53-54) ಕನ್ನಡ ಭಾಷಾ ಪ್ರಭೇದಗಳ ನಿರ್ಮಾಣ ಕಾರಣಗಳನ್ನು ಕುರಿತಂತೆ ಲೇಖನವೊಂದರಲ್ಲಿ ಕನ್ನಡ ಭಾಷೆಯ ಮೇಲೆ ಅನೇಕ ಅನ್ಯ ಭಾಷೆಗಳು ಪ್ರಭಾವ ಬೀರಿವೆ. ಆದ್ದರಿಂದ

ಪ್ರಭೇದಗಳನ್ನುಂಟುಮಾಡುವಲ್ಲಿ ಅನ್ಯ ಭಾಷೆಗಳು ಯಾವ ಯಾವ ಕನ್ನಡ ಪ್ರದೇಶಗಳಲ್ಲಿ ಪ್ರಭಾವ ಬೀರಿವೆಯೆಂಬುದನ್ನು ಕರ್ನಾಟಕದ ಈಗಿನ ರಾಜಕೀಯ ಗಡಿಗಳನ್ನು ಆಧಾರವಾಗಿಟ್ಟುಕೊಂಡು ವಿವರಿಸಿದ್ದಾರೆ. ಇವುಗಳಲ್ಲಿ ಉರ್ದು, ಮರಾಠಿ, ತೆಲುಗು, ಮಲೆಯಾಳಂ ಮತ್ತು ತಮಿಳು ಪ್ರಭಾವಿತ ಪ್ರಭೇದಗಳನ್ನು ಗುರುತಿಸಿದ್ದಾರೆ. ಹೀಗೆ ಕನ್ನಡದ ಮೇಲೆ ಅನ್ಯ ಭಾಷಾ ಪ್ರಭಾವವನ್ನು ತೆಲುಗು ಬೀರಿಲ್ಲ. ಆದರೂ ತೆಲುಗು ಪ್ರಭಾವಿತ ಪ್ರಭೇದವನ್ನು ಗುರುತಿಸುವಷ್ಟು ಕನ್ನಡದಲ್ಲಿ ದೊರೆಯುತ್ತದೆ. ಬೀದರ, ಕಲಬುರ್ಗಿ, ರಾಯಚೂರು, ಬಳ್ಳಾರಿ, ಚಿತ್ರದುರ್ಗ, ತುಮಕೂರು ಮತ್ತು ಕೋಲಾರ ಜಿಲ್ಲೆಗಳ ಪೂರ್ವಭಾಗವೆಲ್ಲಾ ಆಂಧ್ರಪ್ರದೇಶಕ್ಕೆ ಹತ್ತಿಕೊಂಡಿರುವುದರಿಂದ ಇವೆಲ್ಲಾ ಪ್ರದೇಶಗಳಲ್ಲಿ ತೆಲುಗು ಭಾಷೆಯ ಪ್ರಭಾವ ಒಂದೇ ಮಟ್ಟದಲಾಗಿಲ್ಲದೆ ಆಯಾ ಜಿಲ್ಲಾ ಪ್ರಭೇದಗಳಿಗನುಗುಣವಾಗಿ, ಭೌಗೋಳಿಕ, ರಾಜಕೀಯ, ಸಾಮಾಜಿಕ, ಕಾರಣಗಳಿಂದಾಗಿ ಪ್ರಭಾವ ಹೆಚ್ಚು - ಕಡಿಮೆಯಾಗಿದೆ. ಬಳ್ಳಾರಿ ಜಿಲ್ಲೆಯ ಬಳ್ಳಾರಿ ತಾಲ್ಲೂಕು ಹಾಗೂ ಸಿರುಗುಪ್ಪ ತಾಲ್ಲೂಕು ಸಂಪೂರ್ಣವಾಗಿ ತೆಲುಗು ಪ್ರಭಾವಕ್ಕೊಳಪಟ್ಟಿದೆ. ಆಂಧ್ರದ ಜನತೆಯೊಡನೆ ಬಹುಕಾಲದಿಂದ ಇವರ ಸಂಪರ್ಕ ಇದ್ದುದರಿಂದ ಈ ಪ್ರದೇಶದಲ್ಲಿ ಸಾಕಷ್ಟು ಜನ ತೆಲುಗರು ನೆಲೆಸಿದ್ದಾರೆ. ಒಕ ರೂಪಾಯಿ, ಒಕಟಿ, ಚೇಯಿ, ಪೋ, ಚೂಡು, ಡಬ್ಬು, ದೊಂಗಲು, ಚಪ್ಪು, ಪಾಮು ಇಂತಹ ಬಹುಸಂಖ್ಯ ತೆಲುಗು ಪದಗಳು ಕನ್ನಡದಲ್ಲಿ ಸೇರಿವೆ. ರಾಯಚೂರು, ಬೀದರ ಹಾಗೂ ಕಲಬುರ್ಗಿ ಜಿಲ್ಲೆಯ ಪೂರ್ವ ಗಡಿಭಾಗದಲ್ಲಿ ತೆಲುಗು ಪ್ರಭಾವವಿದ್ದರೂ ಕೋಲಾರ, ಬೆಂಗಳೂರು ಜಿಲ್ಲೆಯ ಪ್ರದೇಶಗಳಿದ್ದಷ್ಟು ದಟ್ಟವಾಗಿಲ್ಲ. ಆದ್ದರಿಂದ ತೆಲುಗು ಪ್ರಭಾವಿತ ಕನ್ನಡ ಪ್ರಭೇದವನ್ನು :

1. ಹೆಚ್ಚು ದಟ್ಟ ಪ್ರಭಾವವುಳ್ಳ ಪಾವಗಡ, ಮಧುಗಿರಿ, ಕೋಲಾರ ಪ್ರದೇಶಗಳು
2. ಕಡಿಮೆ ಪ್ರಭಾವವುಳ್ಳ ಬೀದರ, ಕಲಬುರ್ಗಿ, ರಾಯಚೂರು ಪ್ರದೇಶಗಳು
3. ಮಧ್ಯಮ ಪ್ರಭಾವವುಳ್ಳ ಬಳ್ಳಾರಿ, ಚಿತ್ರದುರ್ಗ ಪ್ರದೇಶಗಳು ಎಂಬ ಮೂರು ಮಟ್ಟಗಳಲ್ಲಿ ಗುರುತಿಸಲಾಗಿದೆ.

ಕನ್ನಡ ಸಂದರ್ಭದಲ್ಲಿ ಈಗಾಗಲೇ ಹಲವು ಪ್ರಾದೇಶಿಕ ಭಾಷಾ ಪ್ರಬೇಧಗಳನ್ನು ಗುರುತಿಸಲಾಗಿದೆ. ಅದೇ ನಿಟ್ಟಿನಲ್ಲಿ ಡಾ. ವೀರಭದ್ರಶರ್ಮರವರು 'ಬಳ್ಳಾರಿ ಜಿಲ್ಲೆಯ ಕನ್ನಡ' (1976:119,125,127) ಎನ್ನುವ ಲೇಖನದಲ್ಲಿ ಬಳ್ಳಾರಿ ಜಿಲ್ಲೆಯಲ್ಲಿನ ಸಿರುಗುಪ್ಪ, ಬಳ್ಳಾರಿ, ಹೊಸಪೇಟೆ ಮತ್ತು ಸಂಡೂರು ತಾಲ್ಲೂಕುಗಳನ್ನು ಉನ್ನತ ಭಾಗದ ತಾಲ್ಲೂಕುಗಳೆಂದೂ, ಉಳಿದ ನಾಲ್ಕು ತಾಲ್ಲೂಕುಗಳನ್ನು ಅವನತ ಭಾಗದ ತಾಲ್ಲೂಕುಗಳೆಂದು ಗುರ್ತಿಸಿಕೊಂಡು ಉನ್ನತ ಭಾಗದ ತಾಲ್ಲೂಕುಗಳಲ್ಲಿ ಬಳಕೆಯಾಗುವ ಭಾಷೆಯೇ 'ಬಳ್ಳಾರಿ ಕನ್ನಡ' ಅಥವಾ 'ಬಳ್ಳಾರಿ ಉಪಭಾಷೆ' ಎಂದು ಕರೆದಿದ್ದಾರೆ. ಇನ್ನಿತರ ಕನ್ನಡದ ಭಾಷಾ ಪ್ರಭೇದಗಳಿಗಿಂತ ಈ ಪ್ರಭೇದವು ಶ್ರುತಿ, ತಾನ, ಒತ್ತು, ಸ್ವರ ವಿಧಾನಗಳ ವಿಶೇಷತೆಯಿಂದಾಗಿ ಈ ಭಾಷೆಯು ಕರ್ಣಸುಭಗ ರಾಗಾತ್ಮಕತೆಯನ್ನು ಪಡೆದುಕೊಂಡು ತನ್ನತನದಿಂದ

ಮೆರೆದಿದೆಯಲ್ಲದೆ, ಈ ಭಾಷೆಗೆ ವಿಶಿಷ್ಟವಾದ ಹಲವಾರು ಅಪರೂಪದ ಶಬ್ದರೂಪಗಳಿರುವುದನ್ನು ಪಟ್ಟಿಸಿದ್ದಾರೆ.

ಉನ್ನತ ಭಾಗದ ತಾಲ್ಲೂಕಿನಲ್ಲಿ ಬಳಕೆಯಾಗುತ್ತಿರುವ ಕನ್ನಡದ ಪ್ರಭೇದ ಮೈಸೂರು ಪ್ರಭೇದಕ್ಕೆ ಹತ್ತಿರವಿರುವ ಹಲವು ಶಬ್ದಗಳು ಕಂಡುಬಂದಿರುವುದು ಸಂಶೋಧಕರಲ್ಲಿ ಕುತೂಹಲವನ್ನುಂಟುಮಾಡಿದೆ, ಅಲ್ಲದೆ ಅನೇಕ ಪ್ರಭೇದ ಭಾಷೆಗಳನ್ನಾಡುವ ಜನಗಳ ಸಂಪರ್ಕ ಮತ್ತು ನಿತ್ಯ ವ್ಯವಹಾರ ಇತರ ಪ್ರದೇಶಗಳೊಂದಿಗೆ ಬೆಳೆಯುತ್ತಿದ್ದರೂ ಸಹ ಈ ಜನಗಳ ಭಾಷೆಯ ಮೇಲೆ ಯಾವುದೇ ಬೇರೊಂದು ಪ್ರಭೇದಭಾಷೆ ಪ್ರಭಾವ ಬೀರುವುದು ಸಾಧ್ಯವಾಗಿಲ್ಲ. ಇದಕ್ಕೆ ಈ ಭಾಷೆಯನ್ನಾಡುವ ಜನರಲ್ಲಿರಬಹುದಾದ ಪ್ರಾಂತಾಭಿಮಾನ ಅಥವಾ ವೈಯಕ್ತಿಕತೆ ಕಾರಣವಾಗಿರಬಹುದು. ಜೊತೆಗೆ ತೆಲುಗು ಭಾಷಿಕರನೇಕರು ಅನೇಕ ವರ್ಷಗಳಿಂದ ಇಲ್ಲಿ ನೆಲೆಸಿರುವುದರಿಂದ ಮತ್ತು ದಿನನಿತ್ಯದ ವ್ಯವಹಾರ, ವ್ಯಾಪಾರಗಳು ಆಂಧ್ರದ ಇತರ ಪ್ರದೇಶಗಳೊಂದಿಗೆ ನಡೆಯುತ್ತಿರುವುದರಿಂದ ಬಳ್ಳಾರಿ ಜನರ ಆಡು ಭಾಷೆಯಲ್ಲಿ ತೆಲುಗಿನ ಡಬ್ಬು, ಪಪ್ಪು, ಪಾಮು, ಚಪ್ಪು, ಒಕಟಿ, ದೊಂಗ, ಚೇಯಿ, ಪೋ, ಚೂಡು, ಕುಚ್ಚು ಶಬ್ದಗಳು ಕನ್ನಡದಲ್ಲಿ ಬೆರೆತಿವೆ.

ರಾಜಕೀಯವಾಗಿ, ಸಾಂಸ್ಕೃತಿಕವಾಗಿ ಮಹತ್ವ ಪಡೆದ ಕ್ಷೇತ್ರ ಇದಾಗಿದ್ದು ಇಲ್ಲಿ ವಿಜಯನಗರದ ಹಂಪಿಯಲ್ಲಿ ಬಳಸುತ್ತಿದ್ದ ಭಾಷೆಯೇ ಪ್ರತಿಷ್ಠೆ ಪಡೆದುಕೊಂಡು ಸುತ್ತೆಲ್ಲೆಡೆಗೂ ಹಬ್ಬಿ ಸ್ವೀಕೃತವಾಗಿದೆ. ಇಲ್ಲಿಂದಲೇ ಅನೇಕ ಸೀಮಾರೇಖೆಗಳು ಹೊರಡುವುದನ್ನು ಅರಿಯಬಹುದಾಗಿದೆ. ಈ ಉಪಭಾಷಾ ಸೀಮಾರೇಖೆಗಳು ಜಿಲ್ಲೆಯ ಉತ್ತರಕ್ಕಿರುವ ರಾಯಚೂರು, ಗಂಗಾವತಿ ಮತ್ತು ಸಿಂಧನೂರು ತಾಲ್ಲೂಕುಗಳವರೆಗೂ ಹರಡಿಕೊಂಡಿವೆ. ಇಂಥ ಸೀಮಾರೇಖೆ ಸಮುದಾಯದಿಂದ ಸುತ್ತುವರೆಯಲ್ಪಟ್ಟ ಸಿರುಗುಪ್ಪ, ಬಳ್ಳಾರಿ, ಹೊಸಪೇಟೆ, ಸಂಡೂರು, ಗಂಗಾವತಿ, ಸಿಂಧನೂರು ತಾಲ್ಲೂಕುಗಳ ಪ್ರದೇಶವನ್ನು ಉಪಭಾಷಾಕ್ಷೇತ್ರ ಎಂದು ಕರೆಯಲಾಗಿದೆ. ಈ ಸೀಮಾರೇಖೆಗಳು ಬಳ್ಳಾರಿ ಜಿಲ್ಲೆಯ ಅವನತ ಭಾಗದ ತಾಲ್ಲೂಕುಗಳಾದ ಮಲ್ಲಾಪುರ, ಹಡಗಲಿ, ಹರಪನಹಳ್ಳಿ ಮತ್ತು ಕೂಡ್ಲಿಗಿಗಳವರೆಗೂ ಸಮಾನಾಂತರವಾಗಿ ಹರಡಲೇಬೇಕಾಗಿತ್ತು. ಆದರೆ, ಹಾಗಾಗಿಲ್ಲ. ಕಾರಣವೆಂದರೆ ನೈಸರ್ಗಿಕ ಆತಂಕವಾದ ಸಂಡೂರು ಬೆಟ್ಟಗಳು ಮತ್ತು ದಟ್ಟವಾದ ಅರಣ್ಯ ಪ್ರದೇಶ ಅವುಗಳಿಗೆ ತಡೆಯುಂಟುಮಾಡಿರುವುದೆ ಆಗಿದೆ. ಸಂಡೂರಿನ ಬೆಟ್ಟಗಳು ವಾಯುವ್ಯ ಆಗ್ನೇಯ ಮಾರ್ಗವಾಗಿ ಹಬ್ಬಿನಿಂತಿವೆ.

ಜಿಲ್ಲೆಯ ಉನ್ನತ ಭಾಗದ ತಾಲ್ಲೂಕುಗಳ ಜನರು ಆಡುವ ಭಾಷೆಯಲ್ಲಿ ಕಾಣಬಹುದಾದ ಒತ್ತು, ಶ್ರುತಿ, ತಾನ, ಸ್ವರಭಾರಗಳು ಅವನತ ಭಾಗದ ತಾಲ್ಲೂಕುಗಳ ಜನರ ಭಾಷೆಯಲ್ಲಿ ಎಳ್ಳಷ್ಟು ಕಂಡುಬರುವುದಿಲ್ಲ. ಹರಪನಹಳ್ಳಿ ತಾಲ್ಲೂಕಿನ ಭಾಷೆಯ ಮೇಲೆ ಹರಿಹರ ಮತ್ತು ದಾವಣಗೆರೆಯ ಕನ್ನಡದ ಪ್ರಭಾವವಿರುವುದನ್ನು ಕಾಣುವುದಾದರೆ, ಹಡಗಲಿ ತಾಲ್ಲೂಕಿನ ಭಾಷೆಯ ಮೇಲೆ ಹುಬ್ಬಳ್ಳಿ-ಧಾರವಾಡ , ಗದಗ ಪ್ರದೇಶಗಳ ಭಾಷೆಯ ಪ್ರಭಾವವಿರುವುದನ್ನು ಕಾಣುತ್ತೇವೆ. ಅಲ್ಲದೆ ಈ ಪ್ರಭಾವವು ಮಲ್ಲಾಪುರ ತಾಲ್ಲೂಕಿನವರೆಗೂ ಹರಿದಿದೆ ಎಂಬುದು ಸ್ಪಷ್ಟ. ಕೂಡ್ಲಿಗಿ ತಾಲ್ಲೂಕಿನ

ಭಾಷೆಯ ಮೇಲೆ ಚಿತ್ರದುರ್ಗ ಜಿಲ್ಲೆಯ ಜಗಳೂರು ಕನ್ನಡವೂ ಅಲ್ಲದೆ ಹರಪನಹಳ್ಳಿ, ದಾವಣಗೆರೆ, ಹರಿಹರಗಳ ಕನ್ನಡದ ಪ್ರಭಾವವು ಇದ್ದು, ಇಲ್ಲಿನ ಕನ್ನಡ ಕಲಸುಮೇಲೋಗರವಾಗಿರುವಂತೆ ತೋರುತ್ತದೆ.

ಆರ್.ಕೆ. ದುರ್ಗಾದಾಸ್ (1996:156,157,158) ರವರು ತಮ್ಮ ಸಂಶೋಧನ ಮಹಾಪ್ರಬಂಧದಲ್ಲಿ ಬಳ್ಳಾರಿ ಜಿಲ್ಲೆ ಬಯಲಾಟಗಳಲ್ಲಿ ಬಳ್ಳಾರಿ ಜಿಲ್ಲೆಯ ಕನ್ನಡ ಮತ್ತು ಕನ್ನಡ - ತೆಲುಗು ದ್ವಿಭಾಷಾ ಸಂದರ್ಭವನ್ನು ಕುರಿತಂತಹ ಕೆಲವು ವಿಚಾರಗಳಲ್ಲಿ ಬಳ್ಳಾರಿ ಜಿಲ್ಲೆ ತನ್ನದೇ ಆದ ಉಪಭಾಷೆಯನ್ನು ಹೊಂದಿದೆ. ಹೊಸಪೇಟೆ, ಹಗರಿಬೊಮ್ಮನಹಳ್ಳಿ, ಹಡಗಲಿ, ಹರಪನಹಳ್ಳಿ, ಕೂಡ್ಲಿಗಿ ಮತ್ತು ಸಂಡೂರುಗಳಲ್ಲಿ ಕನ್ನಡ ಭಾಷೆ ಹಿಂದಿನಿಂದಲೂ ದೇಶೀ ಸತ್ವವನ್ನು ಉಳಿಸಿಕೊಂಡಿದೆ. ಉಚ್ಚಾರಣೆಕಾಕು, ಶ್ರುತಿ, ಲಯಗಳಲ್ಲಿ ಇಲ್ಲಿ ಏಕರೂಪತೆ ಇದೆ. ಗಡಿನಾಡಾದ ಬಳ್ಳಾರಿ, ಸಿರುಗುಪ್ಪ ಭಾಗದ ಭಾಷೆಯಲ್ಲಿ ತೆಲುಗು ಪ್ರಭಾವ ಹೆಚ್ಚಿರುವುದರಿಂದ ಇಲ್ಲಿನ ಭಾಷೆ ಇನ್ನೊಂದು ಬಗೆಯಾಗಿದೆ. ಆಂಧ್ರದಿಂದ ವಲಸೆ ಬಂದವರಲ್ಲಿ ಕನ್ನಡ-ತೆಲುಗು ಇವೆರಡರ ಮಿಶ್ರರೂಪದ ಭಾಷೆಯ ಬಳಕೆ ಇದೆ. ಬಯಲಾಟಗಳು ಇವೆಲ್ಲಾ ಪ್ರದೇಶಗಳಲ್ಲಿ ನಡೆಯುವುದರಿಂದ ಆಯಾ ಭಾಗದ ಪ್ರಾದೇಶಿಕ ಭಾಷೆಯ ಪ್ರಭಾವ ಅವುಗಳ ಮೇಲಾಗಿದೆ. ಕಥೆ ಕಲಿಸುವ ನಾಯಕ ಒಂದು ಭಾಗದವನಿದ್ದು, ಅವನು ಒಂದು ಲಿಖಿತ ಕಥೆವಹಿಯ ಪಾಠವನ್ನು ಉರುಹೊಡಿಸಿದಾಗಲೂ ಪಾತ್ರಗಳು ರಂಗದ ಮೇಲೆ ಬಂದು ಮಾತನಾಡುವಾಗ ತಮ್ಮದೇ ಆದ ಪ್ರಾದೇಶಿಕ ಉಚ್ಚಾರಣೆಯನ್ನು ಮರೆತಿರುವುದಿಲ್ಲ. ತಕ್ಕಮಟ್ಟಿಗೆ ವಿದ್ಯಾವಂತರು ಅನುಸರಿಸಬಹುದು. ಹೆಚ್ಚಾಗಿ ಬಯಲಾಟಗಳು ಲಿಖಿತಕ್ಕಿಂತ ಮೌಖಿಕಗಳೇ ಆಗಿರುವುದರಿಂದ ಪ್ರಾದೇಶಿಕ ಭಾಷೆ ಬಯಲಾಟಗಳಲ್ಲಿ ಅಚ್ಚೊತ್ತಿದಂತೆ ಕಾಣುತ್ತದೆ. ಬಳ್ಳಾರಿ-ಸಿರುಗುಪ್ಪ ಪಾತ್ರಗಳನ್ನು ಸಂಬೋಧಿಸುವಲ್ಲಿ ಕೊನೆಯಲ್ಲಿ ದೀರ್ಘ ಕಾಕು ಇದ್ದು ಶ್ರುತಿ ಆರೋಹದ ಕಡೆಗೆ ಒಲಿಯುತ್ತದೆ. ಅನಕ್ಷರಸ್ಥರು ಮಾತನಾಡುವಾಗ ಮಹಾಪ್ರಾಣ ಧ್ವನಿ ಲೋಪಗೊಳ್ಳುವುದು ವಿಜಾತೀಯ ಸಂಯುಕ್ತಗಳಿಗೆ ಸಜಾತಿಯತ್ವ ಬರುವುದು ಮತ್ತು ಅಲ್ಪಪ್ರಾಣಗಳನ್ನು ಧ್ವನಿ ಜಾರುವಿಕೆಯಿಂದ ಮಹಾಪ್ರಾಣವಾಗಿಸುವುದೂ ಮತ್ತು ಹ ಕಾರವು ಲೋಪವಾಗುವುದು ಬಯಲಾಟದ ಆಡುಭಾಷೆಯಲ್ಲಿ ಕಂಡುಬರುವುದು. ವಿಶೇಷವಾಗಿ ಗಡಿನಾಡಿನಲ್ಲಿ ಒಂದೇ ಭಾಷೆ ಬಳಕೆಯಲ್ಲಿ ಇಲ್ಲದಿರುವುದರಿಂದ ಈ ವೈಪರೀತ್ಯಗಳು ಇಲ್ಲಿ ಕಾಣುತ್ತವೆ.

ಗಡಿಗೆ ಹತ್ತಿರುವ ಪ್ರದೇಶಗಳಲ್ಲಿ ಮುಖ್ಯವಾಗಿ ಹನಕಹಾಳು, ಎಮ್ಮಿಗನೂರು, ರಾಮಸಾಗರಗಳಲ್ಲಿ ಬಯಲಾಟ ಭಾಷೆಯಲ್ಲಿ ತೆಲುಗು ಕನ್ನಡ ದ್ವಿಭಾಷೆ ಸ್ಥಿತಿ ಒಡೆದು ಕಾಣುತ್ತದೆ. ಇಲ್ಲಿ ಸಿಕ್ಕುವ ಬಯಲಾಟ ಹಸ್ತಪ್ರತಿಗಳೂ ಸಹ ಇದೇ ಮಾದರಿಯವು. ಗರುಡಚೇಡು ಹನುಮಂತಪ್ಪ ತೆಲುಗು ಕನ್ನಡ ದ್ವಿಭಾಷಾ ಕವಿಯಾಗಿ ಬಯಲಾಟ ಕೃತಿ ರಚಿಸಿರುವುದು ಸಹ ಉಂಟು. ಇಲ್ಲಿ ಕನ್ನಡಿಗರು ಬಯಲಾಟ ಆಡುವಾಗ ಅಲ್ಲಿನ ತೆಲುಗು ಮತ್ತು ಕನ್ನಡ ಜನಗಳಿಗೆ ಸಮಾನವಾಗಿಯೇ ಅರ್ಥವಾಗುವಂತೆ ಕೆಲವೊಂದು ಸನ್ನಿವೇಶಗಳಲ್ಲಿ 'ತೆಲುಗಿನ' ಮಾತು ಮತ್ತು ಹಾಡುಗಳನ್ನು

ೇರಿಸುವುದು ವಾಡಿಕೆಯಾಗಿದೆ. ಉದಾಹರಣೆಗೆ ವ್ರೋ ಮಾಮಾ ಶಿವನ ನೇತ್ರಾಗ್ನಿಂ ನಾಂ ಭರ್ತುನಿ ಪಂಪುಟ ನ್ಯಾಯಮಾ, ನಾ ಪತಿ ನೀಕೇಮ ಚೇಸಿಯುಂಡನೋ, ಶ್ರೀ ಹರಿ' ಮೇಲಿನ ಸನ್ನಿವೇಶದಲ್ಲಿ ಕನ್ನಡಿಗರು ಪಾತ್ರ ಕಟ್ಟಿರುವಾಗ ಇಲ್ಲಿನ ದ್ವಿಭಾಷೆಯಲ್ಲಿ ಯಾವುದೊಂದು ಪ್ರತಿಷ್ಠಿತವಾಗಿ ಇಲ್ಲವೇ ಔಪಚಾರಿಕವಾಗಿ ಕಾಣುವುದಿಲ್ಲ. ಇಲ್ಲಿನ ದ್ವಿಭಾಷಿಕತೆ ಇದರಿಂದ ಕೇವಲ ಪ್ರಾದೇಶಿಕ ಮಟ್ಟದ್ದಾಗಿ ತೋರುತ್ತದೆ.

ಈ ದ್ವಿಭಾಷಾ ಸನ್ನಿವೇಶ ಇನ್ನೊಂದು ವಿಧದಲ್ಲಿ ಪ್ರತಿಷ್ಠಿತ ಮತ್ತು ಔಪಚಾರಿಕ ಉದ್ದೇಶದಿಂದ ಕೂಡಿರುತ್ತದೆ. ಇದನ್ನು ತೆಲುಗು ಕಲಾವಿದರು ವಲಸೆ ಬಂದು ನೆಲೆಸಿರುವ ಕಡೆಗಳಲ್ಲಿ (ನೀರಾವರಿ ಪ್ರದೇಶ ಮತ್ತು ಸಕ್ಕರೆ ಕಾರ್ಖಾನೆ ಸುತ್ತಮುತ್ತ ಬಳ್ಳಾರಿ ಜಿಲ್ಲೆಯಲ್ಲಿ ಪ್ರತಿಶತ 15ರಷ್ಟು ಪ್ರಮಾಣದಲ್ಲಿ ತೆಲುಗರು ವಾಸವಾಗಿದ್ದಾರೆ. ಇವರಿರುವ ನಿವೇಶನಗಳು ಕ್ಯಾಂಪ್‌ಗಳಾಗಿವೆ.) ಮುಖ್ಯವಾಗಿ ಸಿರುಗುಪ್ಪ, ಬಳ್ಳಾರಿ ಕಡೆಗಳಲ್ಲಿ ಅವರೆ ಪಾತ್ರ ಕಟ್ಟಿ ಆಡುವಾಗ ಕನ್ನಡ ಬಯಲಾಟಗಳಲ್ಲಿ ಕೆಲವೊಂದು ಮುಖ್ಯ ಸನ್ನಿವೇಶಗಳಲ್ಲಿ ಕನ್ನಡದ ಜೊತೆಗೆ ತೆಲುಗಿನಲ್ಲಿ ಮಾತು ಮತ್ತು ಹಾಡುಗಳನ್ನು ಸೇರಿಸುತ್ತಾರೆ. ಇವು ಮಹತ್ವದ ರಸ ಪ್ರತಿಪಾದಿತ ಸನ್ನಿವೇಶಗಳಲ್ಲಿ ಮಾತ್ರ ಬರುವುದರಿಂದ ಇಲ್ಲಿನ ದ್ವಿಭಾಷಿಕತೆ ಸಂದರ್ಭದೊಟ್ಟಿಗೆ ಪ್ರತಿಷ್ಠೆಯನ್ನು ಸಹ ಪಡೆದಿರುತ್ತದೆ. ಇಲ್ಲಿನ ದ್ವಿಭಾಷಾ ನಡವಳಿಕೆಯನ್ನು ಎರಡೂ ಭಾಷೆಯ ಕಲಾವಿದರ ಸನ್ನಿವೇಶದಲ್ಲಿ ಕೆಳಗಿನ ಭಾಷಾ ಸಂದರ್ಭಗಳ ಆಕೃತಿಯನ್ನು ಸೂಚಿಸಲಾಗಿದೆ.




ಬಳ್ಳಾರಿ ಜಿಲ್ಲೆ ಕರ್ನಾಟಕದಲ್ಲಿ ಇತ್ತ ಹಳೆ ಮೈಸೂರಿಗೂ ಸೇರದೆ, ಅತ್ತ ಉತ್ತರ ಕರ್ನಾಟಕದ ಪರಂಪರೆಯನ್ನು ಒಳಗೊಳ್ಳದೆ ಮಧ್ಯವರ್ತಿಯಾಗಿ ತುಂಗಭದ್ರೆಯ ಸೀಮೆಯ ಒಂದು ಬದಿಯಲ್ಲಿ ಆಂಧ್ರಕ್ಕೆ ಹತ್ತಿರವಿರುವ ಇನ್ನೊಂದು ಬದಿಯಲ್ಲಿ ಒಟ್ಟಾರೆ ಹೇಳುವುದಾದರೆ ಒಂದು ದ್ವೀಪವಾಗಿ ಉಳಿದುಕೊಂಡಿದೆ. ದುರ್ಗಾದಾಸ್‌ರವರು ಬಳ್ಳಾರಿ ಕನ್ನಡವನ್ನು ಕುರಿತಂತೆ ಮತ್ತು ದ್ವಿಭಾಷಾ ಸಂದರ್ಭವನ್ನು ಕುರಿತಂತೆ ಹೇಳುವ ವಿಚಾರಗಳನ್ನು ಒಪ್ಪಬಹುದಾದರೂ ಬಳ್ಳಾರಿ ಒಂದು ದ್ವೀಪವಾಗಿ ಉಳಿದುಕೊಂಡಿದೆ ಎನ್ನುವ ವಿಚಾರವನ್ನು ಒಪ್ಪಲಾಗದು. ಏಕೆಂದರೆ ಬಳ್ಳಾರಿ ಒಂದು

ದ್ವೀಪವಾಗಿ ಉಳಿದುಕೊಂಡಿದ್ದರೆ ಇದೊಂದು ದ್ವಿ-ಬಹುಭಾಷಾ ಪ್ರದೇಶವಾಗಲು ಸಾಧ್ಯವಿರಲಿಲ್ಲ. ಅನೇಕ ಭಾಷೆಯ ಭಾಷಿಕರಿಗೆ ಇದು ತೆರೆದುಕೊಂಡಿರುವುದರಿಂದ ಇದೊಂದು ದ್ವೀಪವಾಗಿ ಉಳಿಯಲು ಸಾಧ್ಯವಿಲ್ಲ.

## ಕನ್ನಡ ಭಾಷಾ ಪ್ರಭೇದಗಳ ಮೇಲೆ ತೆಲುಗು ಭಾಷಾ ಪ್ರಭಾವ

| ಜಿಲ್ಲೆಗಳು | | ತೆಲುಗು |
|---|---|---|
| 1. | ಬೀದರ್ | + |
| 2. | ಗುಲ್ಬರ್ಗ | + |
| 3. | ಬಿಜಾಪುರ | - |
| 4. | ಬೆಳಗಾವಿ | - |
| 5. | ರಾಯಚೂರು | + |
| 6. | ಬಳ್ಳಾರಿ | ++ |
| 7. | ಕೊಪ್ಪಳ | - |
| 8. | ಬಾಗಲಕೋಟೆ | - |
| 9. | ಗದಗ | - |
| 10. | ಚಿತ್ರದುರ್ಗ | + + |
| 11. | ತುಮಕೂರು | + + + |
| 12. | ಕೋಲಾರ | + + + |
| 13. | ಬೆಂಗಳೂರು ಉತ್ತರ | + + |
| 14. | ಮೈಸೂರು | + |
| 15. | ಕೊಡಗು | - |
| 16. | ಚಾಮರಾಜ ನಗರ | + |
| 17. | ದಕ್ಷಿಣ ಕನ್ನಡ | - |
| 18. | ಉತ್ತರ ಕನ್ನಡ | - |
| 19. | ಶಿವಮೊಗ್ಗ | - |
| 20. | ಮಂಡ್ಯ | + |

| | | |
|---|---|---|
| 21. | ಹಾಸನ | - |
| 22. | ಚಿಕ್ಕಮಗಳೂರು | - |
| 23. | ಧಾರವಾಡ | - |
| 24. | ಉಡುಪಿ | - |
| 25. | ಹಾವೇರಿ | - |
| 26 | ಬೆಂಗಳೂರು ದಕ್ಷಿಣ | + |

+ + + ಹೆಚ್ಚು  + + ಸಾಧಾರಣ  + ಕಡಿಮೆ  - ಇಲ್ಲ



ಅಧ್ಯಾಯ : ಐದು

# ದ್ವಿಭಾಷಿಕತೆಯ ಸಂರಚನೆಯ ಸ್ವರೂಪ

## (ಜಾತಿ, ವರ್ಗ ಮತ್ತು ಕಸುಬುಗಳನ್ನು ಆಧರಿಸಿ)

೧. ಕನ್ನಡ ಸ್ವಭಾಷಿಕರು / ತೆಲುಗು ದ್ವಿಭಾಷಿಕರು

೨. ತೆಲುಗು ಸ್ವಭಾಷಿಕರು / ಕನ್ನಡ ದ್ವಿಭಾಷಿಕರು

೩. ಕನ್ನಡ ಏಕಭಾಷಿಕರು

೪. ತೆಲುಗು ಏಕಭಾಷಿಕರು

## ಅಧ್ಯಾಯ : ಐದು

# ದ್ವಿಭಾಷಿಕತೆಯ ಸಂರಚನೆಯ ಸ್ವರೂಪ

ದ್ವಿಭಾಷಿಕತೆಯು ಬಳಕೆಯಾಗುವ ಸಾಮಾಜಿಕ ಸಂದರ್ಭಗಳ ನೆಲೆಗಳ ಬಗೆಗೆ ಅಧ್ಯಯನ ಮಾಡುವಾಗ ಸಮಾಜದಲ್ಲಿನ ಸಾಮಾಜಿಕ ರಚನೆಯ ರೂಪುರೇಷೆಗಳನ್ನು ತಿಳಿದುಕೊಳ್ಳುವ ಅಗತ್ಯವಿದೆ. ಏಕೆಂದರೆ ಸಾಮಾಜಿಕ ರಚನೆಯು ಹಲವು ನೆಲೆಗಳಲ್ಲಿ ಭಾಷೆಯ ಬಳಕೆಯನ್ನು ನಿಯಂತ್ರಿಸುತ್ತಿರುತ್ತದೆ ಮತ್ತು ನಿರ್ದೇಶಿಸುತ್ತಿರುತ್ತದೆ. ಸಾಮಾಜಿಕ ಚಟುವಟಿಕೆಗಳು ನಡೆಯುವ ಕ್ಷೇತ್ರಗಳಲ್ಲಿ ಎರಡು ಭಾಷೆಗಳು ಬಳಕೆಯಾಗುವ ಸಂದರ್ಭಗಳು ಸಾಮಾಜಿಕ ರಚನೆಯನ್ನು ಅವಲಂಬಿಸಿರುತ್ತವೆ. ವಿವಿಧ ಬಗೆಯ ಸಾಮಾಜಿಕ ಗುಂಪುಗಳ ಸಂವಹನ ಚೌಕಟ್ಟು, ಸನ್ನಿವೇಶದ ಸ್ಥಾನಮಾನಗಳು ಮತ್ತು ಸಾಮಾಜಿಕ ವ್ಯಕ್ತಿಯ ಪಾತ್ರ ನಿರ್ವಹಣೆಯ ಸಂಬಂಧಗಳೆಲ್ಲವೂ ಸಾಮಾಜಿಕ ರಚನೆಯ ಉತ್ಪನ್ನಗಳೇ ಆಗಿರುತ್ತವೆ. ಜಾತಿ ಅಥವಾ ವರ್ಗಗಳ ರೂಪದಲ್ಲಿರುವ ಸಾಮಾಜಿಕ ವ್ಯವಸ್ಥೆಯು ಭಾಷೆಯ ಮೇಲೆ ಬೀರುವ ಪ್ರಭಾವವನ್ನು ಸಾಮಾಜಿಕ ರಚನೆಯು ಸ್ಪಷ್ಟಪಡಿಸುತ್ತದೆ.

ಭಾರತದಲ್ಲಿ ನೂರಾರು ಜಾತಿ ಉಪ-ಜಾತಿಗಳಿವೆ, ಧರ್ಮಗಳಿವೆ. ಅವುಗಳೆಲ್ಲಾ ತಮ್ಮದೇ ಆದ ಸಮಾಜ, ಸಂಸ್ಕೃತಿ, ಭಾಷೆ ಮತ್ತು ಭಾಷಾ ಪ್ರಭೇದಗಳನ್ನು, ನಂಬಿಕೆ, ಸಾಂಪ್ರದಾಯ, ಉಡುಗೆ-ತೊಡುಗೆಗಳನ್ನು ಹೊಂದಿದೆ. ಹೀಗಿರುವಾಗ ಪ್ರತಿಯೊಂದು ಜಾತಿಗಳಲ್ಲಿನ ಭಿನ್ನ ಶಿಕ್ಷಣ, ಆದಾಯ, ಲಿಂಗ, ವಯಸ್ಸು, ಕುಟುಂಬ, ವರ್ಗ ಇತರೆ ಭಿನ್ನಾಂಶಗಳಿಂದಾಗಿ ಭಿನ್ನ ಭಾಷಿಕ ರಚನೆಗಳು ಸ್ವತಂತ್ರ ರೂಪ ಪಡೆದಿವೆ. ಕೆಲವು ಭಾಷೆ ಮತ್ತು ಭಾಷಾ ಪ್ರಭೇದಗಳು ಲಿಖಿತ ರೂಪದಲ್ಲಿ ರೂಪು ಪಡೆದಿದ್ದರೆ, ಇನ್ನು ಕೆಲವನ್ನು ಹಲವಾರು ಚದುರ ಕಿ.ಮೀ.ಗಳಲ್ಲಿ ಮೌಖಿಕವಾಗಿ ಬಳಸುತ್ತಿರುತ್ತಾರೆ. ಜೊತೆಗೆ ಜಾತಿಗಳಲ್ಲಿರುವ ಸಾಮಾಜಿಕ ಪದ್ಧತಿಗಳೂ ಸಹ ಒಂದು ಭಾಷೆಯ ಮೇಲೆ ಪ್ರಭಾವ ಬೀರಬಹುದು. ಪ್ರಾದೇಶಿಕ ಭಾಷೆಯ ವಿಶಿಷ್ಟತೆ ಮತ್ತು ಶಿಷ್ಟಭಾಷೆಯೊಂದಕ್ಕಿಂತ ಯಾವುದೇ ಒಂದು ಕನ್ನಡದ ಸಾಮಾಜಿಕ ಪ್ರಭೇದ ಹೇಗೆ ಭಿನ್ನ ಎನ್ನುವುದನ್ನು ಈಗಾಗಲೇ ಕನ್ನಡದ ಸಂದರ್ಭದಲ್ಲಿ ವರ್ಣನಾತ್ಮಕ ನೆಲೆಯಲ್ಲಾದ

ಹಲವು ಅಧ್ಯಯನಗಳಿಂದ ತಿಳಿಯಬಹುದಾಗಿದೆ. ಆದರೆ ಈ ಅಧ್ಯಯನಗಳಲ್ಲಿ ಸಾಮಾಜಿಕ ಭಿನ್ನಾಂಶವಾದ ಜಾತಿಯೊಂದನ್ನು ತೆಗೆದುಕೊಂಡು ಅಥವಾ ಇನ್ನಾವುದೇ ಒಂದೂ ಎರಡೂ ಸಾಮಾಜಿಕ ಭಿನ್ನಾಂಶಗಳಿಂದ ಅಧ್ಯಯನ ಮಾಡಲಾಗಿದೆ. ಆದ್ದರಿಂದ ಒಟ್ಟಾರೆಯಾದ ವರ್ಣನಾತ್ಮಕ ನೆಲೆಯಲ್ಲಿ ಅಧ್ಯಯನ ಮಾಡಿರುವುದರಿಂದ ಜಾತಿಯೊಂದೇ ಸಂಪೂರ್ಣವಾಗಿ ಭಾಷೆ ಭಿನ್ನತೆಯನ್ನು ಉಂಟುಮಾಡುತ್ತದೆ ಎನ್ನುವುದಕ್ಕಿಂತ ಬೇರೆ ಸಾಮಾಜಿಕ ಭಿನ್ನಾಂಶಗಳನ್ನು ಗಣನೆಗೆ ತೆಗೆದುಕೊಂಡು ಅಧ್ಯಯನ ಮಾಡುವುದರ ಮುಖಾಂತರ ಒಟ್ಟಾರೆಯಾದ ಭಾಷಿಕ ಭಿನ್ನತೆಗಳನ್ನು ಗುರುತಿಸಬಹುದಾಗಿದೆ. ಅಲ್ಲದೆ ಪರಿಣಾಮದಲ್ಲಿ ಭಾಷೆಯಲ್ಲಾಗುತ್ತಿರುವ ಬದಲಾವಣೆಗಳು, ವ್ಯತ್ಯಾಸಗಳು, ಇನ್ನಿತರೆ ಅಂಶಗಳನ್ನೂ ಸಹ ಕಂಡುಕೊಳ್ಳಬಹುದಾಗಿದೆ. ಆದ್ದರಿಂದ ನಮ್ಮ ಸಂದರ್ಭದಲ್ಲಿ ಯಾವುದೇ ಭಾರತೀಯ ಭಾಷೆಗಳ ವಿಶಿಷ್ಟತೆ ಅಥವಾ ಭಿನ್ನತೆ ಆ ಭಾಷೆಯನ್ನಾಡುವ ಭಾಷಿಕರ ಸಮಾಜೋಭಾಷಿಕ ಅಂಶಗಳು ಬೀರುವ ಪರಿಣಾಮದಲ್ಲಿ ಭಿನ್ನವಾಗಿರುತ್ತವೆ. ಎಲ್ಲಾ ಭಾರತೀಯ ಭಾಷೆಗಳಲ್ಲೂ ಸಹ ಏಕ ರೀತಿಯ ಭಿನ್ನತೆಗಳನ್ನು, ಪರಿಣಾಮಗಳನ್ನು ಕಾಣಲಾಗುವುದಿಲ್ಲ. ಇದು ಬಹುಮುಖ ಆಯಾಮಗಳನ್ನು ಹೊಂದಿರುತ್ತದೆ. ಆದ್ದರಿಂದ ಸಮಾಜೋಭಾಷಿಕ ಅಂಶಗಳು ಒಂದು ಭಾಷೆ ಅಥವಾ ಹಲವು ಭಾಷೆಗಳನ್ನು ಬಳಸುವ ಭಾಷಿಕರ ಮೇಲೆ ಬೀರುವ ಪರಿಣಾಮ ಮತ್ತು ಭಾಷೆಗಳ ಅಳಿವು-ಉಳಿವು, ಬದಲಾವಣೆ, ಇತ್ಯಾದಿ ವಿಷಯಗಳ ಬಗೆಗಿನ ಅಧ್ಯಯನ ನಮ್ಮ ಸಂದರ್ಭದಲ್ಲಿ ಅನಿವಾರ್ಯವಾಗಿದೆ.

ಭೌಗೋಳಿಕ ಭಿನ್ನತೆಗಳ ಕಾರಣವಾಗಿ ಭಾಷಾ ವ್ಯತ್ಯಾಸಗಳು ಪ್ರದೇಶದಿಂದ - ಪ್ರದೇಶಕ್ಕೆ ಭಿನ್ನವಾಗಿರುತ್ತವೆ ಎಂಬ ಅಂಶವನ್ನು ಬ್ಲೂಮ್‌ಫೀಲ್ಡ್‌ನ ವರೆಗಿನ ಭಾಷಾ ಭಿನ್ನತೆಯ ಬಗೆಗಿನ ಹಲವು ಅಧ್ಯಯನಗಳಲ್ಲಿ ಕಂಡುಕೊಳ್ಳಲಾಗಿದೆ. ಆದರೆ ಒಂದೇ ಭೌಗೋಳಿಕ ಪ್ರದೇಶದಲ್ಲಿ ವಾಸಿಸುವ ಸಮುದಾಯದ ಒಳಗಡೆಯೇ ಭಾಷಿಕ ಭಿನ್ನತೆಗಳಿರುತ್ತವೆ. ಇದಕ್ಕೆ ಕಾರಣಗಳೇನು ಜಾತಿ, ವಯಸ್ಸು, ಲಿಂಗ, ಶಿಕ್ಷಣ, ಪ್ರಾದೇಶಿಕತೆ ಈ ಎಲ್ಲಾ ಅಂಶಗಳು ಭಾಷಿಕ ಭಿನ್ನತೆಗೆ ಕಾರಣವಿರಬಹುದೆಂದು ಬ್ಲೂಮ್‌ಫೀಲ್ಡ್‌ನ.ನಂತರದಲ್ಲಿ ನಡೆದ ಹಲವು ಭಾಷಾ ಭಿನ್ನತೆಯ ಬಗೆಗಿನ ಅಧ್ಯಯನಗಳು ಗುರುತಿಸಿವೆ. ಭಾರತದಲ್ಲಿ ಪ್ರತಿಯೊಂದು ಗುಂಪು ಬಳಸುವ ಭಾಷೆಯಲ್ಲಿ ಬದಲಾವಣೆಗಳಾಗಿವೆ. ಸಾಮಾಜಿಕ ಪ್ರಭೇದಗಳಲ್ಲೂ ಬದಲಾವಣೆಗಳಾಗಿರುವುದು ಕುತೂಹಲದ ಸಂಗತಿ. ಆದ್ದರಿಂದ ಗುಂಫರ್ಜ್ (1969b) ರವರು ಹೇಳುವಂತೆ "ಸಾಮಾಜಿಕ ಸಂದರ್ಭಗಳಲ್ಲಿ ಬಳಕೆಯಾಗುವ ಮಾತುಗಳನ್ನು ವಿಶ್ಲೇಷಿಸುವ ಮೂಲಕವೇ ಸಾಮಾಜಿಕ ಪ್ರಭೇದಗಳಲ್ಲಿನ ಬದಲಾವಣೆಯನ್ನು ಅರ್ಥಮಾಡಿಕೊಳ್ಳಲು ಸಾಧ್ಯ. ಒಂದು ಸಾಮಾಜಿಕ ಪ್ರಭೇದಕ್ಕೆ ಹೆಚ್ಚಿನ ಸಾಮಾಜಿಕ ಪ್ರತಿಷ್ಠೆ ಇದ್ದರೆ ಮತ್ತೊಂದಕ್ಕೆ ಇರುವುದಿಲ್ಲ. ಜಾತಿ ಕೂಡ ಸಂವಹನ ಗಡಿಗಳ ಮೇಲೆ ಬೀರುವ ಪರಿಣಾಮ ಆಧುನಿಕ ನಗರ ಮತ್ತು ಸಾಂಪ್ರದಾಯಿಕ ಗ್ರಾಮೀಣ ಪ್ರದೇಶದಲ್ಲಿ ವಿಭಿನ್ನವಾಗಿರಬಹುದು" ಎಂದಿದ್ದಾರೆ. ಬೀನ್ (1974)ರವರು ಭಾಷಿಕ ಭಿನ್ನತೆಗಳಿಗೆ ಕಾರಣೀಭೂತವಾಗಿರುವ ಸಾಮಾಜಿಕ ಭಿನ್ನಾಂಶಗಳೇನು ಎಂದು ಹುಡುಕುವುದು ಮುಖ್ಯವಾದ ಹಂತ. ಈ ಹಂತದಲ್ಲಿ ವ್ಯಕ್ತಿಗತ ಮೌಲ್ಯಮಾಪನಗಳಿಂದ ಭಾಷಿಕ ಪ್ರಕ್ರಿಯೆಯನ್ನು

ಭಾಷಿಕ ಭಿನ್ನತೆಗಳ ಮೇಲೆ ಏರುತ್ತಿದ್ದೇವೆಯೇ? ಅಥವಾ ಅಂತಹ ವ್ಯತ್ಯಾಸಗಳು ವಾಸ್ತವದಲ್ಲಿ ನಿಜವಾಗಲೂ ಇದೆಯೇ? ಎನ್ನುವ ಪ್ರಶ್ನೆಗಳನ್ನು ಎತ್ತಿದ್ದಾರೆ.

ಬ್ಲೂಚ್ (1910)ರ ಅಧ್ಯಯನದಲ್ಲಿ ಸಾಮಾಜಿಕ ಶ್ರೇಣೀಕೃತ ವ್ಯವಸ್ಥೆ ಅನಾದಿಕಾಲದಿಂದಲೂ ಇರುವ ಹಾಗೆ ಭಾಷಿಕ ಶ್ರೇಣೀಕೃತ ವ್ಯವಸ್ಥೆ ಇದೆ. ಇದು ಲಂಬಾಂತರ ಭಾಷೆಯಲ್ಲಿನ ಭಿನ್ನತೆಗಳನ್ನು ಗುರುತಿಸುವಾಗ ಬ್ರಾಹ್ಮಣರಲ್ಲಿ ಭಿನ್ನತೆ ಕಡಿಮೆ. ಭಿನ್ನತೆಗಳು ಪ್ರಮುಖ ಶ್ರೇಣೀಕೃತ ವ್ಯವಸ್ಥೆಗೆ ಕಾರಣ. ತಮಿಳಿನಲ್ಲಿ ಜಾತಿ ಮತ್ತು ಭಾಷೆಗೆ ನೇರ ಸಂಬಂಧವಿದೆ ಎಂಬ ಅಂಶಗಳನ್ನು ಗುರುತಿಸಿದ್ದಾರೆ. ಅಲ್ಲದೆ ಭಾರತದ ಸಂದರ್ಭದಲ್ಲಿ ಮಧ್ಯಮ ಜಾತಿಗಳಲ್ಲಿನ ಶಿಕ್ಷಣದಿಂದ ಉಂಟಾದ ಜೀವನ ಕ್ರಮದಿಂದಾಗಿ ಭಾಷೆ ಬದಲಾಗುತ್ತದೆ. ಮಹಿಳೆಯರಲ್ಲಿ ಭಾಷೆ ಹೆಚ್ಚು ಬದಲಾಗುವುದಿಲ್ಲ, ಮೇಲ್ ಜಾತಿಗಳಲ್ಲೂ ಭಾಷೆ ಹೆಚ್ಚು ಬದಲಾಗುವುದಿಲ್ಲ ಎಂದು ಸಾಮಾಜಿಕ ಭಿನ್ನತೆಗಳ ಮೇಲೆ ಕಡಿಮೆ ಭಿನ್ನತೆಗಳನ್ನು ತೋರಿಸಿದ್ದಾರೆ. ಮಾಕರ್‌ಮಾಕ್ (1960,68a)ರವರು ಧಾರವಾಡ ಕನ್ನಡದ ಬಗೆಗಿನ ಅಧ್ಯಯನದಲ್ಲಿ ಬ್ರಾಹ್ಮಣ ಬ್ರಾಹ್ಮಣೇತರ ಹರಿಜನರಲ್ಲಿನ ಭಾಷಿಕ ಭಿನ್ನತೆಗಳನ್ನು ಗುರುತಿಸುವಾಗ ಧ್ವನಿಮುದ್ರಣದಿಂದ ಸಂಗ್ರಹಿಸಿದ ಮಾಹಿತಿಯಲ್ಲಿ ಹರಿಜನರ ಕನ್ನಡವನ್ನು ಅವರಿಗೆ ಗುರುತಿಸಲಿಕ್ಕೆ ಆಗಿಲ್ಲ. 1968a ಅಧ್ಯಯನದಲ್ಲಿ ಜಾತಿ ಪ್ರಭೇದದ ಕಾರಣಗಳನ್ನು ಗುರುತಿಸಲು ಪ್ರಯತ್ನಿಸುವಾಗ ಬ್ರಾಹ್ಮಣರ ಭಾಷಾ ನಡವಳಿಕೆಗಳ ಬದಲಾವಣೆ ಬ್ರಾಹ್ಮಣೇತರ ಭಾಷೆಯಲ್ಲಿ ಬದಲಾವಣೆಯನ್ನುಂಟು ಮಾಡುತ್ತದೆ. ಬ್ರಾಹ್ಮಣೇತರರು ಮಕ್ಕಳ ಭಾಷೆಯನ್ನು ತಿದ್ದುವುದರ ಮೂಲಕ ಬದಲಾವಣೆಯುಂಟು ಮಾಡುತ್ತಾರೆಂಬ ಅಂಶಗಳನ್ನು ಹೊರೆಗೆಳೆದಿದ್ದಾರೆ.

"ಭಾರತೀಯ ಭಾಷಿಕ ಸಮುದಾಯಗಳಿಗೆ ಜಾತಿ ಆಧಾರಿತ ಭಾಷಿಕ ಪ್ರಭೇದಗಳ ಬಗೆಗೆ ಅರಿವಿದೆ ಮತ್ತು ಕೆಳ ಪ್ರತಿಷ್ಠೆಯ ಗುಂಪುಗಳಲ್ಲಿ ಭಾಷಿಕ ರೂಪಗಳು ಹೆಚ್ಚು ಹರಡಿಕೊಂಡಿರುತ್ತವೆ. ಕೆಳಪ್ರತಿಷ್ಠೆಯ ಗುಂಪುಗಳ ಭಾಷೆಯು ಮೇಲ್ ಪ್ರತಿಷ್ಠೆಯ ಜಾತಿಗಳ ಭಾಷೆಗಿಂತ ಹೆಚ್ಚು ಪ್ರಾದೇಶಿಕವಾಗಿ ವಿಶಾಲವಾದ ರೂಪವನ್ನು ತೋರ್ಪಡಿಸಿಕೊಳ್ಳುತ್ತದೆ. ಸ್ಥಳೀಯ ಜಾತಿ ಶ್ರೇಣೀಕೃತ ವ್ಯವಸ್ಥೆಯ ಸಾಮಾಜಿಕ ಅಂತಸ್ತಿನ ಅಂಶವು ಜಾತಿ ಆಧಾರಿತ ಭಾಷಿಕ ಪ್ರಭೇದಗಳ ಅಸ್ತಿತ್ವಕ್ಕೆ ಮೂಲ ಸ್ಫೂರ್ತಿಯನ್ನು ಒದಗಿಸುತ್ತದೆ" ಎಂಬುದನ್ನು ತಮಿಳು ಭಾಷೆಯಲ್ಲಿನ ಜಾತಿ ಪ್ರಭೇದಗಳ ಬಗೆಗೆ ರಾಮಾನುಜಂ (1968)ರವರ ಅಧ್ಯಯನವು ವಿಭಿನ್ನ ರೀತಿಯ ಲಕ್ಷಣಗಳನ್ನು ಮುಂದಿಡುತ್ತದೆ. ಬ್ರಾಹ್ಮಣೇತರ ತಮಿಳಿನಲ್ಲಿ ತಮಿಳು ಬ್ರಾಹ್ಮಣರ ಭಾಷೆ ಕೆಲವೇ ಭೌಗೋಳಿಕ ಭಿನ್ನಾಂಶಗಳಿಂದ ನಿರ್ದಿಷ್ಟವಾಗಿದೆ. ಬ್ರಾಹ್ಮಣರ ಪ್ರಭೇದವು ಇತರ ಪ್ರಭೇದಗಳಿಗಿಂತ ಹೆಚ್ಚಾಗಿ ಧ್ವನಿಮಾ ಹಂತದಲ್ಲಿ ಬದಲಾಗುತ್ತದೆ. ಬ್ರಾಹ್ಮಣೇತರ ಪ್ರಭೇದಗಳಲ್ಲಿ ಬದಲಾವಣೆಯು ಇತರ ರೀತಿಯಲ್ಲಿ ಕಾಣಿಸಿಕೊಳ್ಳುತ್ತದೆ ಎಂದು ಡಿ.ಎನ್.ಶಂಕರಭಟ್ (1967-68)ರವರು ಮೈಸೂರು ಜಿಲ್ಲೆಯ ಜಾತಿ ಪ್ರಭೇದಗಳ ಬಗೆಗಿನ ಅಧ್ಯಯನದಲ್ಲಿ ಬ್ರಾಹ್ಮಣ ಅಸ್ಪೃಶ್ಯ ಮತ್ತು ಇತರ ಜಾತಿಗಳು ಈ ಮೂರೂ ಭೌಗೋಳಿಕ ಪ್ರಭೇದಗಳನ್ನು ಛೇದಿಸುತ್ತವೆ. ಆದ್ದರಿಂದ ಪ್ರಭೇದಗಳ ಮಧ್ಯದ ಭಿನ್ನತೆಗಳನ್ನು ಶಂಕರಭಟ್ಟರು ಪ್ರಭೇದ

ಪ್ರತಿನಿಧಿಸುವ ನಿಯಮಗಳ ಮೇಲೆ ಕಾರ್ಯಪ್ರವೃತ್ತವಾಗುವ ಬದಲಾವಣೆಗಳ ಸರಣಿಯಾಗಿ ವಿವರಿಸುತ್ತಾರೆ. "ಬ್ರಾಹ್ಮಣರ ಪ್ರಭೇದವು ಪ್ರಾದೇಶಿಕವಾಗಿ ನಿರ್ದಿಷ್ಟ ಭಿನ್ನಾಂಶಗಳನ್ನು ಒಳಗೊಂಡಿದ್ದರೂ ಅಮೂರ್ತ ನಿಯಮದಿಂದ ಸ್ವಲ್ಪಮಟ್ಟಿನ ಭಿನ್ನತೆಯನ್ನಷ್ಟೆ ಪ್ರತಿನಿಧಿಸುತ್ತದೆ" ಎಂದೂ ಹೇಳಿದ್ದಾರೆ. ಆದರೆ ಚಾರಿತ್ರಿಕವಾಗಿ ಪ್ರಮಾಣ ಪ್ರಭೇದ, ಬ್ರಾಹ್ಮಣವನ್ನು ಆಧರಿಸಿರುವುದರಿಂದ ಆಗಿದೆ. ಅನೇಕ ವರ್ಷಗಳು ಬ್ರಾಹ್ಮಣರು ಬರವಣಿಗೆಯನ್ನು ತಮ್ಮ ಏಕಸ್ವಾಮ್ಯವಾಗಿ ಮಾಡಿಕೊಂಡಿದ್ದರಿಂದ ಅವರ ಪ್ರಭೇದವು ಪ್ರಮಾಣ ಪ್ರಭೇದಕ್ಕೆ ಹತ್ತಿರವಾಗಿದೆ ಎಂದು ಪಾಲ್ ಫ್ರೈಡ್‌ರಿಚ್ (1961)ರವರು ಪ್ರತಿಕ್ರಿಯಿಸಿದ್ದಾರೆ.

ರಾಮಸ್ವಾಮಿ ಅಯ್ಯರ್ (1932) ಅವರು ತುಳುವಿನ ಸಾಮಾಜಿಕ ಪ್ರಭೇದಗಳ ಬಗೆಗಿನ ಅಧ್ಯಯನದಲ್ಲಿ ಬ್ರಾಹ್ಮಣ ಮತ್ತು ಬ್ರಾಹ್ಮಣೇತರ ನಡುವಿನ ವ್ಯತ್ಯಾಸವನ್ನು ಗುರುತಿಸಿದ್ದಾರೆ. "ಸಂಸ್ಕೃತವನ್ನು ಹೆಚ್ಚಾಗಿ ಸ್ವೀಕಾರ ಮಾಡಿರುವ ಬ್ರಾಹ್ಮಣ ಸಮುದಾಯವು ಸಾಂಸ್ಕೃತಿಕವಾಗಿ ಯಾರ ಜೊತೆಯೂ ಬೆರೆಯದೇ ಇರುವುದೇ ವ್ಯತ್ಯಾಸಕ್ಕೆ ಕಾರಣವಾಗಿದೆ" ಎಂದಿದ್ದಾರೆ. ಇದನ್ನು ನಿರೂಪಿಸಲು ಸರಿಯಾದ ದತ್ತ ಇಲ್ಲದೆ ಇರುವುದು ತುಳುವಿನಲ್ಲಿ ಬರವಣಿಗೆಯ ಕೊರತೆ ಇರುವುದರಿಂದ ಇವರ ಅಧ್ಯಯನದ ಫಲಿತಗಳನ್ನು ಒಪ್ಪಲು ಸಾಧ್ಯವಿಲ್ಲವೆಂಬ ಪ್ರತಿಕ್ರಿಯೆಗಳು ಇವೆ. ಅಂಡರ್‌ಸನ್ (1962), ಷಣ್ಮುಗನ್ ಪಿಳ್ಳೈ (1965a), ರಾಮಾನುಜಂ (1968), ಏಸುದಾಸ್ (1975), ತಮಿಳು ಸಾಮಾಜಿಕ ಪ್ರಭೇದಗಳ ಬಗೆಗಿನ ಅಧ್ಯಯನಗಳಲ್ಲಿ ಅಂಡರ್‌ಸನ್ (1962) ರವರು ಮಧ್ಯಮ ಜಾತಿಗಳಲ್ಲಿ ಭಾಷಿಕ ವ್ಯತ್ಯಾಸ ಹೆಚ್ಚು ಇರುವುದನ್ನು ಗುರುತಿಸಿದ್ದಾರೆ. ಪಿಳ್ಳೈ (1965a) ರವರು ಕೆಳವರ್ಗದ ಜಾತಿಗಳ ಬಗೆಗಿನ ಅಧ್ಯಯನದಲ್ಲಿ ಕನ್ಯಾಕುಮಾರಿಯ ಬೆಸ್ತರಲ್ಲಿನ ನುಡಿಪಲ್ಲಟ ಇರುವುದನ್ನು ಗಮನಿಸಿರುವುದು ಇವರ ಅಧ್ಯಯನದ ಮಹತ್ವವಾಗಿದೆ. ಜಾತಿಯ ಶ್ರೇಣೀಕೃತತೆಗೆ ಪ್ರತಿಷ್ಠೆ ಮತ್ತು ರಾಜಕಾರಣ ಕಾರಣವೇ ಹೊರತು ಆರ್ಥಿಕ, ಶೈಕ್ಷಣಿಕ ಅಂಶಗಳಲ್ಲ ಎಂದಿದ್ದಾರೆ. ಆದರೆ ಆರ್ಥಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದಿರುವ ಕೆಳ ಜಾತಿಗಳು ಮುಂದುವರೆದ ಮೇಲ್‌ಜಾತಿಗಳೂ ಇಬ್ಬರೂ ಕೂಡ ಬ್ರಾಹ್ಮಣೇತರ ಉನ್ನತ ಪ್ರಭೇದಕ್ಕೆ ಪಲ್ಲಟಗೊಳ್ಳುತ್ತಾರೆ. ಇದಕ್ಕೆ ಸರಿಯಾದ ಅಂಕಿ - ಅಂಶಗಳು ಅಗತ್ಯವಿದೆ ಎಂದು ಶಫಿರೋ ಮತ್ತು ಶಿಫ್‌ಮನ್ (1981)ರವರು ಪ್ರತಿಕ್ರಿಯಿಸಿದ್ದಾರೆ. ಏಸುದಾಸ್ (1975) ರವರು ಪ್ರಾದೇಶಿಕ ಭಿನ್ನತೆಯ ಜಾತಿ ಪ್ರಭೇದಗಳಲ್ಲಿ ವಯಸ್ಸು ಆಧಾರಿತ ಬದಲಾವಣೆಯನ್ನು ಗುರುತಿಸುತ್ತಾರೆ. ಶಿಫ್‌ಮನ್ (1979) ರವರು ತಮಿಳು - ಮಲೆಯಾಳಂ ಭಾಷಾಗಡಿಗಳ ಹತ್ತಿರ ಮಾತನಾಡುವಾಗ ವಯಸ್ಸು, ಜಾತಿ, ಮದುವೆಯ ಸಂಬಂಧಗಳಿಂದಾಗಿ ಜಾತಿ ಪ್ರಭೇದಗಳಲ್ಲಿ ಬದಲಾವಣೆವುಂಟು ಮಾಡುತ್ತದೆ ಎನ್ನುವುದನ್ನು ತೋರಿಸಿದ್ದಾರೆ. ರಾಮಾನುಜಂ (1968) ರವರು ಬ್ರಾಹ್ಮಣ ಮತ್ತು ಬ್ರಾಹ್ಮಣೇತರ ಪ್ರಭೇದಗಳು ಚಾರಿತ್ರಿಕವಾಗಿ ಹೇಗೆ ಬದಲಾಗಿದೆ ಎನ್ನುವುದನ್ನು ಹೇಳಿದ್ದರೆ. ಬ್ರೈಟ್ ಮತ್ತು ರಾಮಾನುಜಂ (1962) ರವರು ತಮಿಳು - ತುಳು ಜಾತಿ ಪ್ರಭೇದಗಳಲ್ಲಿನ ಭಾಷಾ ಬದಲಾವಣೆ ಸಾಕ್ಷರತೆಯಲ್ಲಿ ಯಾವ ರೀತಿ ಮುಖ್ಯ ಪಾತ್ರ ವಹಿಸುತ್ತದೆ ಎಂಬುದು ಇವರ ಮುಖ್ಯ ಅಧ್ಯಯನ.

ಮೇಲ್‌ಜಾತಿಯ ಪ್ರಭೇದಗಳಲ್ಲಿ ಭಾಷಿಕ ಬದಲಾವಣೆಗಳು ಪ್ರಜ್ಞಾಪೂರ್ವಕವಾಗಿ ಆದರೆ, ಅಪ್ರಜ್ಞಾಪೂರ್ವಕ ಬದಲಾವಣೆಗಳು ಕೆಳಜಾತಿಗಳಲ್ಲಾಗುತ್ತವೆ ಎಂಬ ಸಂಗತಿಗಳನ್ನು ತಿಳಿಸಿದ್ದಾರೆ.

ಮಾಕರ್‌ಮಾಕ್ (1968) ರವರು ಧಾರವಾಡ ಕನ್ನಡದಲ್ಲಿ ವೃತ್ತಿ ಮತ್ತು ವಾಸಸ್ಥಳದ ಆಧಾರದ ಮೇಲೆ ಭಾಷಾ ಪ್ರಭೇದವನ್ನು ಗುರುತಿಸುವುದಕ್ಕೆ ಪ್ರಯತ್ನಪಟ್ಟಿದ್ದಾರೆ. ಇದಕ್ಕೆ ಪಂಡಿತ್ (1967), ಪಟ್ನಾಯಕ್ (1975), ಇವರುಗಳು ಪ್ರತಿಕ್ರಿಯಿಸುತ್ತ ಸಾಮಾಜಿಕ ಸಂದರ್ಭಗಳು ಬದಲಾಗುತ್ತಿದ್ದಂತೆ ಭಾಷಾ ಪ್ರಭೇದಗಳು ಬದಲಾಗುತ್ತಿರುತ್ತದೆ ಎನ್ನುವುದನ್ನು ನಗರ ಮತ್ತು ಗ್ರಾಮೀಣ ಪರಿಸರಗಳನ್ನು ತೆಗೆದುಕೊಂಡು ವಿಮರ್ಶಿಸಿದ್ದಾರೆ. ಬರ್ನ್‌ಸ್ಟನ್ (1975) ಅವರು ಜಾತಿ ಮತ್ತು ಶಿಕ್ಷಣ ಭಾಷಿಕ ಬದಲಾವಣೆಗೆ ಕಾರಣವಾಗುವ ಅಂಶಗಳನ್ನು ಹೇಳಿದ್ದಾರೆ. ಜ್ಞಾನಸುಂದರನ್ ಮತ್ತು ರಂಗನ್ (1977) ರವರು ವಿಲಿಯಂ ಲೆಬೋವ್‌ನ ಭಿನ್ನತೆಯ ಸಿದ್ಧಾಂತವನ್ನು ಆಧಾರವಾಗಿಟ್ಟುಕೊಂಡು ಮೈಸೂರಿನಲ್ಲಿರುವ ವಿಭಿನ್ನ ತಮಿಳು ಗುಂಪುಗಳು ಮಾತನಾಡುವ ತಮಿಳಿನಲ್ಲಿ, ಮೈಸೂರು ತಮಿಳಿನಲ್ಲಿ ಕನ್ನಡದ ಪ್ರಭಾವವಿರುವುದನ್ನು, ತಮಿಳುನಾಡು ತಮಿಳನ್ನು, ಮೈಸೂರು ತಮಿಳು ಎಂದೇ ಗುರುತಿಸಿಕೊಂಡು ಅಧ್ಯಯನ ಮಾಡಿದ್ದಾರೆ. ಇದು ವಿವರಣಾತ್ಮಕ ಮಾದರಿಯಾಗಿದೆ.

ಹೀಗೆ ಮೇಲೆ ದಾಖಲಿಸಿದ ಎಲ್ಲಾ ಅಧ್ಯಯನಗಳಲ್ಲಿ ಜಾತಿ ಸಂಪೂರ್ಣವಾಗಿ ಭಾಷಾ ಭಿನ್ನತೆಯನ್ನು ಉಂಟುಮಾಡುತ್ತದೆ ಎಂದು ನೋಡಲಾಗಿದೆ. "ಸಂವಹನ ಸಾಂದ್ರತೆ ಕಡಿಮೆ ಇದ್ದರೆ ಭಿನ್ನತೆಗಳು ಜಾಸ್ತಿ, ಸಂವಹನ ಸಾಂದ್ರತೆ ಹೆಚ್ಚಿದ್ದರೆ ಭಿನ್ನತೆಗಳು ಕಡಿಮೆ ಇರುತ್ತದೆಂಬ" ಪಶ್ಚಿಮದ ವಿಚಾರ ಭಾರತದ ಸಂದರ್ಭದಲ್ಲಿ ಸುಳ್ಳಾಗುತ್ತದೆ. "ಎಲ್ಲಿ ಸಾಮಾಜಿಕ ಭಿನ್ನತೆಗಳನ್ನು ಉಳಿಸಿಕೊಳ್ಳಲು ಭಾಷಿಕರು ಇಷ್ಟಪಡುತ್ತಾರೋ ಅಲ್ಲಿ ಭಾಷಿಕ ಭಿನ್ನತೆಗಳೂ ಉಳಿದುಕೊಳ್ಳುತ್ತವೆ" ಎನ್ನುತ್ತಾ ಹೊಸ ಸೈದ್ಧಾಂತಿಕ ಚೌಕಟ್ಟನ್ನು ಈ ಅಧ್ಯಯನಗಳಿಗೆ ಹುಡುಕಬೇಕಿದೆ. ಸೈದ್ಧಾಂತಿಕ ಚೌಕಟ್ಟು ಇಲ್ಲದ ಸಂದರ್ಭದಲ್ಲಿ ಬಹುಪಾಲು ಜಾತಿ ಪ್ರಭೇದಗಳ ಬಗೆಗೆ ಅಧ್ಯಯನಗಳು ಆಗಿರುವಂಥದ್ದು ಎಂದು ಗುಂಫರ್ಜ್ ಹೇಳಿದ್ದಾರೆ. ಆದ್ದರಿಂದ ಭಿನ್ನತೆಯ ಸಿದ್ಧಾಂತವನ್ನು ಲೆಬೋವ್ ಮುಂತಾದ ಭಾಷಾಶಾಸ್ತ್ರಜ್ಞರ ಸಿದ್ಧಾಂತಗಳನ್ನು ಭಾರತದ ಸಂದರ್ಭಕ್ಕೆ ಅನ್ವಯಿಸಬಹುದೇನೋ ಎನ್ನುವ ಭಾಷಾ ಶಾಸ್ತ್ರಜ್ಞರ ಪ್ರಶ್ನೆಗಳಿಗೆ ಉತ್ತರಗಳು ಅಷ್ಟೊಂದು ಸರಳವಾಗಿಲ್ಲ. ಏಕೆಂದರೆ ಭಾರತದ ಸಂದರ್ಭ ಪಶ್ಚಿಮದ ಭಾಷಿಕ ಸಂದರ್ಭಗಳಿಗಿಂತ ಭಿನ್ನವಾಗಿರುವಂಥದ್ದಾದರಿಂದ ಭಾಷಾ ಭಿನ್ನತೆಗೆ ಕಾರಣವನ್ನು ಕುರಿತು ಅಧ್ಯಯನವನ್ನು ಮಾಡುವಾಗ ಇಲ್ಲಿನ ಸಂದರ್ಭಕ್ಕೆ ತಕ್ಕಂತಹ ಸೈದ್ಧಾಂತಿಕ ಚೌಕಟ್ಟನ್ನು ಅಧ್ಯಯನಗಳಿಗೆ ಅಳವಡಿಸಿಕೊಳ್ಳುವ ಅಗತ್ಯವಿದೆ. ಈ ನಿಟ್ಟಿನಲ್ಲೇ ಗುಂಫರ್ಜ್ (1958-44) ಭಾಷಾ ಪ್ರಭೇದಗಳ ಭಿನ್ನತೆಗಳು ಮತ್ತು ಸಾಮಾಜಿಕ ಶ್ರೇಣೀಕೃತ ವ್ಯವಸ್ಥೆಯಲ್ಲಿ ಭಾಷಾ ಗುಂಪುಗಳಿಗೂ ಅವರ ಧಾರ್ಮಿಕ ಶುದ್ಧ ಅಶುದ್ಧತೆಯ ಪರಿಕಲ್ಪನೆ, ವೃತ್ತಿ, ಸ್ನೇಹ ಸಂಬಂಧಗಳು, ಮಕ್ಕಳ ಆಟದ ಗುಂಪುಗಳು ಮತ್ತು

ಜಾತಿ ಇವೆಲ್ಲವೂ ಕಾರಣವಾಗುವ ಅಂಶಗಳನ್ನು ಒಂದೇ ಹಳ್ಳಿಯಲ್ಲಿ ಆರು ರೀತಿಯ ವಿಭಿನ್ನ ಭಾಷೆಯನ್ನು ಗುರುತಿಸುವುದರ ಮೂಲಕ ತೋರಿಸಿದ್ದಾರೆ.

ಪಶ್ಚಿಮದ ಸಂದರ್ಭದಲ್ಲಿ ಸಮಾಜೋಭಾಷಿಕ ಹಿನ್ನೆಲೆಯಲ್ಲಿ ನಡೆದಿರುವ ಹಲವು ಅಧ್ಯಯನಗಳಲ್ಲಿ ಮುಖ್ಯವಾಗಿ ವರ್ಗಗಳಲ್ಲಿ ಆಗಿರುವ ಭಾಷಿಕ ವ್ಯತ್ಯಾಸಗಳನ್ನು ಗುರುತಿಸಲಾಗಿದೆ. ಆದರೆ ಭಾರತದ ಸಂದರ್ಭದಲ್ಲಿನ ಶ್ರೇಣೀಕೃತ ವ್ಯವಸ್ಥೆಯಲ್ಲಿ ಜಾತಿಯೇ ಹೆಚ್ಚಿನ ಸಂದರ್ಭಗಳ ಅಧ್ಯಯನದ ವಸ್ತುವಾಗಿದೆ. ಜಾತಿಯ ಏಣಿ-ಶ್ರೇಣಿ ಕ್ರಮವು ಸದಾಕಾಲದಲ್ಲಿಯೂ ಒಂದೇ ಪ್ರಕಾರವಾಗಿರುತ್ತದೆ ಎನ್ನುವಂತಿಲ್ಲ. ಇತ್ತೀಚಿನ ಸಾಮಾಜಿಕ ಮತ್ತು ರಾಜಕೀಯ ಜಾಗೃತಿಯಿಂದಾಗಿ ಜಾತಿಗಳ ಮತ್ತು ಬುಡಕಟ್ಟುಗಳ ಏಣಿ ಶ್ರೇಣಿ ಕ್ರಮದಲ್ಲಿ ಬದಲಾವಣೆಗಳಾಗುತ್ತಿವೆ. ಪ್ರತಿಯೊಂದು ಜಾತಿ-ಉಪಜಾತಿ, ಬುಡಕಟ್ಟುಗಳಿಗೆ ತಮ್ಮದೇ ಆದ ಸ್ವಭಾಷೆ-ಭಾಷಾ ಪ್ರಭೇದಗಳು-ಪ್ರಾದೇಶಿಕ ಭಾಷೆಗಳಿವೆ. ಜಾತಿಯ ಏಣಿ-ಶ್ರೇಣಿ ಕ್ರಮದಲ್ಲಾಗುತ್ತಿರುವ ಬದಲಾವಣೆಗಳಿಂದಾಗಿ ಅನೇಕ ಜಾತಿಗಳಲ್ಲಿನ ಭಾಷಿಕರು ಕುಲಕಸುಬುಗಳನ್ನು ತೊರೆದು ಇತರ ವೃತ್ತಿಗಳಿಗೆ ಪಲ್ಲಟವಾಗಿದ್ದಾರೆ. ಅಲ್ಲದೆ ಇತರ ಧರ್ಮಗಳಿಗೂ ಪಲ್ಲಟಗೊಂಡಿದ್ದಾರೆ. ಈ ರೀತಿಯ ಪಲ್ಲಟಗಳು ನಡೆಯುವ ಸಂದರ್ಭಗಳಲ್ಲಿ ಸ್ವಭಾಷೆಗಳನ್ನು ಮಾತನಾಡುವ ಅನೇಕ ಭಾಷಿಕರು ಇತರೆ ವೃತ್ತಿ ಮತ್ತು ಧರ್ಮಗಳಿಗೆ ಪಲ್ಲಟ ಹೊಂದಿದಾಗ ಭಾಷಾಪಲ್ಲಟಗಳೂ ಸಹ ಭಾಷಿಕರಲ್ಲಿ ಉಂಟಾಗಿವೆಯೆ ಎನ್ನುವ ಪ್ರಶ್ನೆಗಳು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಹುಟ್ಟಿಕೊಂಡಿದ್ದರಿಂದ ಜಾತಿಗಳನ್ನು ಆಧಾರವಾಗಿಟ್ಟುಕೊಂಡು ವಿವರಿಸಲು ಪ್ರಯತ್ನಿಸಲಾಗಿದೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ದೊರೆತ ಮಾಹಿತಿಯಲ್ಲಿನ ಹಲವು ಜಾತಿಗಳನ್ನು ಈ ಅಧ್ಯಯನದ ವ್ಯಾಪ್ತಿಗೆ ತೆಗೆದುಕೊಳ್ಳಲಾಗಿದೆ.

ಯಾವ ಯಾವ ಜಾತಿಗಳಲ್ಲಿ ದ್ವಿಭಾಷಿಕತೆಯ ಅನಿವಾರ್ಯ - ಅವಶ್ಯಕತೆಗಳು ಹೆಚ್ಚಾಗಿ ಕಂಡುಬರುತ್ತಿವೆ? ಕನ್ನಡ ಮತ್ತು ತೆಲುಗು ಏಕ ಭಾಷಿಕರು ಯಾವ ಜಾತಿಗಳಲ್ಲಿ, ಯಾರಲ್ಲಿ ಹೆಚ್ಚು ಕಂಡುಬರುತ್ತಾರೆ? ಇದಕ್ಕೆ ಕಾರಣಗಳೇನು? ಯಾವ ಜಾತಿಗಳಲ್ಲಿ ವೃತ್ತಿಪಲ್ಲಟಗಳು ಮತ್ತು ಇತರೆ ಧರ್ಮಗಳಿಗೆ ಪಲ್ಲಟಗಳು ಉಂಟಾಗಿವೆ? ಹೀಗೆ ಪಲ್ಲಟಗಳಾಗುವ ಸಂದರ್ಭಗಳಲ್ಲಿ ಭಾಷಾ ಪಲ್ಲಟಗಳು ಉಂಟಾಗಿವೆಯೇ? ಅಥವಾ ಭಾಷಾ ಸಂಗೋಪನೆಯ ಸಂದರ್ಭಗಳು ಕಂಡುಬರುತ್ತಿವೆಯೇ? ಜಾತಿಗಳಲ್ಲಿನ ದ್ವಿಭಾಷಿಕರಲ್ಲಿ ಲಿಂಗಾಧಾರಿತ ಭಿನ್ನತೆಗಳು ಕಂಡುಬರುತ್ತಿವೆಯೇ? ಇದ್ದರೆ ಅವುಗಳಿಗೆ ಕಾರಣಗಳೇನು? ಯಾವ ಅಂಶಗಳು ಮುಖ್ಯವಾಗಿ ಸ್ವಭಾಷೆಗಳನ್ನು ಉಳಿಸಿಕೊಳ್ಳುವಲ್ಲಿ ಮತ್ತು ಪಲ್ಲಟಗೊಳ್ಳುವಲ್ಲಿ ಕಾರಣಗಳಾಗಿವೆ? ಜಾತಿಗಳಲ್ಲಿ ತಲೆಮಾರುಗಳ ಅಂತರದಲ್ಲಿ ಆಗುತ್ತಿರುವ ಬದಲಾವಣೆಗಳೇನು? ಅಣು ಕುಟುಂಬ, ಅವಿಭಕ್ತ ಕುಟುಂಬಗಳಿಂದಾಗಿ ಭಾಷೆಯಲ್ಲಿ ಬದಲಾವಣೆ ಅಥವಾ ವ್ಯತ್ಯಾಸಗಳು ಕಂಡುಬರುತ್ತಿವೆಯೇ? ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿರುವ ಭಾಷಿಕರಲ್ಲಿ ಯಾವ ರೀತಿಯ ಭಾಷಾ ಭಿನ್ನತೆಗಳು ಕಂಡುಬರುತ್ತಿವೆ?

ಇತ್ಯಾದಿ ಹಲವು ಸಂಶೋಧನ ಪ್ರಶ್ನೆಗಳಿಗೆ ಈ ಅಧ್ಯಯನದ ಕ್ಷೇತ್ರಕಾರ್ಯದಲ್ಲಿ ದೊರೆತ ಮಾಹಿತಿಯನ್ನು ಆಧಾರವಾಗಿಟ್ಟುಕೊಂಡು ಉತ್ತರಗಳನ್ನು ಹುಡುಕಲು ಪ್ರಯತ್ನಿಸಲಾಗಿದೆ.

ಈ ಅಧ್ಯಾಯವನ್ನು ಕಟ್ಟುವ ಸಂದರ್ಭದಲ್ಲಿ ಪ್ರತಿಯೊಂದು ಜಾತಿಗಳ ಬಗೆಗೆ ಪ್ರಾಸ್ತಾವಿಕವಾಗಿ ಕೆಲವು ಮಾಹಿತಿಗಳನ್ನು ಹೇಳುವಾಗ ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಭಾಗ - 2 ಮತ್ತು ಜನಸಮುದಾಯ ಸಂಪುಟವನ್ನು ಆಧಾರವಾಗಿಟ್ಟುಕೊಳ್ಳಲಾಗಿದೆ. ಮಿಕ್ಕಂತೆ ಕ್ಷೇತ್ರಕಾರ್ಯದಲ್ಲಿನ ದತ್ತ ಒಡ್ಡಿದ ಸವಾಲುಗಳಿಗೆ ಉತ್ತರಗಳ ಹುಡುಕಾಟದ ಪ್ರಯತ್ನವನ್ನು ಮಾಡಲಾಗಿದೆ. ಕ್ಷೇತ್ರಕಾರ್ಯದಲ್ಲಿ ದೊರೆತ ದ್ವಿಭಾಷಿಕರ ಮತ್ತು ಏಕಭಾಷಿಕರ ಬಗೆಗಿನ ಮಾಹಿತಿಯ ಅಂಕಿ - ಅಂಶಗಳನ್ನು ಆಧರಿಸಿ ಸಮಾಜದಲ್ಲಿ ದ್ವಿಭಾಷಿಕತೆಯ ಸಂರಚನೆಯ ಸ್ವರೂಪವನ್ನು ತಿಳಿಯಲು ಪ್ರಯತ್ನಿಸಲಾಗಿದೆ. ಕ್ಷೇತ್ರಕಾರ್ಯದಲ್ಲಿ ದೊರೆತ ಮಾಹಿತಿಯನ್ನು ಆಧರಿಸಿದ ಕೋಷ್ಟಕವನ್ನು ಸಿದ್ಧಪಡಿಸಲಾಗಿದೆ.

| | |
|---|---|
| ಒಟ್ಟು ದ್ವಿಭಾಷಿಕರು ಶೇಕಡಾವಾರುಗಳಲ್ಲಿ | **62.8** |
| ಪುರುಷರು | 65.8 |
| ಮಹಿಳೆಯರು | 59.4 |
| ಒಟ್ಟು ಏಕಭಾಷಿಕರು | 37.2 |
| ಪುರುಷರು | 34.0 |
| ಮಹಿಳೆಯರು | 40.2 |

| ಭಾಷಿಕರು ಶೇಕಡಾವಾರುಗಳಲ್ಲಿ | ಒಟ್ಟು | ಪುರುಷರು | ಮಹಿಳೆಯರು |
|---|---|---|---|
| ಒಟ್ಟು ಕನ್ನಡ - ತೆಲುಗು ದ್ವಿಭಾಷಿಕರು | 24.9 | 28.4 | 21.3 |
| ಒಟ್ಟು ತೆಲುಗು - ಕನ್ನಡ ದ್ವಿಭಾಷಿಕರು | 37.9 | 37.4 | 36.4 |
| ಕನ್ನಡ ಏಕಭಾಷಿಕರು | 29.7 | 28.9 | 30.6 |
| ತೆಲುಗು ಏಕಭಾಷಿಕರು | 7.4 | 5.1 | 9.6 |

# ನಕ್ಷೆ-1
## ಒಟ್ಟು ಭಾಷಿಕರು



ಮೇಲಿನ ಅಂಕಿ - ಅಂಶಗಳಲ್ಲಿ ಒಟ್ಟು ದ್ವಿಭಾಷಿಕತೆಯು ಪ್ರಮಾಣದಲ್ಲಿ ಮಹಿಳೆಯರಿಗಿಂತ ಪುರುಷರೆ ಹೆಚ್ಚು ದ್ವಿಭಾಷಿಕರಾಗಿರುವ ಪ್ರಮಾಣ ಕಾಣುತ್ತಿದೆ. ಅದಕ್ಕೆ ವಿರುದ್ಧವಾಗಿ ಒಟ್ಟು ಏಕಭಾಷಿಕರ ಪ್ರಮಾಣದಲ್ಲಿ ಪುರುಷರಿಗಿಂತ ಮಹಿಳೆಯರು ಏಕಭಾಷಿಕರಾಗಿರುವುದು ಕಾಣುತ್ತದೆ. ಈ ಅಂಕಿ - ಅಂಶಗಳನ್ನು ಭಾಷಾವಾರು ಅಂಶಗಳಿಂದ ನೋಡಿದಾಗ ಒಟ್ಟು ಕನ್ನಡಿಗರು ತೆಲುಗು ಭಾಷೆಯನ್ನು ಕಲಿತು ದ್ವಿಭಾಷಿಕರಾಗುವುದಕ್ಕಿಂತ, ತೆಲುಗು ಭಾಷಿಕರು ಕನ್ನಡಿಗರಾಗಿರುವ ಪ್ರಮಾಣ ಹೆಚ್ಚಾಗಿ ಕಾಣುತ್ತಿದ್ದು, ಇದರಲ್ಲೂ ಲಿಂಗಾಧಾರಿತ ಭಿನ್ನತೆಗಳಿರುವುದು ಕಾಣಬಹುದಾಗಿದೆ. ಏಕಭಾಷಿಕರಲ್ಲೂ ಈ ಭಿನ್ನತೆ ಒಡೆದು ಕಾಣುವಂತಿದೆ. ಇದಕ್ಕೆ ಕಾರಣಗಳೇನಿರಬಹುದು? ಈ ರೀತಿಯ ಭಿನ್ನತೆಗಳನ್ನು ಗುರುತಿಸುವುದು ಹೇಗೆ? ಯಾವ - ಯಾವ ಕಾರಣಗಳಿಂದಾಗಿ ಈ ಭಿನ್ನತೆಗಳು ಉಂಟಾಗಿರಬಹುದು? ಎಂಬುದನ್ನು ತಿಳಿಯಲು ಜಾತಿಗಳನ್ನು ಆಧಾರವಾಗಿಟ್ಟುಕೊಂಡು ನೋಡಿದಾಗ ಪ್ರತಿಯೊಂದು ಜಾತಿಯಲ್ಲೂ ದ್ವಿಭಾಷಿಕತೆಯ ಸಂರಚನೆಯ ಸ್ವರೂಪದಲ್ಲಿ ಹಲವಾರು ಭಿನ್ನ ಅಂಶಗಳಿರುವುದು ಕಾಣಬಹುದಾಗಿದೆ.

**ಲಿಂಗಾಯತ**

ಈ ಸಮುದಾಯದವರು ರಾಜ್ಯದ ಎಲ್ಲೆಡೆಯಲ್ಲಿಯೂ ಕಂಡುಬರುತ್ತಾರೆ. ಇವರು ಕೃಷಿ, ವ್ಯಾಪಾರ, ವಾಣಿಜ್ಯಗಳಲ್ಲಿ ತೊಡಗಿದ್ದಾರೆ. ಇವರಲ್ಲಿ ಜಂಗಮ, ಪಂಚಮಸಾಲಿ, ಬಣಜಿಗ, ಸಾದರ, ಗೌಡರು, ನೊಣಬ, ರೆಡ್ಡಿ, ಲಿಂಗಾಯತ ಮುಂತಾದ ಹಲವಾರು ಪಂಗಡಗಳಿವೆ.

ಲಿಂಗಾಯತ ಕುಡ ಒಕ್ಕಲಿಗ, ಲಿಂಗಾಯತ ಕಮ್ಮಾರ, ಲಿಂಗಾಯತ ಗಾಣಿಗ, ರೆಡ್ಡಿ ಲಿಂಗಾಯತ, ಜಂಗಮ, ಬಣಜಿಗ ಲಿಂಗಾಯತ, ಬಣ್ಣಗಾರ ಲಿಂಗಾಯತ, ಮುಂತಾದ ಪಂಗಡಗಳನ್ನು ಬಳ್ಳಾರಿ ಜಿಲ್ಲೆಯಲ್ಲಿ ಕಾಣಬಹುದಾಗಿದೆ. ಇವರೆಲ್ಲರ ಮನೆಮಾತು ಕನ್ನಡವಾಗಿದ್ದು, ಬರವಣಿಗೆಯ ಭಾಷೆಯಾಗಿ ಕನ್ನಡವನ್ನು ಬಳಸುತ್ತಾರೆ. ಇವರಲ್ಲಿ ಬೆರಳೆಣಿಕೆಯಷ್ಟು ಜನರ ಮನೆಮಾತು ತೆಲುಗು. ಅದು ಆಂಧ್ರಪ್ರದೇಶದಿಂದ ಹಲವು ಕಾರಣಗಳಿಗಾಗಿ ವಲಸೆ ಬಂದಿರುವವರು, ನೌಕರಿಗಾಗಿ ವರ್ಗವಾಗಿ ಬಂದಿರುವವರು, ವೈವಾಹಿಕ ಸಂಬಂಧದಿಂದ ಬಂದಿರುವವರಲ್ಲಿ ಮಾತ್ರ ತೆಲುಗು ಭಾಷಿಕರಿರುವುದು ಈ ಜಾತಿಯಲ್ಲಿ ಕಾಣುತ್ತದೆ. ಉತ್ತರ ಕರ್ನಾಟಕದಲ್ಲಿ ಮುಖ್ಯವಾಗಿ ಈ ಜಾತಿಯವರೇ ಪೌರೋಹಿತ್ಯದ ಕಾರ್ಯಗಳನ್ನು ಹೆಚ್ಚಿನ ಸಂದರ್ಭಗಳಲ್ಲಿ ನಿರ್ವಹಿಸುತ್ತಿರುವುದರಿಂದ ಇತರೆ ಜಾತಿಯವರು ಇವರೊಂದಿಗೆ ವ್ಯವಹರಿಸುವುದು ಅವಶ್ಯವಿದೆ. ಈ ಜಾತಿಯಲ್ಲಿ ಹೆಚ್ಚು ಜನರು ಸಂಪ್ರದಾಯಶೀಲರಾಗಿದ್ದು, ಲಿಂಗಾಯತ ಧರ್ಮದ ಆಚಾರ ವಿಚಾರಗಳನ್ನು, ಬಸವಣ್ಣನವರ ತತ್ವಗಳನ್ನು ಪಾಲಿಸುವಂಥವರಾಗಿದ್ದಾರೆ. ಕೆಳವರ್ಗದ ಜಾತಿಯ ಜನರೊಂದಿಗೆ ಹೆಚ್ಚು ಸಾಮಾಜಿಕ ಸಂಪರ್ಕಗಳು ಇರುವಂತೆ ಕಾಣುತ್ತಿಲ್ಲ. ಬಳ್ಳಾರಿ ಪರಿಸರದಲ್ಲಿ ಲಿಂಗಾಯತ ಜಾತಿಯವರು ಹೆಚ್ಚು ಕೃಷಿ, ವ್ಯಾಪಾರ - ವಾಣಿಜ್ಯಗಳಲ್ಲಿ ಕಂಡುಬರುತ್ತಾರೆ. ಕೆಲವು ದೊಡ್ಡ - ದೊಡ್ಡ ಶಿಕ್ಷಣ

ಸಂಸ್ಥೆಗಳನ್ನು ಹೊಂದಿದವರಾಗಿದ್ದು, ರಾಜಕೀಯದಲ್ಲೂ ಪ್ರವೇಶಿಸಿದ್ದಾರೆ. ಇನ್ನು ಕೆಲವರು ಸರ್ಕಾರಿ, ಅರೆ ಸರ್ಕಾರಿ, ಖಾಸಗಿ ಕೆಲಸಗಳಲ್ಲಿ ಇರುವುದು ಕಾಣುತ್ತಿದೆ. ಒಂದೆಡೆ ಈ ಜಾತಿಯ ಜನರು ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಮತ್ತು ರಾಜಕೀಯವಾಗಿ ಮುಂದುವರೆದಿದ್ದರೆ, ಕೆಲವರು ಈ ಎಲ್ಲಾ ಕ್ಷೇತ್ರಗಳಲ್ಲೂ ಹಿಂದುಳಿದಿದ್ದಾರೆ. ಅನೇಕ ಕುಟುಂಬಗಳಲ್ಲಿ ಬಡತನವಿರುವುದೂ ಕಾಣುತ್ತಿದೆ. ಬಳ್ಳಾರಿ ಪರಿಸರದಲ್ಲಿ ಪುರುಷರು ಶಿಕ್ಷಣ ಮತ್ತು ಉದ್ಯೋಗಗಳನ್ನು ಹೆಚ್ಚು ಪಡೆದಿರುವಾಗ ಹಾಗೆ ಮಹಿಳೆಯರಲ್ಲಿ ಶಿಕ್ಷಣ ಮತ್ತು ಉದ್ಯೋಗಗಳನ್ನು ಪಡೆದಿರುವ ಅಂಶಗಳು ಕಡಿಮೆ ಇರುವಂತಿದೆ. ಆದರೆ ಇತ್ತೀಚಿನ ಶೈಕ್ಷಣಿಕ ಸಂದರ್ಭಗಳನ್ನು ನೋಡಿದಾಗ ಶಿಕ್ಷಣವನ್ನು ಪಡೆಯುವ ಪ್ರಮಾಣ ಹೆಚ್ಚಾಗುತ್ತಿದೆ. ಬಳ್ಳಾರಿ ಜಿಲ್ಲೆಯಲ್ಲಿ ಲಿಂಗಾಯತ ಜಾತಿಯವರು ಅಧಿಕ ಪ್ರಮಾಣದಲ್ಲಿ ಕಂಡುಬಂದಿದ್ದು ಇವರ ಮನೆಮಾತು ಕನ್ನಡವೇ ಆಗಿರುವುದರಿಂದ ಬಳ್ಳಾರಿ ಪರಿಸರದಲ್ಲಿ ತೆಲುಗರು - ಕನ್ನಡವನ್ನು ಕಲಿತು ದ್ವಿಭಾಷಿಕರಾಗುವಲ್ಲಿ ಇವರ ಪಾತ್ರವೂ ಮುಖ್ಯವೆನಿಸುತ್ತದೆ. ಈ ನಿಟ್ಟಿನಲ್ಲಿ ವೀರಶೈವ ವಿದ್ಯಾವರ್ಧಕ ಸಂಸ್ಥೆಯ ಪಾತ್ರ ಗಮನಾರ್ಹವೆಂದರೆ ತಪ್ಪಾಗಲಾರದು. ಇವರಲ್ಲಿ ಇಂಗ್ಲಿಶ್ ಭಾಷೆಯನ್ನು ಕಲಿಯುವಲ್ಲಿ ಇರುವ ಆಸಕ್ತಿ ತೆಲುಗು ಕಲಿಯುವಲ್ಲಿಲ್ಲ. ಜೊತೆಗೆ ಎಷ್ಟೇ ವರ್ಷ ತೆಲುಗು ಭಾಷಿಕರ ಜೊತೆಯಲ್ಲೇ ಇವರು ಬದುಕು ಸಾಗಿಸುತ್ತಿದ್ದರೂ ಸಹ ತೆಲುಗು ಭಾಷೆಯನ್ನು ಕಲಿಯುವ ಆಸಕ್ತಿಯನ್ನು ತೋರುವುದಿಲ್ಲ. ಅದಕ್ಕೆ ಬದಲಾಗಿ ತೆಲುಗು ಭಾಷಿಕರೇ ಕನ್ನಡ ಕಲಿಯುವ ಸ್ನನ್ನಿವೇಶವನ್ನು, ಕನ್ನಡವನ್ನು ಗ್ರಹಿಸುವ ಸನ್ನಿವೇಶವನ್ನು ಇವರು ಉಂಟುಮಾಡುತ್ತಾರೆಂಬ ಅಂಶಗಳು ಕ್ಷೇತ್ರಕಾರ್ಯದಲ್ಲಿ ಸೂಕ್ಷ್ಮವಾಗಿ ಗಮನಿಸುವುದರಿಂದ ತಿಳಿದುಬಂದಿದೆ. ಕ್ಷೇತ್ರಕಾರ್ಯದಲ್ಲಿ ದೊರೆತ ಅಂಕಿ - ಅಂಶಗಳಿಂದ ಈ ಜಾತಿಯಲ್ಲಿನ ಭಾಷಿಕರ ವಿವರಗಳನ್ನು ನೋಡಿದಾಗ ಇನ್ನಷ್ಟು ಸಂಗತಿಗಳನ್ನು ತಿಳಿಯಬಹುದಾಗಿದೆ.

| | ಕನ್ನಡ ಏಕಭಾಷಿಕರು | ತೆಲುಗು ಏಕಭಾಷಿಕರು | ಕನ್ನಡ-ತೆಲುಗು ದ್ವಿಭಾಷಿಕರು | ತೆಲುಗು-ಕನ್ನಡ ದ್ವಿಭಾಷಿಕರು |
|---|---|---|---|---|
| ಒಟ್ಟು ಭಾಷಿಕರು | 89.8 | - | 8.1 | 2.9 |
| ಪುರುಷ | 87.2 | - | 7 | 1.9 |
| ಮಹಿಳೆ | 93.1 | - | 1.2 | 1 |

ನಕ್ಷೆ - 2

ಲಿಂಗಾಯತ ಜಾತಿಯಲ್ಲಿನ ಭಾಷಿಕರ ಅಂಕಿ - ಅಂಶಗಳು




ಒಟ್ಟು ಪುರುಷ ಮಹಿಳೆ

ಈ ಕೋಷ್ಟಕದಲ್ಲಿನ ಅಂಕಿ - ಅಂಶಗಳಲ್ಲಿ ಕಂಡುಬರುತ್ತಿರುವ ಅಂಶಗಳೆಂದರೆ ಒಟ್ಟು ಲಿಂಗಾಯತ ಭಾಷಿಕರಲ್ಲಿ ಪುರುಷರಿಗಿಂತ ಹೆಚ್ಚು ಮಹಿಳೆಯರಲ್ಲೇ ಏಕಭಾಷಿಕರಿರುವುದು ಕಾಣುತ್ತಿದೆ. ಆದರೆ ಇವರಲ್ಲಿ ತೆಲುಗು ಏಕ ಭಾಷಿಕರು ಕಾಣುತ್ತಿಲ್ಲ. ಕಾರಣ ತೆಲುಗನ್ನು ಮನೆಮಾತಾಗಿ ಮಾತನಾಡುವವರು ಬೆರಳೆಣಿಕೆಯಷ್ಟು ಪ್ರಮಾಣದಲ್ಲಿ ಇರುವುದರಿಂದ ಇವರಲ್ಲಿ ತೆಲುಗು ಏಕಭಾಷಿಕರಿಲ್ಲ. ಹಾಗೆಯೇ ಇವರಲ್ಲಿ ತೆಲುಗು ಭಾಷೆಯನ್ನು ಕಲಿತು ದ್ವಿಭಾಷಿಕರಾಗುವ ಪ್ರಮಾಣವನ್ನು ನೋಡಿದಾಗ ಒಟ್ಟು ಪ್ರಮಾಣ 8.1 % ಗಳಷ್ಟಿದ್ದರೆ, ಪುರುಷರು 7 % ಗಳು, ಮಹಿಳೆಯರು 1 % ಗಳಷ್ಟಿದ್ದಾರೆ. ಅದೇರೀತಿ ತೆಲುಗು ಮನೆಮಾತಾಗಿರುವವರು ಒಟ್ಟು 2.9 % ಗಳಷ್ಟಿದ್ದರೆ, 1.9 % ಗಳಷ್ಟು ಪುರುಷರು, 1 % ಗಳಷ್ಟು ಮಹಿಳೆಯರಿರುವುದು ಕಾಣುತ್ತಿವೆ. ಇದಕ್ಕೆ ಕಾರಣಗಳು ಈ ರೀತಿ ಇರಬಹುದು. ಸಮುದಾಯದ ಬಹುಸಂಖ್ಯಾತ ಜನರು ಕನ್ನಡ ಭಾಷಿಕರಾಗಿರುವುದು, ವೀರಶೈವ ವಿದ್ಯಾವರ್ಧಕ ಸಂಸ್ಥೆಗಳ ಮೂಲಕ ಹೆಚ್ಚು ಹೆಚ್ಚು ಕನ್ನಡವನ್ನು ಬಳಸುವ ಸನ್ನಿವೇಶಗಳನ್ನು ಉಂಟುಮಾಡುತ್ತಿರುವುದು. ಮಹಿಳೆಯರಲ್ಲಿ ಹೆಚ್ಚು ಉನ್ನತಮಟ್ಟದ ಶಿಕ್ಷಣದ ಸಂದರ್ಭಗಳಿಗೆ ಒಳಗಾಗದೆ ಇರುವುದು, ಸಾಮಾಜಿಕ ಸಂಪರ್ಕ ಇತರೆ ಜಾತಿಗಳೊಂದಿಗೆ ಹೊಂದುವುದಕ್ಕೆ ಅವರಲ್ಲಿರುವ ಸಾಂಪ್ರದಾಯಶೀಲತೆ ಅಡ್ಡಬರುತ್ತಿರಬಹುದು. ಇದರಿಂದ ಮಹಿಳೆಯರಲ್ಲಿ ಕನ್ನಡ ಏಕಭಾಷಿಕರಾಗಿರುವುದಲ್ಲದೆ, ಹೆಚ್ಚಿನ ತೆಲುಗು ದ್ವಿಭಾಷಿಕರಾಗಿಲ್ಲದೆ ಇರುವುದಕ್ಕೂ ಇದು ಕಾರಣವಾಗಿರಬಹುದು. ಕುಟುಂಬದ ಯಜಮಾನ್ಯ ಹೆಚ್ಚು ಪುರುಷರೇ ನಿರ್ವಹಿಸುತ್ತಿರುವದರಿಂದ ಮಹಿಳೆಯರಿಗೆ ಹೊರಗಡೆ ಅನ್ಯ ಭಾಷಿಕರೊಂದಿಗೆ ಬೆರೆಯುವ ಅವಕಾಶಗಳು ಇಲ್ಲದೆ ಇರಬಹುದು ಅಥವಾ ಬಹುಸಂಖ್ಯಾತ ಕನ್ನಡಿಗ ಸಂಬಂಧಿಗಳು ಹತ್ತಿರದ ಊರುಗಳಲ್ಲಿ ನೆಲೆಸಿರುವುದರಿಂದ ಅನ್ಯಭಾಷೆಯೊಂದು ಕಲಿಯುವ ಅವಕಾಶಗಳು ಇಲ್ಲದಿರಬಹುದು. ಆದರೆ ಪುರುಷರು ಹೆಚ್ಚು ವ್ಯಾಪಾರ, ವಾಣಿಜ್ಯ, ರಾಜಕೀಯದ ಸಂದರ್ಭಗಳಿಗೆ ಸಮಾಜದ ಇನ್ನಿತರೆ ಸಂದರ್ಭಗಳಿಗೆ ಒಳಗಾಗುವಾಗ ಭಾಷೆಯನ್ನು ಕಲಿಯುವ ಅವಶ್ಯಕತೆ ಇದೆ. ಆದ್ದರಿಂದ ಪುರುಷರು ದ್ವಿಭಾಷಿಕರಾಗಿರುವ ಪ್ರಮಾಣ ಇವರಲ್ಲಿ ಕಾಣುತ್ತಿದೆ. ಆದರೂ 87.2 % ಗಳಷ್ಟು ಏಕಭಾಷಿಕರು ಏಕೆ ಗಂಡಸರಲ್ಲಿ ಕಾಣುತ್ತಿದ್ದಾರೆ? ಕಾರಣವಿಷ್ಟೆ ಇವರಲ್ಲಿ ಪೌರೋಹಿತ್ಯ ಮುಂತಾದ ವೀರಶೈವ ಧರ್ಮದ ಆಚಾರ ವಿಚಾರಗಳನ್ನು ಮುಂದುವರೆಸಿಕೊಂಡು ಹೋಗುತ್ತಿರುವವರೂ, ಕೃಷಿಯನ್ನು ಅವಲಂಬಿಸಿರುವವರಲ್ಲಿ ಸಾಕ್ಷರತೆಯ ಪ್ರಮಾಣ ಕಡಿಮೆ ಇದ್ದು, ಕೆಳವರ್ಗ, ಕೆಳಮಧ್ಯಮವರ್ಗ, ಸ್ವಲ್ಪ ಮಟ್ಟಿಗೆ ಮಧ್ಯಮವರ್ಗದ ಗ್ರಾಮೀಣ ಮಟ್ಟದಲ್ಲಿನ ಭಾಷಿಕರಲ್ಲೆ ಏಕ ಭಾಷಿಕರು ಕಾಣುತ್ತಿದ್ದಾರೆ. ವರ್ಗವ್ಯತ್ಯಾಸದಿಂದ ನೋಡುವುದಾದರೆ ಇವರಲ್ಲಿ ಅಷ್ಟೊಂದು ಭಾಷಿಕ ವ್ಯತ್ಯಾಸವನ್ನು ಗುರುತಿಸಲು ಆಗುತ್ತಿಲ್ಲ. ಮೇಲ್‌ಮಧ್ಯಮ ಮತ್ತು ಉನ್ನತವರ್ಗದವರಲ್ಲಿ ತೆಲುಗನ್ನು ದ್ವಿತೀಯ ಭಾಷೆಯಾಗಿ ಕಲಿಯದೇ ಇರಬಹುದು. ಇಂಗ್ಲಿಶ್ ಭಾಷೆಯನ್ನು ಎರಡನೆಯ ಭಾಷೆಯಾಗಿ ಕಲಿತಿರಬಹುದು. ದ್ವಿಭಾಷಿಕರಾಗುವ ಅವಶ್ಯಕತೆ ಈ ಸಮುದಾಯದವರಲ್ಲಿ ಕಸುಬನ್ನು ಅವಲಂಬಿಸಿ ಇದ್ದಂತಿದೆ. ಮಹಿಳೆಯರಲ್ಲೂ ಸಹ ವ್ಯಾಪಾರದ ಸಂದರ್ಭಗಳಿಗೆ ಒಳಗಾದವರು ಮಾತ್ರವೇ ಹೆಚ್ಚಿನ ಸಂದರ್ಭಗಳಲ್ಲಿ ಆಂಶಿಕ ದ್ವಿಭಾಷಿಕರಾಗಿರುವುದನ್ನು ಕಾಣಲಾಗಿದೆ. ಇನ್ನು ವೈವಾಹಿಕ ಸಂಬಂಧದಿಂದ ಉಂಟಾದ ದ್ವಿಭಾಷಿಕತೆಯಲ್ಲಿ ವಿವಾಹಿತ

ಮಹಿಳೆಯರ ಭಾಷೆಗೆ ವಿವಾಹಿತ ಪುರುಷರು ಪಲ್ಲಟವಾಗಿರುವ ಸಂದರ್ಭಗಳು ಕೆಲವು ಸಂದರ್ಭಗಳಲ್ಲಿ ಕಾಣುತ್ತಿದೆ. ಆದರೆ ಪೋಷಕರು ಮಕ್ಕಳೊಂದಿಗೆ ಕನ್ನಡದಲ್ಲೆ ಮಾತನಾಡುವ ಸಂದರ್ಭಗಳು ಇರುವುದು ಕಾಣುತ್ತಿದೆ. ಒಟ್ಟಾರೆಯಾಗಿ ಹೇಳುವುದಾದರೆ ಈ ಸಮುದಾಯದ ಪುರುಷರಿಗೆ ತೆಲುಗು ಕಲಿತು ದ್ವಿಭಾಷಿಕರಾಗುವ ಅವಶ್ಯಕತೆ ಅಲ್ಪಮಟ್ಟಿಗೆ ಇದ್ದಂತೆ ಮಹಿಳೆಯರಿಗೆ ಇಲ್ಲ. ಆದರೆ ಮಹಿಳೆಯರಲ್ಲಿ ತೆಲುಗು ಭಾಷೆಯನ್ನು ಗ್ರಹಿಸುವ ಕೌಶಲಗಳು ಇರುವುದು ಕಾಣುತ್ತಿದೆ. ಮೌಖಿಕ ನೆಲೆಯಲ್ಲಿ ತೆಲುಗು ಭಾಷೆಯನ್ನು ಬಹಳ ಕಡಿಮೆ ಸಂದರ್ಭಗಳಲ್ಲಿ ಇವರು ಬಳಸುತ್ತಾರೆ. ಸಾಕ್ಷರತೆಯ ಕೌಶಲಗಳನ್ನು ಪಡೆದುಕೊಳ್ಳುವ ಹಂತದಲ್ಲೂ ಕೆಳವರ್ಗ, ಕೆಳಮಧ್ಯಮವರ್ಗ, ಮಧ್ಯಮವರ್ಗದ ಸ್ವಲ್ಪ ಜನರಲ್ಲಿ ಕನ್ನಡದಲ್ಲಿ ಸಾಕ್ಷರತೆಯ ಕೌಶಲಗಳು ಪಡೆದುಕೊಳ್ಳುತ್ತಿದ್ದರೆ, ಸ್ವಲ್ಪಮಟ್ಟಿಗಿನ ಮಧ್ಯಮ ವರ್ಗದವರು ಮೇಲ್‌ಮಧ್ಯಮ ಮತ್ತು ಉನ್ನತವರ್ಗದವರು ಇಂಗ್ಲಿಶ್ ಭಾಷೆಯಲ್ಲಿ ಸಾಕ್ಷರತೆಯ ಕೌಶಲಗಳನ್ನು ಪಡೆದುಕೊಳ್ಳುತ್ತಿರುವ ಸನ್ನಿವೇಶಗಳು ಶಿಕ್ಷಣ ಸಂದರ್ಭಗಳನ್ನು ಗಮನಿಸಿದಾಗ ಕಾಣಲಾಗಿದೆ.

**ಕುರುಬ**

ಹಾಲುಮತಸ್ಥರೆಂದು ಕರೆದುಕೊಳ್ಳುವ ಈ ಸಮುದಾಯದವರು ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲೂ ಕಂಡುಬರುತ್ತಾರೆ. ಇವರ ಸಾಂಪ್ರದಾಯಿಕ ವೃತ್ತಿ ಕುರಿ ಕಾಯುವುದು ಮತ್ತು ಕಂಬಳಿ ನೇಯುವುದು. ಹಲವರು ಕೃಷಿಯಲ್ಲಿ ತೊಡಗಿದ್ದರೆ, ಇನ್ನು ಕೆಲವರು ಸರ್ಕಾರಿ ಮತ್ತು ಖಾಸಗಿ ಸಂಸ್ಥೆಗಳಲ್ಲಿ ನೌಕರಿಯಲ್ಲಿದ್ದಾರೆ. ಇತ್ತೀಚೆಗೆ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯವಾಗಿ ಒಂದು ಪ್ರಭಾವಶಾಲಿ ಗುಂಪಾಗಿ ಬೆಳೆಯುತ್ತಿದ್ದಾರೆ. ಇವರ ಮನೆ ಮಾತು ಹಾಗೂ ಬರವಣಿಗೆಯ ಭಾಷೆಯಾಗಿ ಕನ್ನಡವನ್ನು ಬಳಸುತ್ತಾರೆ.

ಬಳ್ಳಾರಿ ಜಿಲ್ಲೆಯಲ್ಲಿ ಈ ಸಮುದಾಯದ ಜನರು ಹೆಚ್ಚು ಇರುವಂತೆ ಕಾಣಲಾಗಿದೆ. ಇವರಲ್ಲಿ ಹತ್ತಿಕಂಕಣ (ಹೊಸಕುರುಬ), ಉಣ್ಣೆ ಕಂಕಣ (ಹಳೆ ಕುರುಬ) ಎಂಬ ಎರಡು ಪಂಗಡಗಳನ್ನು ಹೊಂದಿದ್ದಾರೆ. ಹೆಚ್ಚಿನ ಸಂದರ್ಭಗಳಲ್ಲಿ ಈ ಸಮುದಾಯದವರ ಮುಖ್ಯ ಉದ್ಯೋಗ ಕೃಷಿ, ಜೊತೆಗೆ ವ್ಯಾಪಾರ, ಕಟ್ಟಡದ ಗುತ್ತಿಗೆ, ಇತ್ಯಾದಿ ಖಾಸಗಿ ಕೆಲಸಗಳನ್ನು ನಿರ್ವಹಿಸುತ್ತಿರುವುದಲ್ಲದೆ, ಸರ್ಕಾರಿ - ಅರೆಸರ್ಕಾರಿ ಕೆಲಸಗಳಲ್ಲಿಯೂ ತೊಡಗಿದ್ದಾರೆ. ಇತ್ತೀಚೆಗೆ ಉನ್ನತವಾದ ಸರ್ಕಾರಿ ಹುದ್ದೆಗಳಲ್ಲಿಯೂ ಕಾಣುತ್ತಾರೆ. ರಾಜಕೀಯವಾಗಿಯೂ ಹಲವೆಡೆಗಳಲ್ಲಿ ಪ್ರವೇಶಿಸಿದ್ದಾರೆ. ಈ ಜಾತಿಯ ಜನರು ಎಲ್ಲಾ ಜಾತಿಯ ಜನಾಂಗದೊಂದಿಗೆ ಸಾಮಾಜಿಕ ಸಂಪರ್ಕವನ್ನು ತಕ್ಕಮಟ್ಟಿಗೆ ಹೊಂದಿರುವವರಾಗಿದ್ದಾರೆ. ಆದರೆ ಕೆಲವು ಕಡೆಗಳಲ್ಲಿ ಮೇಲ್‌ಜಾತಿಯವರೊಂದಿಗೆ ಸಾಮಾಜಿಕ ಸಂಪರ್ಕವನ್ನು ಬೆಳೆಸುವಲ್ಲಿ ನಿಷೇಧಗಳಿವೆ ಎಂದು ಕೆಲವರ ಮಾಹಿತಿಯಿಂದ ತಿಳಿದುಬಂದಿದೆ. ಉಳಿದಂತೆ ಈ ಸಮುದಾಯದ ಜನರು ಕೆಳವರ್ಗದ ಜಾತಿಗಳ ಜೊತೆ ಸಾಮಾಜಿಕ ಸಂಪರ್ಕವನ್ನು ಬೆಳೆಸುವ ಪ್ರಮಾಣ ಕಡಿಮೆ ಇದ್ದಂತೆ ಕಾಣುತ್ತದೆ.

ಇವರು ಕೃಷಿಯನ್ನು ಆಧರಿಸಿರುವುದರಿಂದ ಹೆಚ್ಚು ಅವಿಭಕ್ತ ಕುಟುಂಬಗಳಲ್ಲಿ ನೆಲೆಸಿರುವುದು ಕಾಣುತ್ತಿದೆ. ಇವರೆಲ್ಲರ ಮನೆಮಾತು ಕನ್ನಡ. ಆಂಧ್ರದಿಂದ ವಲಸೆ ಬಂದಿರುವ ಕುರುಬ ಕುಟುಂಬದವರಲ್ಲಿ ಮಾತ್ರ ತೆಲುಗು ಮನೆಮಾತಾಗಿದೆ. ಅಲ್ಲದೆ ವಲಸಿಗ ಕುರುಬ ಕುಟುಂಬಗಳು ತಲೆಮಾರುಗಳಲ್ಲಿ ಕನ್ನಡಕ್ಕೆ ಪಲ್ಲಟವಾಗುತ್ತಿದ್ದಾರೆ. ಕನ್ನಡ ಏಕಭಾಷಿಕರು ಈ ಸಮುದಾಯದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಇರುವುದನ್ನು ಕಾಣಲಾಗಿದೆ. ಕಾರಣ ಈ ಸಮುದಾಯದಲ್ಲಿನ ಜನರು ಮುಖ್ಯವಾಗಿ ಕೃಷಿಯನ್ನು ಹೆಚ್ಚಿನ ಸಂದರ್ಭದಲ್ಲಿ ಅವಲಂಬಿಸಿರುವುದರಿಂದ ಇವರಲ್ಲಿ ಕನ್ನಡ ಏಕಭಾಷಿಕರು ಅಧಿಕ ಸಂಖ್ಯೆಯಲ್ಲಿ ಕಾಣುತ್ತಿದ್ದಾರೆ. ಕಡಿಮೆ ಸಾಕ್ಷರತೆಯ ಪ್ರಮಾಣ, ಸಾಮಾಜಿಕ ಸಂಪರ್ಕಗಳು ಕಡಿಮೆ ಇರುವುದರಿಂದಲೂ, ಜೊತೆಗೆ ನೆಲೆಸಿರುವ ಪರಿಸರದಲ್ಲಿ ತೆಲುಗು ಭಾಷೆಯನ್ನು ಕಲಿಯುವ ಒತ್ತಾಯವಾಗಲಿ, ಅವಶ್ಯಕತೆಯಾಗಲಿ ಹೆಚ್ಚಿನ ಸಂದರ್ಭಗಳಲ್ಲಿ ಇಲ್ಲದ ಕಾರಣ ಕನ್ನಡ ಏಕಭಾಷಿಕರಾಗಿದ್ದಾರೆ. ಎಷ್ಟೇ ವರ್ಷಗಳು ತೆಲುಗು ಕುಟುಂಬಗಳ ಜೊತೆಯಲ್ಲೆ ವಾಸಿಸುತ್ತಿದ್ದರೂ ತೆಲುಗು ಭಾಷೆಯನ್ನು ಕಲಿಯುವ ಆಸಕ್ತಿ ಇವರಲ್ಲಿ ಕಾಣುವುದಿಲ್ಲ. ಆದರೆ ತೆಲುಗು ಸಿನಿಮಾ, ಧಾರವಾಹಿ ಮುಂತಾದ ಕಾರ್ಯಕ್ರಮಗಳನ್ನು ನೋಡುವುದರ ಮೂಲಕ ತೆಲುಗು ಭಾಷೆಯನ್ನು ಗ್ರಹಿಕೆಯ ನೆಲೆಯಲ್ಲಿ ಪಡೆದುಕೊಂಡಿದ್ದಾರೆ. ಪುರುಷರಲ್ಲಿ ವ್ಯಾಪಾರ ಮಾಡುವ ಸಂದರ್ಭಗಳಲ್ಲಿ ಕಟ್ಟಡಗಳ ಗುತ್ತಿಗೆಯ ಕೆಲಸಗಳಲ್ಲಿ ಇನ್ನಿತರೆ ಕೆಲಸಗಳಿಗಾಗಿ ಅನ್ಯಭಾಷಿಕರಾದ ತೆಲುಗು ಜನರ ಬಳಿ ವ್ಯವಹರಿಸುವ ಸನ್ನಿವೇಶಗಳಲ್ಲಿ ಕ್ಷಣಿಕ ವ್ಯವಹಾರಕ್ಕಾಗಿ ತೆಲುಗಿಗೆ ಆಂಶಿಕ ಪಲ್ಲಟವನ್ನು ಹೊಂದುತ್ತಾರೆ. ಜೊತೆಗೆ ತೆಲುಗಿನಲ್ಲಿ ವ್ಯವಹರಿಸುವಷ್ಟು ಜ್ಞಾನವನ್ನು ಅಲ್ಪ ಪ್ರಮಾಣದಲ್ಲಿ ಪಡೆದಿದ್ದಾರೆ.

ಉತ್ತರ ಕರ್ನಾಟಕದ ಹಲವು ಭಾಗಗಳಲ್ಲಿ ಇನ್ನೂ ಸಾಂಪ್ರದಾಯಿಕ ವೃತ್ತಿಯನ್ನೆ ನಿರ್ವಹಿಸಿಕೊಂಡು ಹೋಗುತ್ತಿರುವುದು ಕಾಣುತ್ತಿದೆಯಾದರೂ ಬಹಳಷ್ಟು ಜನರು ಬೇರೆ ಬೇರೆ ವೃತ್ತಿಗಳಿಗೆ ಪಲ್ಲಟಗೊಂಡಿದ್ದಾರೆ. ಆಂಧ್ರ - ಕರ್ನಾಟಕದ ಗಡಿಭಾಗಗಳಲ್ಲಿ ನೆಲೆಸಿರುವ ಕುರುಬ ಸಮುದಾಯದಲ್ಲಿ ಹಲವರು ಕನ್ನಡ ತೆಲುಗು ದ್ವಿಭಾಷಿಕರಾಗಿರುವುದನ್ನು ಕಾಣಬಹುದು. ಇವರುಗಳಲ್ಲಿ ಹಲವು ಆವರಣಗಳಲ್ಲಿ ತೆಲುಗು ಭಾಷೆಯನ್ನು ಮಹಿಳೆಯರು ಹೆಚ್ಚಿನ ಸಂದರ್ಭದಲ್ಲಿ, ಪುರುಷರು ಕಡಿಮೆ ಸಂದರ್ಭಗಳಲ್ಲಿ ಬಳಸುತ್ತಿರುವಂತಿದೆ. ಪ್ರತಿಯೊಂದು ಪ್ರಾಂತ್ಯ ಹಿನ್ನೆಲೆಯ ಇತಿಹಾಸದಲ್ಲಿ ಪ್ರತಿಯೊಂದು ಸಮುದಾಯದ ಜನರು ಬಳಸುವ ಭಾಷೆಗಳ ನೆಲೆಗಳು ಲಿಂಗಾಧಾರಿತವಾಗಿ ಭಿನ್ನವಾಗಿರುವುದಕ್ಕೆ ಸಮಾಜೋಭಾಷಿಕ ಅಂಶಗಳು ಅನೇಕ ಸಂದರ್ಭಗಳಲ್ಲಿ ಕಾರಣವಾಗಿದೆ. ಜೊತೆಗೆ ಸುತ್ತ - ಮುತ್ತಲ ಪರಿಸರವೂ ಭಾಷೆಯ ಕಲಿಕೆ - ಬಳಕೆ - ಉಳಿಕೆಯಲ್ಲಿ ಪಾತ್ರವಹಿಸುತ್ತದೆ.

ಅಂಕಿ - ಅಂಶಗಳನ್ನು ಆಧರಿಸಿ ಈ ಸಮುದಾಯದ ಭಾಷಿಕರ ಬಗೆಗೆ ಹೇಳುವುದಾದರೆ ಒಟ್ಟು ಏಕಭಾಷಿಕರಲ್ಲಿ 85 % ಗಳಷ್ಟು ಪುರುಷರಲ್ಲಿಯೂ, 92.9 % ಗಳಷ್ಟು ಮಹಿಳೆಯರಲ್ಲಿಯೂ ಏಕಭಾಷಿಕರಿರುವುದು ಕಾಣುತ್ತಿದೆ. ಇವರಲ್ಲಿ ತೆಲುಗು ಏಕಭಾಷಿಕರು ಕಾಣುತ್ತಿಲ್ಲ. ಹಾಗೆಯೇ ಕನ್ನಡವನ್ನು ಮನೆಮಾತಾಗಿರುವವರು ತೆಲುಗು ಭಾಷೆಯನ್ನು

ಕಲಿತು ದ್ವಿಭಾಷಿಕರಾಗುವ ಪ್ರಮಾಣ ಒಟ್ಟು 6.6 % ಗಳಷ್ಟಿದ್ದರೆ, 4.5% ಗಳಷ್ಟು ಪುರುಷರಲ್ಲಿ, 2.5 % ಗಳಷ್ಟು ಮಹಿಳೆಯರಲ್ಲಿ ಕಾಣುತ್ತಿದೆ. ಹಾಗೆಯೇ ತೆಲುಗು ಮನೆಮಾತಾಗಿರುವವರಲ್ಲಿ 4.5 % ಗಳಷ್ಟಿದ್ದರೆ 4.5 % ಗಳಷ್ಟು ಪುರುಷರು, 4.5 % ಗಳಷ್ಟು ಮಹಿಳೆಯರು ದ್ವಿಭಾಷಿಕರಾಗಿರುವ ಪ್ರಮಾಣವು ಕಾಣುತ್ತಿದೆ.

| | ಕನ್ನಡ ಏಕಭಾಷಿಕರು | ತೆಲುಗು ಏಕಭಾಷಿಕರು | ಕನ್ನಡ-ತೆಲುಗು ದ್ವಿಭಾಷಿಕರು | ತೆಲುಗು-ಕನ್ನಡ ದ್ವಿಭಾಷಿಕರು |
|---|---|---|---|---|
| ಒಟ್ಟು ಭಾಷಿಕರು | 88.7 | - | 6.6 | 4.5 |
| ಪುರುಷ | 85.0 | - | 4.5 | 4.5 |
| ಮಹಿಳೆ | 92.9 | - | 2.5 | 4.5 |

ಇಲ್ಲಿಯೂ ಸಹ ಕನ್ನಡ ಏಕಭಾಷಿಕರಾಗಿರುವುದಕ್ಕೆ ತೆಲುಗು ಕಲಿಯುವ ಅವಶ್ಯಕತೆಗಳು ಹೆಚ್ಚು ಈ ಸಮುದಾಯದವರಿಗೆ ಇದ್ದಂತಿಲ್ಲ. ಕೃಷಿಯನ್ನು ಅವಲಂಬಿಸಿರುವವರು ಹೆಚ್ಚಾಗಿ ಅವಿಭಕ್ತ ಕುಟುಂಬಗಳಲ್ಲಿ ನೆಲೆಸಿರುವುದರಿಂದ ಕನ್ನಡವನ್ನು ಬಳಸುವ ಸಂದರ್ಭಗಳು ಹೆಚ್ಚು ಇವೆ. ಉನ್ನತ ಮಟ್ಟದ ಸಾಕ್ಷರತೆಯ ಕೌಶಲಗಳನ್ನು ಪಡೆಯದೆ ಇರುವುದರಿಂದಲೂ ಮಹಿಳೆಯರಲ್ಲಿ ಹೆಚ್ಚು ಏಕಭಾಷಿಕರಾಗಿರುವುದಕ್ಕೂ ಕಾರಣವಾಗಿರಬಹುದು. ಜೊತೆಗೆ ಸಾಮಾಜಿಕ ಸಂಪರ್ಕಕ್ಕೆ ಹೆಚ್ಚು ಒಳಗಾಗದೆ ಇರುವುದು. ಕುಟುಂಬದ ಯಜಮಾನ್ಯವನ್ನು ಪುರುಷರೇ ಹೆಚ್ಚು ನಿರ್ವಹಿಸುತ್ತಿರುವುದರಿಂದ ಮಹಿಳೆಯರಿಗೆ ಹೊರಗಿನ ಸಾಮಾಜಿಕ ಸಂಪರ್ಕಗಳು ಮಿತವಾಗಿರುತ್ತವೆ. ಆದ್ದರಿಂದ ಅನ್ಯಭಾಷೆಯನ್ನು ಕಲಿಯುವ ಪ್ರಸಂಗ ಬರುವುದಿಲ್ಲ. ಜೊತೆಗೆ ಅನ್ಯಭಾಷಿಕರು ಮಹಿಳೆಯರ ಬಳಿ ಮಾತನಾಡುವಾಗ ಅವರ ಭಾಷೆಯಲ್ಲೆ ಮಾತನಾಡುವುದರಿಂದಲೂ ತೆಲುಗು ಕಲಿಯುವ ಅವಶ್ಯಕತೆಗಳು ಕಡಿಮೆ ಪ್ರಮಾಣದಲ್ಲಿ ಇರುವುದರಿಂದ ಕನ್ನಡ ಏಕಭಾಷಿಕರಾಗಿ ಉಳಿದಿದ್ದಾರೆ. ಹಾಗೆಯೇ ತೆಲುಗು ದ್ವಿಭಾಷಿಕರ ಪ್ರಮಾಣವನ್ನು ನೋಡಿದಾಗ ಈ ಅಂಶಗಳು ಮುಖ್ಯವಾಗಿರುತ್ತದೆ. ಕಸಬುಗಳನ್ನು ಆಧರಿಸಿ ನೋಡಿದಾಗ, ಸಾಂಪ್ರದಾಯಿಕ ವೃತ್ತಿಯಿಂದ ಇತರೆ ವೃತ್ತಿಗಳಿಗೆ ಪಲ್ಲಟಗಳಾಗಿರುವವರಲ್ಲಿ ಬಳ್ಳಾರಿಯಂತಹ ನಗರ ಸಂದರ್ಭಗಳಲ್ಲಿ ತೆಲುಗನ್ನು ಕಲಿತು ದ್ವಿಭಾಷಿಕರಾಗುವ ಅವಕಾಶಗಳು ಹೆಚ್ಚು ಇವೆ. ವ್ಯಾಪಾರ ಸಂದರ್ಭಗಳಲ್ಲಿ ಕಟ್ಟಡದ ಗುತ್ತಿಗೆಯ ಕೆಲಸಗಳಲ್ಲಿ ಕೆಳವರ್ಗದ ತೆಲುಗು ಭಾಷಿಕರೊಡನೆ ವ್ಯವಹರಿಸುವಾಗ ಈ ಸಮುದಾಯದ ಪುರುಷರಿಗೆ ತೆಲುಗು ಕಲಿಯುವ ಅವಶ್ಯಕತೆಗಳಿವೆ. ಮಹಿಳೆಯರಿಗೆ ಈ ಅವಶ್ಯಕತೆಗಳು ಕಡಿಮೆ. ವೈವಾಹಿಕ ಸಂದರ್ಭಗಳಲ್ಲೂ ಸಹ ತೆಲುಗು ಭಾಷೆಯನ್ನು ಮಹಿಳೆಯರು ಕಲಿಯುವ ಸಂದರ್ಭ ಕಡಿಮೆಯಿದ್ದು, ಪುರುಷರೆ ವಿವಾಹಿತ ಮಹಿಳೆಯರ ಭಾಷೆಗೆ ವೈವಾಹಿಕ ಸಂದರ್ಭಗಳಲ್ಲಿ ಪಲ್ಲಟವಾಗಿರುವ

ಸಂದರ್ಭಗಳು ಕಾಣುತ್ತದೆ. ಇನ್ನು ಈ ಸಮುದಾಯದವರಲ್ಲಿ ತೆಲುಗು ಭಾಷೆಯನ್ನು ಮನೆಮಾತಾಗಿರುವವರು ಕನ್ನಡವನ್ನು ಕಲಿತು ದ್ವಿಭಾಷಿಕರಾದ ಪ್ರಮಾಣ ಮಹಿಳೆ ಮತ್ತು ಪುರುಷರಲ್ಲಿ ಸಮವಾಗಿದೆ. ಏಕೆಂದರೆ ಹಲವರು ಆಂಧ್ರದಿಂದ ಹಲವಾರು ಕಾರಣಗಳಿಗಾಗಿ ವಲಸೆ ಬಂದು ನೆಲೆಸಿರುವವರಿದ್ದಾರೆ. ಇವರಿಗೆ ಎರಡೂ ಭಾಷೆಗಳು ಮನೆಭಾಷೆಯೆ ಎನ್ನುವಂತೆ ಬಳಸುತ್ತಿದ್ದಾರೆ. ಇಂತಹ ಕುಟುಂಬಗಳು ಹೆಚ್ಚಾಗಿ ಖಾಸಗಿ ಉದ್ಯೋಗಗಳಲ್ಲಿ, ಸಣ್ಣಪುಟ್ಟ ಸ್ವಯಂ ಉದ್ಯೋಗಗಳಲ್ಲಿ ತೊಡಗಿಕೊಂಡಿರುವುದರಿಂದ ಕನ್ನಡವನ್ನು ಕಲಿತು ಬಳಸುವ ಅವಶ್ಯಕತೆ ಅನಿವಾರ್ಯಗಳಿವೆ. ವರ್ಗ ಕಲ್ಪನೆಯ ಆಧಾರದಿಂದ ನೋಡಿದಾಗ ಉನ್ನತವರ್ಗ ಮತ್ತು ಮೇಲ್‌ಮಧ್ಯಮ, ಮಧ್ಯಮ ವರ್ಗದವರು ಇಂಗ್ಲಿಶ್‌ನಲ್ಲಿ ಸಾಕ್ಷರತೆಯ ಕೌಶಲಗಳನ್ನು ಪಡೆದುಕೊಳ್ಳುತ್ತಿದ್ದರೆ, ಕೆಳವರ್ಗ, ಕೆಳಮಧ್ಯಮವರ್ಗದವರು ಮಧ್ಯಮವರ್ಗದ ಕೆಲವರು ಕನ್ನಡದಲ್ಲಿ ಸಾಕ್ಷರತೆಯ ಕೌಶಲಗಳನ್ನು ಪಡೆದುಕೊಳ್ಳುತ್ತಿದ್ದಾರೆ. ಇನ್ನು ಕೆಲವರಲ್ಲಿ ಕೆಳವರ್ಗದ ವಲಸಿಗರು ತೆಲುಗು ಭಾಷೆಯಲ್ಲಿ ಸಾಕ್ಷರತೆಯ ಕೌಶಲಗಳು ಪಡೆದುಕೊಳ್ಳುತ್ತಿರುವುದು ಅಲ್ಲಲ್ಲಿ ಬೆರಳೆಣಿಕೆಯಷ್ಟು ಪ್ರಮಾಣದಲ್ಲಿ ಕಾಣುತ್ತಿದೆ.



ನಕ್ಷೆ - 3
ಕುರುಬ ಜಾತಿಯಲ್ಲಿನ ಭಾಷಿಕರ ಅಂಕಿ-ಅಂಶಗಳು
ಜನಸಂಖ್ಯೆ ಶೇಕಡಾವಾರುಗಳಲ್ಲಿ
100
90
80
70
60
50
40
30
20
10
0
88.7
85
92.9
0 0 0
6.6
4.5
2.5
4.5 4.5 4.5
ಕ ಏ
ತೆ ಏ
ಕ-ತೆ ದ್ವಿ
ತೆ-ಕ ದ್ವಿ
ಭಾಷಿಕರು
ಒಟ್ಟು
ಪುರುಷ
ಮಹಿಳೆ

ಬ್ರಾಹ್ಮಣ

ಈ ಸಮುದಾಯಕ್ಕೆ ಸೇರಿದ ಜನರು ಕರ್ನಾಟಕದ ಎಲ್ಲಾ ಪ್ರದೇಶಗಳಲ್ಲೂ ಕಂಡುಬರುತ್ತಾರೆ. ಇವರಲ್ಲಿ ಹಲವಾರು ಪಂಗಡಗಳಿವೆ. ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಪಂಗಡಗಳು ಪ್ರಮುಖವಾದವು. ಇವುಗಳಲ್ಲಿ ಮುಖ್ಯವಾದವುಗಳೆಂದರೆ ಸ್ಮಾರ್ತ, ಮಾಧ್ವ, ಶ್ರೀ ವೈಷ್ಣವ, ಇವುಗಳೇ ಮುಂದೆ ಹಲವು ಉಪಜಾತಿಗಳಾಗಿವೆ. ಇವರಲ್ಲಿ ಕೆಲವರ ಸಾಂಪ್ರದಾಯಿಕ ವೃತ್ತಿ ಪೌರೋಹಿತ್ಯ, ಇತ್ತೀಚಿನ ವರ್ಷಗಳಲ್ಲಿ ವೈದಿಕರು ಕೂಡ ವಿವಿಧ ವೃತ್ತಿಗಳಿಗೆ ಪಲ್ಲಟಗೊಂಡಿದ್ದಾರೆ. ಹಿಂದೆ ಭೂಮಿಯ ಒಡೆಯರಾಗಿದ್ದ ಬ್ರಾಹ್ಮಣರಲ್ಲಿ ಹೆಚ್ಚಿನವರು ಈಗ ಹೋಟೆಲು ಉದ್ಯಮವನ್ನು ಒಳಗೊಂಡಂತೆ ವಿವಿಧ ಉದ್ಯೋಗಗಳನ್ನು ಮಾಡುತ್ತಿದ್ದಾರೆ. ಅನೇಕರು ಸರ್ಕಾರದ ಉನ್ನತ ಹುದ್ದೆಗಳಲ್ಲಿದ್ದಾರೆ. ಕೆಲವರು ಖಾಸಗಿ, ಸರ್ಕಾರಿ - ಅರೆ ಸರ್ಕಾರಿ ಹುದ್ದೆಗಳಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ. ಹೆಚ್ಚಿನವರು ವಿಜ್ಞಾನ - ತಂತ್ರಜ್ಞಾನದ ಕ್ಷೇತ್ರದಲ್ಲಿ ತೊಡಗಿದ್ದಾರೆ.

ಬಳ್ಳಾರಿ ಪರಿಸರದಲ್ಲಿ ಕಂಡುಬರುತ್ತಿರುವ ಬ್ರಾಹ್ಮಣರಲ್ಲಿ ಕೆಲವರು ಅನೇಕ ವರ್ಷಗಳ ಹಿಂದೆ ಆಂಧ್ರಪ್ರದೇಶದಿಂದ ಬಂದು ನೆಲೆಸಿದ್ದರೆ, ಇನ್ನು ಕೆಲವರು ಇಲ್ಲಿಯ ನಿವಾಸಿಗಳೇ ಆಗಿದ್ದಾರೆ. ಇವರಲ್ಲಿ ಕೃಷ್ಣನ ಪೂಜೆ ಮಾಡುವವರು ಕನ್ನಡ ಭಾಷಿಕರಾಗಿದ್ದರೆ, ಶಿವನ ಪೂಜೆ ಮಾಡುವವರು ತೆಲುಗು ಭಾಷಿಕರೆಂದು ಹೇಳಿಕೊಂಡಿದ್ದಾರೆ. ಇವರಲ್ಲಿ ಅನೇಕರ ಮನೆಮಾತು ತೆಲುಗಾಗಿದ್ದು ಕನ್ನಡವನ್ನು ಎಲ್ಲಾ ಸಂದರ್ಭಗಳ ಸಂವಹನ ಮಟ್ಟಕ್ಕೂ ಬಳಸುವವರಾಗಿದ್ದಾರೆ. ತಲೆಮಾರುಗಳ ಹಿಂದೆ ತೆಲುಗಿನಲ್ಲಿ ಸಾಕ್ಷರತೆಯ ಕೌಶಲಗಳನ್ನು ಪಡೆದಿರುವ ಸಂಗತಿಗಳು ತಿಳಿದುಬಂದಿದ್ದರೆ, ಇಂದಿನ ತಲೆಮಾರುಗಳಲ್ಲಿ ಕನ್ನಡ ಮತ್ತು ಇಂಗ್ಲಿಶ್‌ನಲ್ಲಿ ಸಾಕ್ಷರತೆಯ ಕೌಶಲವನ್ನು ಪಡೆದುಕೊಳ್ಳುತ್ತಿದ್ದಾರೆ. ಉತ್ತರ ಕರ್ನಾಟಕದ ಭಾಗದಲ್ಲಿ ಪೌರೋಹಿತ್ಯವನ್ನು ನಿರ್ವಹಿಸುವ ಸಂದರ್ಭಗಳು ಈ ಜಾತಿಯವರಿಗೆ ಕಡಿಮೆ ಪ್ರಮಾಣದಲ್ಲಿ ಇರುವಂತಿದೆ. ಈ ಜಾತಿಯ ಜನರು ಹೆಚ್ಚು ಮೇಲ್‌ವರ್ಗದ ಜಾತಿಯ ಜನರೊಂದಿಗೆ ಸಾಮಾಜಿಕ ಸಂಪರ್ಕವನ್ನು ಹೊಂದಿರುತ್ತಾರೆ. ಈ ಸಮುದಾಯದವರಲ್ಲಿ ಹೆಚ್ಚು ಸಂಪ್ರದಾಯಶೀಲರಾದ್ದರಿಂದ ಕೆಳಜಾತಿ, ಕೆಳವರ್ಗಗಳ ಜೊತೆಗೆ ಸಾಮಾಜಿಕ ಸಂಪರ್ಕವನ್ನು ಬೆಳೆಸುವಲ್ಲಿ ಅನುಮಾನಗಳಿವೆ. ಅಲ್ಲದೆ ಮಂಗಳ ಕಾರ್ಯಗಳಲ್ಲಿ ಅಡಿಗೆ ಮಾಡುವ ಕೆಲಸಗಳಲ್ಲಿಯೂ ಅದಕ್ಕೆ ಪೂರಕವಾದ ಖಾದ್ಯಗಳನ್ನು ಸಿದ್ಧಪಡಿಸಿ ಮಾರುವ ಕೆಲಸಗಳಲ್ಲಿ ತೊಡಗಿದ್ದಾರೆ. ಶೈಕ್ಷಣಿಕವಾಗಿ ಹೆಚ್ಚು ಮುಂದುವರೆದ ಸಮುದಾಯದವರಾಗಿದ್ದಾರೆ. ಅಂಕಿ - ಅಂಶಗಳನ್ನು ಆಧರಿಸಿ ನೋಡುವುದಾದರೆ, ಒಟ್ಟು 43 % ಕನ್ನಡ ಏಕಭಾಷಿಕರಲ್ಲಿ 31.6 % ಗಳಷ್ಟು ಪುರುಷರು, 53.9 % ಗಳಷ್ಟು ಮಹಿಳೆಯರು ಕಾಣುತ್ತಿದ್ದಾರೆ. ತೆಲುಗು ಏಕಭಾಷಿಕರ ಪ್ರಮಾಣ ಕಾಣುತ್ತಿಲ್ಲ. ತೆಲುಗು ಭಾಷೆಯನ್ನು ಕಲಿತು ದ್ವಿಭಾಷಿಕರಾದವರಲ್ಲಿ ಒಟ್ಟು 21.9 % ಗಳಷ್ಟಿದ್ದರೆ, 25 % ಗಳಷ್ಟು ಪುರುಷರು 19 % ಗಳಷ್ಟು ಮಹಿಳೆಯರಿರುವುದು ಕಾಣುತ್ತಿದೆ. ತೆಲುಗು ಭಾಷಿಕರು ಕನ್ನಡವನ್ನು ಕಲಿತು

ದ್ವಿಭಾಷಿಕರಾಗಿರುವ ಪ್ರಮಾಣವನ್ನು ನೋಡಿದರೆ ಒಟ್ಟು 34.9 % ಗಳಷ್ಟಿದ್ದರೆ, 43.3 % ಗಳಷ್ಟು ಪುರುಷರು, 26.9 % ಗಳಷ್ಟು ಮಹಿಳೆಯರು ಕನ್ನಡವನ್ನು ಕಲಿತಿರುವ ಸಂದರ್ಭಗಳು ಕಾಣುತ್ತಿವೆ.

| | ಕನ್ನಡ ಏಕಭಾಷಿಕರು | ತೆಲುಗು ಏಕಭಾಷಿಕರು | ಕನ್ನಡ-ತೆಲುಗು ದ್ವಿಭಾಷಿಕರು | ತೆಲುಗು-ಕನ್ನಡ ದ್ವಿಭಾಷಿಕರು |
|---|---|---|---|---|
| ಒಟ್ಟು ಭಾಷಿಕರು | 43.0 | - | 21.9 | 34.9 |
| ಪುರುಷ | 31.6 | - | 25.0 | 43.3 |
| ಮಹಿಳೆ | 53.9 | - | 19.0 | 26.9 |

ಈ ಅಂಕಿ - ಅಂಶಗಳನ್ನು ಆಧರಿಸಿ ಹೇಳುವಾಗಲೂ, ಲಿಂಗಾಯತ, ಕುರುಬ, ಜಾತಿಗಳಂತೆ ಕನ್ನಡ ಏಕಭಾಷಿಕರು ಕಂಡುಬರುತ್ತಿದ್ದು, ಆ ಎರಡೂ ಜಾತಿಗಳಂತೆ ಪುರುಷರಲ್ಲಿ ಏಕಭಾಷಿಕ ಪ್ರಮಾಣ ಕಡಿಮೆ ಇದೆ. ಮಹಿಳೆಯರಲ್ಲಿ ಹೆಚ್ಚು ಏಕಭಾಷಿಕರು ಇರುವುದು ಕಾಣುತ್ತಿದೆ. ಇಲ್ಲಿ ಮಹಿಳೆಯರು ಕನ್ನಡ ಏಕಭಾಷಿಕರಾಗುವುದಕ್ಕೆ ಹೆಚ್ಚಾಗಿ ಈ ಜಾತಿಗಳಲ್ಲಿನ ಸಾಂಪ್ರದಾಯಿಕ ಆಚರಣೆ, ಬೇರೆ ಭಾಷೆಯೊಂದನ್ನು ಕಲಿಯುವಲ್ಲಿ ತೊಡಕುಂಟು ಮಾಡಿರಬಹುದು. ಅಲ್ಲದೆ ಇಂಗ್ಲಿಶ್ ಭಾಷೆಯನ್ನು ಕಲಿಯುವಲ್ಲಿರುವ ಆಸಕ್ತಿ ತೆಲುಗು ಭಾಷೆಯನ್ನು ಕಲಿಯುವಲ್ಲಿ ಇಲ್ಲದಿರಬಹುದು. ತಲೆಮಾರುಗಳಲ್ಲಿ ತೆಲುಗು ಭಾಷಿಕರಿಗೆ ಕನ್ನಡ ಕಲಿಯುವ ಅವಶ್ಯಕತೆಗಳು ಹೆಚ್ಚಾಗುತ್ತಿರುವಂತೆ ಕಾಣುತ್ತದೆ. ಕನ್ನಡಿಗರು - ತೆಲುಗು ದ್ವಿಭಾಷಿಕರಾಗುವುದಕ್ಕಿಂತ ತೆಲುಗು - ಭಾಷಿಕರು ಕನ್ನಡ ದ್ವಿಭಾಷಿಕರಾಗುವ ಅವಶ್ಯಕತೆಗಳು ಇಲ್ಲಿಯೂ ಇದೆ. ಈ ಜಾತಿಗಳಲ್ಲಿ ತೆಲುಗು ಬ್ರಾಹ್ಮಣರು ಎಂದು ಹೇಳಿಕೊಳ್ಳುವುದರಲ್ಲಿ ಹೆಚ್ಚು ತೆಲುಗು ಭಾಷೆಯನ್ನು ಮಹಿಳೆಯರು ಬಳಸುತ್ತಿದ್ದು, ಸಾಕ್ಷರತೆಯ ಕೌಶಲಗಳಲ್ಲಿ ಒಂದಾದ ಓದುವ ಕೌಶಲವನ್ನು ಹಲವರು ಉಳಿಸಿಕೊಂಡಿದ್ದಾರೆ. ಈಗಿನ ತಲೆಮಾರುಗಳಲ್ಲಿ ತೆಲುಗಿನಲ್ಲಿ ಸಾಕ್ಷರತೆಯನ್ನು ಪಡೆಯುತ್ತಿಲ್ಲ. ಆದರೆ ಮೊದಲ ತಲೆಮಾರಿನಲ್ಲಿ ಇನ್ನು ತೆಲುಗನ್ನು ಓದುವ ನೆಲೆಗಳಲ್ಲಿ ಉಳಿಸಿಕೊಂಡಂತೆ ಕಾಣುತ್ತದೆ. ವೈವಾಹಿಕ ಸಂಬಂಧಗಳನ್ನು ವ್ಯಾಪಾರ ಇನ್ನಿತರ ಸಂಬಂಧಗಳನ್ನು ಆಂಧ್ರಪ್ರದೇಶದ ನಗರ ಸಂದರ್ಭಗಳಲ್ಲಿ ಇರಿಸಿಕೊಂಡಿರುವವರಾಗಿದ್ದಾರೆ. ನಗರ ಸಂದರ್ಭದಲ್ಲೇ ಈ ಸಮುದಾಯದ ಜನರು ಹೆಚ್ಚು ವಾಸವಾಗಿದ್ದಾರೆ. ಆದ್ದರಿಂದ ಇತರೆ ಭಾಷೆಗಳನ್ನು ಕಲಿಯುವ ಹೆಚ್ಚಿನ ಸಂದರ್ಭಗಳಲ್ಲಿ ಇವರು ಇದ್ದಾರೆ.


ನಕ್ಷೆ - 4
ಬ್ರಾಹ್ಮಣ ಜಾತಿಯಲ್ಲಿನ ಭಾಷಿಕರ ಅಂಕಿ-ಅಂಶಗಳು
ಜನಸಂಖ್ಯೆ ಶೇಕಡಾವಾರುಗಳಲ್ಲಿ
60
50
40
30
20
10
0
53.9
43
31.6
43.3
34.9
26.9
25
21.9
19
0 0 0
ಕ ಏ
ತೆ ಏ
ಕ-ತೆ ದ್ವಿ
ತೆ-ಕ ದ್ವಿ
ಭಾಷಿಕರು
ಒಟ್ಟು
ಪುರುಷ
ಮಹಿಳೆ

ನೇಕಾರರು

ವೃತ್ತಿಯನ್ನು ಆಧರಿಸಿ ನೇಕಾರರು ಎಂದು ಕರೆಯಲಾಗಿದೆ. ಇವರು ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲಿಯೂ ಕಂಡುಬರುತ್ತಾರೆ. ಇವರ ಸಾಂಪ್ರದಾಯಿಕ ವೃತ್ತಿ ನೇಯ್ಗೆ, ಕೆಲವರು ತಮ್ಮ ಸಾಂಪ್ರದಾಯಿಕ ವೃತ್ತಿಯನ್ನು ಮುಂದುವರೆಸಿಕೊಂಡು ಹೋಗುತ್ತಿದ್ದರೆ, ಇನ್ನು ಕೆಲವರು ಜವಳಿ ವ್ಯಾಪಾರ, ಸರ್ಕಾರಿ, ಅರೆಸರ್ಕಾರಿ ಮತ್ತು ಖಾಸಗಿ ವೃತ್ತಿಗಳಿಗೆ ಪಲ್ಲಟಗೊಂಡಿದ್ದಾರೆ. ಪದ್ಮಸಾಲಿ, ನೇಯ್ಗೆ, ಥೊಗ್ಗ, ಬಿಳಿಮಗ್ಗ, ಕುರುಹಿನ ಶೆಟ್ಟಿ, ದೇವಾಂಗ ನೇಕಾರರೆಂದು ತಮ್ಮನ್ನು ಕರೆದುಕೊಳ್ಳುತ್ತಾರೆ. ದೇವಾಂಗ ಅಥವಾ ನೇಕಾರರು ಎಂದು ಹೇಳಿಕೊಳ್ಳುವವರ ಮನೆಮಾತು ಕನ್ನಡ ಭಾಷೆ, ಪದ್ಮಸಾಲಿ, ಕುರುಹಿನಶೆಟ್ಟಿ ಮುಂತಾದ ಹೇಳಿಕೊಳ್ಳುವವರ ಮನೆಮಾತು ಹೆಚ್ಚು ತೆಲುಗು ಭಾಷೆ. ತೆಲುಗು ಭಾಷೆ ಮಾತನಾಡುವವರು ಕರ್ನಾಟಕ - ಆಂಧ್ರಗಡಿ ಪ್ರದೇಶಗಳ ಜಿಲ್ಲೆಗಳಲ್ಲಿ ಹೆಚ್ಚು ಕಂಡು ಬರುತ್ತಿದ್ದರೆ, ಕನ್ನಡ ಮಾತನಾಡುವವರು ಮೈಸೂರು ಭಾಗದಲ್ಲಿ ಹೆಚ್ಚು ಕಾಣುತ್ತಾರೆ. ವಿಜ್ಞಾನ - ತಂತ್ರಜ್ಞಾನದ ಬೆಳವಣಿಗೆಯಿಂದಾಗಿ ಇವರ ಸಾಂಪ್ರದಾಯಿಕ ವೃತ್ತಿ ಇಳಿಮುಖವಾಗಿದೆ. ಇವರಲ್ಲಿ ವೃತ್ತಿ ಪಲ್ಲಟಗಳು ಹೆಚ್ಚು ಕಾಣುತ್ತಿರುವ ಹಾಗಿದೆ. ಈ ವೃತ್ತಿಪಲ್ಲಟಗಳು ಉಂಟಾಗಿರುವಲ್ಲಿ ಭಾಷಾಪಲ್ಲಟಗಳು ಉಂಟಾಗಿವೆ. ಇವರಲ್ಲಿ ಸ್ವಕುಳಸಾಲಿಗಳು ಮರಾಠಿ ಮಾತನಾಡಿದರೆ, ಮಿಕ್ಕವರು ಹೆಚ್ಚು ತೆಲುಗು - ಕನ್ನಡ ಭಾಷೆಯನ್ನು ಮಾತನಾಡುತ್ತಾರೆ. ಅನೇಕರು ವ್ಯಾಪಾರಿಗಳು, ನುರಿತ ಕಸುಬುದಾರರಾಗಿದ್ದಾರೆ. ಕೆಲವರು ಕೃಷಿಕರೂ ಆಗಿದ್ದಾರೆ. ಈ ಸಮುದಾಯದ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಪರಿಸ್ಥಿತಿಗಳು ಸುಧಾರಣೆಯಾಗಬೇಕಿದೆ.

ಬಳ್ಳಾರಿ ಪರಿಸರದಲ್ಲಿ ಈ ಸಮುದಾಯದವರು ಹೆಚ್ಚು ಕಾಣಸಿಗುವುದು ಪದ್ಮಸಾಲಿಗಳೆಂದು ಹೇಳಿಕೊಳ್ಳುವವರು. ಇವರ ಮನೆಮಾತು ತೆಲುಗು, ದ್ವಿತೀಯ ಭಾಷೆ ಕನ್ನಡ. ಇವರಲ್ಲಿ ಹೆಚ್ಚಿನವರು ಆಂಧ್ರಪ್ರದೇಶದಿಂದ ಬಂದು ನೆಲೆಸಿರುವವರು ವೈವಾಹಿಕ ಸಂಬಂಧದಿಂದ ಬಂದು ನೆಲೆಸಿರುವವರು. ಇನ್ನು ಕೆಲವರು ಆಂಧ್ರ ಕರ್ನಾಟಕದ ಗಡಿಭಾಗದಲ್ಲಿ ನೆಲೆಸಿದ್ದಾರೆ. ಇವರಲ್ಲಿ ಸಾಂಪ್ರದಾಯಿಕ ವೃತ್ತಿಯಿಂದ ಇತರೆ ವೃತ್ತಿಗಳಿಗೆ, ಸರ್ಕಾರಿ ಉದ್ಯೋಗಗಳಿಗೆ ಪಲ್ಲಟವಾಗಿರುವವರಲ್ಲಿ ಹೆಚ್ಚು ಕನ್ನಡ ಭಾಷೆಯನ್ನು ಬಳಸುತ್ತಿದ್ದಾರೆ. ಸಾಕ್ಷರತೆಯ ಕೌಶಲಗಳನ್ನು ಕನ್ನಡದಲ್ಲಿ ಮತ್ತು ಇಂಗ್ಲಿಶ್ ಭಾಷೆಯಲ್ಲಿ ಪಡೆದುಕೊಳ್ಳುತ್ತಿದ್ದಾರೆ. ಈ ಸಮುದಾಯದ ಜನರು ವ್ಯಾಪಾರ, ವ್ಯವಹಾರಗಳಿಗೆ ಸಮಾಜದಲ್ಲಿನ ಇತರ ವರ್ಗದ ಜಾತಿಯ ಜನರೊಂದಿಗೆ ವ್ಯವಹರಿಸಬೇಕಿರುವುದರಿಂದ ದ್ವಿಭಾಷಿಕರಾಗುವ ಅವಶ್ಯಕತೆಗಳು ಹೆಚ್ಚಿದೆ. ಈ ಬಗೆಗೆ ಅಂಕಿ - ಅಂಶಗಳನ್ನು ಆಧರಿಸಿ ನೋಡಿದರೆ

ನಕ್ಷೆ - 5

ನೇಕಾರ ಜಾತಿಯಲ್ಲಿನ ಭಾಷಿಕರ ಅಂಕಿ-ಅಂಶಗಳು




ಒಟ್ಟು ಪುರುಷ ಮಹಿಳೆ

| | ಕನ್ನಡ ಏಕಭಾಷಿಕರು | ತೆಲುಗು ಏಕಭಾಷಿಕರು | ಕನ್ನಡ-ತೆಲುಗು ದ್ವಿಭಾಷಿಕರು | ತೆಲುಗು-ಕನ್ನಡ ದ್ವಿಭಾಷಿಕರು |
|---|---|---|---|---|
| ಒಟ್ಟು ಭಾಷಿಕರು | 5.7 | 5.7 | 10.7 | 77.6 |
| ಪುರುಷ | 5.2 | - | 12.2 | 82.4 |
| ಮಹಿಳೆ | 6.2 | 5.7 | 09.3 | 82.3 |

ಒಟ್ಟು ಏಕಭಾಷಿಕರಲ್ಲಿ 5.7 % ಗಳಷ್ಟಿದ್ದರೆ 5.2 % ಗಳಷ್ಟು ಪುರುಷರಲ್ಲಿ 6.2 % ಗಳಷ್ಟು ಮಹಿಳೆಯರಲ್ಲಿ ಕನ್ನಡ ಏಕಭಾಷಿಕರು ಕಾಣುತ್ತಿದ್ದಾರೆ. ಕನ್ನಡ ಏಕಭಾಷಿಕರೆಂದು ಹೇಳಿಕೊಂಡಿರುವವರು ಮುಖ್ಯವಾಗಿ ಕನ್ನಡ ಮನೆಮಾತಾಗಿರುವ ಭಾಷಿಕರು, ಇವರು ತೆಲುಗು ದ್ವಿಭಾಷಿಕರಲ್ಲ. ದೇವಾಂಗ ಅಥವಾ ನೇಕಾರ ಎಂದು ಹೇಳಿಕೊಳ್ಳುವ ಕನ್ನಡ ಭಾಷಿಕರು. ಇವರಲ್ಲಿ ಕೆಲವು ಪ್ರಮಾಣದಲ್ಲಿ ಗಂಡಸರು ವ್ಯಾಪಾರದ ಸಂದರ್ಭಗಳಲ್ಲಿ ಮಾತ್ರ ತೆಲುಗು ಭಾಷೆಗೆ ಆಂಶಿಕ ಪಲ್ಲಟಕ್ಕೆ ಒಳಗಾಗಿರುತ್ತಾರಷ್ಟೆ. ತೆಲುಗು ಏಕಭಾಷಿಕರೆಂದು ಹೇಳಿಕೊಳ್ಳುತ್ತಿರುವವರಲ್ಲಿ ಒಟ್ಟು 5.7 % ಗಳಷ್ಟಿದ್ದರೆ, ಪುರುಷರಲ್ಲಿ ತೆಲುಗು ಏಕಭಾಷಿಕರ ಸಂಖ್ಯೆ ಕಾಣುತ್ತಿಲ್ಲ. ಆದರೆ ಮಹಿಳೆಯರಲ್ಲೇ ತೆಲುಗು ಏಕಭಾಷಿಕರಿರುವುದು ಕಾಣುತ್ತಿದೆ. ಇದಕ್ಕೆ ಕಾರಣಗಳೇನು ಈ ಸಮುದಾಯದಲ್ಲಿ ಕಂಡುಬರುತ್ತಿರುವ ತೆಲುಗು ಏಕಭಾಷಿಕ ಮಹಿಳೆಯರು ಮೊದಲ ಮತ್ತು ಎರಡನೆಯ ತಲೆಮಾರುಗಳಲ್ಲಿ ಇರುವುದನ್ನು ಕಾಣಲಾಗಿದೆ. ಇವರು ಶೈಕ್ಷಣಿಕವಾಗಿ ಹಿಂದುಳಿದಿರುವುದಲ್ಲದೆ, ಸಾಕ್ಷರತೆಯ ಕೌಶಲಗಳು ಪಡೆದಿದ್ದರೂ ತೆಲುಗಿನಲ್ಲೆ ಆದ್ದರಿಂದ ಕನ್ನಡವನ್ನು ಬಳಸುವಂತಹ ಹೆಚ್ಚಿನ ಸಾಮಾಜಿಕ ಸಂದರ್ಭಗಳಿಗೆ ಇವರುಗಳು ಒಳಗಾಗದೆ ಇರುವುದು. ಸಾಂಪ್ರದಾಯಿಕ ವೃತ್ತಿಯಲ್ಲಿ ನಿರತರಾಗಿರುವವರಲ್ಲಿ ಹೊರಗಿನ ಸಾಮಾಜಿಕ ಸಂಪರ್ಕಗಳಿಗೆ ಒಳಗಾಗುವ ಅವಕಾಶಗಳು ಕಡಿಮೆ ಇರುವುದರಿಂದ ಬೇರೆ ಭಾಷೆಯೊಂದನ್ನು ಕಲಿಯುವ ಸಂದರ್ಭಗಳು ಬರದೇ ಇರಬಹುದು. ಇವರುಗಳು ಕನ್ನಡವನ್ನು ಗ್ರಹಿಕೆಯ ನೆಲೆಯಲ್ಲಿ ಮಾತ್ರ ಪಡೆದುಕೊಂಡಿದ್ದಾರೆ.

ಇವರಲ್ಲಿ ತಲೆಮಾರುಗಳಲ್ಲಿ ತೆಲುಗನ್ನು ಕಲಿತು ದ್ವಿಭಾಷಿಕರಾಗುವ ಪ್ರಮಾಣಕ್ಕಿಂತ ಕನ್ನಡವನ್ನು ಕಲಿತು ದ್ವಿಭಾಷಿಕರಾಗುತ್ತಿರುವ ಪ್ರಮಾಣ ಒಟ್ಟಾರೆಯಾಗಿಯೂ ಹೆಚ್ಚಾಗುತ್ತಿದೆಯಲ್ಲದೆ ಲಿಂಗಾಧಾರಿತವಾಗಿಯೂ ಸಹ ಹೆಚ್ಚಾಗುತ್ತಿದೆ. ತೆಲುಗು ಕನ್ನಡ ಭಾಷಿಕರು ಒಟ್ಟು 77.6 % ಗಳಷ್ಟದ್ದರೆ 82.4 % ಗಳಷ್ಟು ಪುರುಷರಲ್ಲಿಯೂ, 82.3 % ಗಳಷ್ಟು ಮಹಿಳೆಯರಲ್ಲಿಯೂ ದ್ವಿಭಾಷಿಕರಾಗುವ ಅವಶ್ಯಕತೆಗಳು ಕಾಣುತ್ತಿವೆ. ಅದೇ ನೇಕಾರ, ದೇವಾಂಗ ಎಂದು ಹೇಳಿಕೊಳ್ಳುವ ಕನ್ನಡ ಭಾಷಿಕರು ತೆಲುಗು ಭಾಷೆಯನ್ನು ಕಲಿತು ದ್ವಿಭಾಷಿಕರಾಗುತ್ತಿರುವ ಪ್ರಮಾಣ ಕಡಿಮೆ ಇದೆ. ಆದ್ದರಿಂದ ಈ ಸಮುದಾಯದ ಭಾಷಿಕರಲ್ಲಿ ಲಿಂಗಾಧಾರಿತ ಭಿನ್ನತೆಗಳು ಮೇಲ್‌ಮುಖ ಚಲನೆಯ ಕಡೆಗೆ ಹೋದಂತೆಲ್ಲ ಕಡಿಮೆಯಾಗುವ ಹಾಗೆ ಕಾಣುತ್ತಿದೆಯಲ್ಲದೆ, ವರ್ಗಕಲ್ಪನೆಯನ್ನು ಆಧರಿಸಿ ಭಾಷಿಕ ಭಿನ್ನತೆಗಳನ್ನು

ಹೇಳಲು ಕ್ಷೇತ್ರಕಾರ್ಯದಲ್ಲಿ ಹೆಚ್ಚಿನ ಆಧಾರಗಳು ದೊರೆತಿಲ್ಲ, ಶೈಕ್ಷಣಿಕ ಸಂದರ್ಭಗಳನ್ನು ಗಮನಿಸಿ ಹೇಳುವುದಾದರೆ ವೃತ್ತಿ ಪಲ್ಲಟಗಳು ಉಂಟಾಗಿರುವವರಲ್ಲಿ ಕನ್ನಡದ ಸಾಕ್ಷರತೆಯ ಕೌಶಲಗಳನ್ನು ಮಕ್ಕಳಿಗೆ ಕೊಡಿಸುವುದರ ಮೂಲಕ ಮೇಲ್‌ಮುಖ ಚಲನೆಯನ್ನು ಬಯಸುತ್ತಿದ್ದಾರೆ. ವೃತ್ತಿ ಪಲ್ಲಟಗಳಿಗೆ ಒಳಗಾಗಿ ಮುಂದುವರೆದ ಕುಟುಂಬಗಳು ಉನ್ನತ ಶಿಕ್ಷಣ ಇತ್ಯಾದಿ ಸೌಲಭ್ಯಗಳನ್ನು ಪಡೆದಿರುವವರು ಇಂಗ್ಲಿಶ್‌ನಲ್ಲಿ ಸಾಕ್ಷರತೆಯ ಕೌಶಲಗಳನ್ನು ಮಕ್ಕಳಿಗೆ ಕೊಡಿಸುವುದರ ಮೂಲಕ ಸಮಾಜದಲ್ಲಿ ಸ್ಥಾನಮಾನವನ್ನು ಹೆಚ್ಚಿಸಿಕೊಳ್ಳುತ್ತಿರುವಂತೆ ಕಾಣುತ್ತಿದೆ. ಕನ್ನಡ ಸಾಕ್ಷರತೆಯ ಸಂದರ್ಭಗಳಿಗೆ ಒಳಗಾದವರಲ್ಲಿ ತೆಲುಗು ಭಾಷೆಯು ಮನೆ ಆವರಣದಲ್ಲಿ ಮಾತ್ರ ಹೆಚ್ಚಾಗಿ ಬಳಕೆಯಾಗುತ್ತಿದೆ.

**ವೈಶ್ಯ**

ಶೆಟ್ಟಿ ಅಥವಾ ಕೋಮಟಿಗಳೆಂದು ಪರಿಚಿತರಾಗಿರುವ ವೈಶ್ಯರು ರಾಜ್ಯದಲ್ಲಿ ತಮ್ಮನ್ನು ಆರ್ಯವೈಶ್ಯ, ಕೋಮಟಿಗ, ಶೆಟ್ಟಿ ಎಂದು ಕರೆದುಕೊಳ್ಳುತ್ತಾರೆ. ಇವರು ತುಪ್ಪದ ಕೋಮಟಿ ಮತ್ತು ಎಣ್ಣೆ ಕೋಮಟಿಗಳೆಂಬ ಎರಡು ಉಪಪಂಗಡಗಳನ್ನು ಹೊಂದಿದ್ದಾರೆ. ಇವರು ಸಾಮಾನ್ಯವಾಗಿ ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲೂ ಕಂಡುಬರುತ್ತಾರೆ. ಹಿಂದೆ ಕೆಲವು ವೈಶ್ಯರು ಆಂಧ್ರದಿಂದ ಕರ್ನಾಟಕಕ್ಕೆ ವಲಸೆ ಬಂದಿದ್ದರೆಂದು ಆಧಾರಗಳಿಂದ ತಿಳಿದುಬರುತ್ತದೆ. ಇವರ ವಂಶಪಾರಂಪರ್ಯ ವೃತ್ತಿ ವ್ಯಾಪಾರ ಮತ್ತು ವಾಣಿಜ್ಯ. ಅದರಲ್ಲೂ ಬಹಳಷ್ಟು ಜನ ವ್ಯಾಪಾರಿಗಳು, ಆಭರಣ ವ್ಯಾಪಾರಿಗಳು, ಬ್ಯಾಂಕ್ ವ್ಯವಹಾರ ನಡೆಸುವವರು, ಉದ್ದಿಮೆಗಾರರು ಮತ್ತು ಕಾಫಿ ಬೆಳೆಗಾರರು ಆಗಿದ್ದಾರೆ. ಇವರು ಹೆಚ್ಚಾಗಿ ತೆಲುಗು ಭಾಷಿಕರಾಗಿದ್ದು, ಕನ್ನಡವನ್ನು ಮಾತನಾಡುತ್ತಾರಲ್ಲದೆ ಬರವಣಿಗೆಯ ಭಾಷೆಯಾಗಿ ಕನ್ನಡ - ಇಂಗ್ಲಿಶ್ ಭಾಷೆಯನ್ನು ಬಳಸುತ್ತಾರೆ. ಇತ್ತೀಚೆಗೆ ಕೆಲವರು ತಮ್ಮ ವಂಶಪಾರಂಪರ್ಯ ವೃತ್ತಿಗಳನ್ನು ಬಿಟ್ಟು ಉನ್ನತ ಶಿಕ್ಷಣ ಪಡೆಯುವುದು, ಸರ್ಕಾರಿ ಮತ್ತು ಖಾಸಗಿ ಸಂಸ್ಥೆಗಳಲ್ಲಿ ಕೆಲಸ ನಿರ್ವಹಿಸುತ್ತಿರುವುದು ಕಾಣುತ್ತಿದೆ. ಅವಿಭಕ್ತ ಕುಟುಂಬಗಳು ಇವರಲ್ಲಿ ಹೆಚ್ಚಿನ ಪ್ರಮಾಣದಲ್ಲಿವೆ. ಆದರೆ ನಗರೀಕರಣದ ಕಾರಣದಿಂದಾಗಿ ಶೈಕ್ಷಣಿಕವಾಗಿ ಮುಂದುವರೆಯಲು ಇಚ್ಛಿಸುವವರು ಮತ್ತು ಸರ್ಕಾರಿ ಖಾಸಗಿ ವಲಯದಲ್ಲಿ ಉದ್ಯೋಗವನ್ನು ಮಾಡುತ್ತಿರುವವರು ಅಣು ಕುಟುಂಬಗಳಲ್ಲಿ ಕಂಡುಬರುತ್ತಾರೆ. ವೃತ್ತಿಗಳಿಂದ ಪಲ್ಲಟ ಹೊಂದಿದವರಲ್ಲಿ ಭಾಷೆಯಲ್ಲೂ ಪಲ್ಲಟಗಳು ಉಂಟಾಗಿದೆ.

ಆಂಧ್ರ - ಕರ್ನಾಟಕ ಗಡಿ ಭಾಗದಲ್ಲಿರುವ ವೈಶ್ಯರು ಹೆಚ್ಚಿನ ಸಂಖ್ಯೆಯಲ್ಲಿ ದ್ವಿಭಾಷಿಕರು. ಇವರ ಮನೆಮಾತು ತೆಲುಗು. ಕೋಲಾರದ ಕನ್ನಡ - ತೆಲುಗು ದ್ವಿಭಾಷಾ ಪರಿಸರದಲ್ಲಿ ಹೆಚ್ಚಿನ ಸಂದರ್ಭದಲ್ಲಿ ವೈಶ್ಯರು ತೆಲುಗನ್ನು ಮೌಖಿಕ ನೆಲೆಗಳಲ್ಲಿ ಉಳಿಸಿಕೊಂಡಿದ್ದರೆ, ಬಳ್ಳಾರಿ ಕನ್ನಡ - ತೆಲುಗು ದ್ವಿಭಾಷಾ ಸಂದರ್ಭದಲ್ಲಿ ತಲೆಮಾರುಗಳಲ್ಲಿ ಎಲವಡೆ ಮೌಖಿಕ ನೆಲೆಯಿಂದ ಪಲ್ಲಟಗೊಳ್ಳುತ್ತಿದ್ದಾರೆ. ಹೆಚ್ಚಿನ ಆದಾಯವನ್ನು ಹೊಂದಿರುವ ವೈಶ್ಯ ಕುಟುಂಬಗಳಲ್ಲಿ ಸಾಕ್ಷರತೆಯ ಕೌಶಲಗಳನ್ನು ಇಂಗ್ಲಿಶ್ ಭಾಷೆಯಲ್ಲಿ ಪಡೆಯುತ್ತಿದ್ದಾರೆ. ಕನ್ನಡದ ಸಾಮಾಜಿಕ ಸಂದರ್ಭಗಳಲ್ಲಿ

ಕನ್ನಡವನ್ನು ಸಮರ್ಥವಾಗಿ ಬಳಸುವಂಥವರಾಗಿದ್ದಾರೆ. ಮನೆ ಆವರಣದಲ್ಲಿ ಹೆಚ್ಚಾಗಿ ತೆಲುಗು ಬಳಕೆಯಾಗುತ್ತಿದ್ದು, ವೈಶ್ಯ ಬ್ಯಾಂಕ್‌ಗಳಲ್ಲಿ, ವ್ಯಾಪಾರದ ಸಂದರ್ಭಗಳಲ್ಲಿ ದೊಡ್ಡವರು - ದೊಡ್ಡವರ ಜೊತೆ ಮಾತನಾಡುವ ಸಂದರ್ಭದಲ್ಲಿ ಹೆಚ್ಚಾಗಿ ತೆಲುಗಿನಲ್ಲಿದ್ದರೆ ಮಕ್ಕಳೊಂದಿಗೆ ಕನ್ನಡವೇ ಸಂವಹನ ಭಾಷೆಯಾಗಿದೆ. ಅವಿಭಕ್ತ ಕುಟುಂಬದಲ್ಲಿ ಮಾತ್ರ ತೆಲುಗು ಕೆಲವು ಆವರಣಗಳಲ್ಲಿ ಉಳಿದುಕೊಂಡಿದ್ದು, ಅಣು ಕುಟುಂಬಗಳಲ್ಲಿ ಇರುವವರು ಕನ್ನಡವನ್ನು ಮತ್ತು ಇಂಗ್ಲಿಶ್ ಭಾಷೆಯನ್ನು ಹೆಚ್ಚಿನ ಸಂದರ್ಭಗಳಲ್ಲಿ ಬಳಸುತ್ತಿದ್ದಾರೆ. ಬಳ್ಳಾರಿಯಂತಹ ನಗರ ಪ್ರದೇಶದಲ್ಲಿ ಮಾತ್ರ ತೆಲುಗು ಬಳಕೆಯ ಆವರಣಗಳು ಹೆಚ್ಚು ಇರುವುದರಿಂದಲೂ ಹೊಸಪೇಟೆ, ಸಿರುಗುಪ್ಪ, ತೋರಣಗಲ್ಲು ಇತರೆ ಪ್ರದೇಶಗಳಿಗಿಂತ ಬಳ್ಳಾರಿಯ ಕನ್ನಡ - ತೆಲುಗು ಬಳಕೆಯ ಆವರಣಗಳು ಭಿನ್ನವಾಗಿವೆ. ಕಾರಣ ಆಂಧ್ರದೊಂದಿಗಿನ ದಿನನಿತ್ಯದ ವ್ಯಾಪಾರ - ವಾಣಿಜ್ಯ ಇನ್ನಿತರೆ ಸಂಬಂಧಗಳಿಂದಾಗಿ, ಹೊಸಪೇಟೆ, ಸಿರುಗುಪ್ಪ ಇನ್ನಿತರೆ ಭಾಗಗಳಲ್ಲಿ ನೆಲೆಸಿರುವ ವೈಶ್ಯರು ಹಲವು ಸಂದರ್ಭಗಳಲ್ಲಿ ಕನ್ನಡವೇ ಸಂವಹನ ಭಾಷೆಯಾಗಿದೆ. ತುಂಬಾ ಹಳೆಯ ತಲೆಮಾರುಗಳಲ್ಲಿ ಅವಿಭಕ್ತ ಕುಟುಂಬದಲ್ಲೆ ಇರುವಂಥ ವ್ಯಾಪಾರಸ್ಥ ಕುಟುಂಬಗಳಲ್ಲಿನ ಹೆಂಗಸರಲ್ಲಿ ತೆಲುಗು ಏಕಭಾಷಿಕರನ್ನು ಅತ್ಯಂತ ಕಡಿಮೆ ಸಂಖ್ಯೆಯಲ್ಲಿ ಕಾಣಬಹುದಾಗಿದೆ. ಈ ಮೇಲಿನ ಅಂಶಗಳನ್ನು ಸ್ಪಷ್ಟಪಡಿಸಿಕೊಳ್ಳಲು ಅಂಕಿ - ಅಂಶಗಳ ಆಧಾರದಿಂದ ನೋಡಿದಾಗ ಇನ್ನಷ್ಟು ಸ್ಪಷ್ಟ ಚಿತ್ರಣ ಈ ಸಮುದಾಯದ ಭಾಷಿಕರ ಬಗೆಗೆ ದೊರೆಯುತ್ತದೆ.

| | ಕನ್ನಡ ಏಕಭಾಷಿಕರು | ತೆಲುಗು ಏಕಭಾಷಿಕರು | ಕನ್ನಡ-ತೆಲುಗು ದ್ವಿಭಾಷಿಕರು | ತೆಲುಗು-ಕನ್ನಡ ದ್ವಿಭಾಷಿಕರು |
|---|---|---|---|---|
| ಒಟ್ಟು ಭಾಷಿಕರು | 4.5 | 2.5 | 16.1 | 76.7 |
| ಪುರುಷ | 4.8 | 1.1 | 16.6 | 80.9 |
| ಮಹಿಳೆ | 5.0 | 2.8 | 15.4 | 79.8 |

## ನಕ್ಷೆ-6
## ವೈಶ್ಯ ಜಾತಿಯಲ್ಲಿನ ಭಾಷಿಕರ ಅಂಕಿ-ಅಂಶಗಳು



ಈ ಕೋಷ್ಟಕದಲ್ಲಿನ ಅಂಕಿ - ಅಂಶಗಳಲ್ಲಿ ಕಾಣುವಂತೆ ಒಟ್ಟು ಕನ್ನಡ ಭಾಷಿಕರ ಪ್ರಮಾಣ 4.5 % ಗಳಷ್ಟಿದೆ. ಪುರುಷರು ಕನ್ನಡ ಏಕಭಾಷಿಕರು 4.8 % ಗಳಷ್ಟಿದ್ದರೆ, ಮಹಿಳೆಯರಲ್ಲಿ 5 % ಗಳಷ್ಟಿದೆ. ಇಲ್ಲಿ ಕನ್ನಡ ಏಕಭಾಷಿಕರೆಂದು ಹೇಳಿಕೊಳ್ಳುತ್ತಿರುವವರು ಚಿತ್ರದುರ್ಗ ಜಿಲ್ಲೆಯಿಂದ ಮತ್ತು ಕನ್ನಡ ಬಳಕೆಯಾಗುವ ಪ್ರದೇಶಗಳಿಂದ ಇಲ್ಲಿಗೆ ಬಂದು ನೆಲೆಸಿರುವವರು ಅಣು ಕುಟುಂಬಗಳಲ್ಲಿರುವರು. ಸರ್ಕಾರಿ ಉದ್ಯೋಗಗಳಲ್ಲಿತೊಡಗಿರುವವರು ಕನ್ನಡ ಏಕಭಾಷಿಕರೆಂದು ಹೇಳಿಕೊಂಡಿದ್ದಾರೆ. ಲಿಂಗಾಧಾರಿತ ಭಿನ್ನತೆಗಳಿಂದ ನೋಡಿದಾಗ ತೆಲುಗು ಏಕಭಾಷಿಕರು 2.5 % ಗಳಷ್ಟಿದ್ದರೆ, 1.1 % ಪುರುಷರಲ್ಲಿ, 2.8 % ಮಹಿಳೆಯರಲ್ಲಿ ಏಕಭಾಷಿಕರು ಕಾಣುತ್ತಿದ್ದಾರೆ. ಕಾರಣ ಈ ಸಮುದಾಯದಲ್ಲಿ ತೆಲುಗು ಏಕಭಾಷಿಕರು ಕಂಡುಬಂದಿರುವುದು ಬಳ್ಳಾರಿಯ ದ್ವಿಭಾಷಾ ಸಂದರ್ಭದಲ್ಲಿ, ಏಕೆಂದರೆ ಬಳ್ಳಾರಿಯಲ್ಲೆ ಹೆಚ್ಚಿನ ವೈಶ್ಯ ಸಮುದಾಯದವರು ನೆಲೆಸಿದ್ದು, ವ್ಯಾಪಾರ - ವಾಣಿಜ್ಯ ಇನ್ನಿತರೆ ವ್ಯವಹಾರಗಳಿಗಾಗಿ ಆಂಧ್ರದೊಂದಿಗಿನ ಸಂಬಂಧಗಳು ಇವರಿಗೆ ಇರುವುದರಿಂದ, ಬ್ಯಾಂಕ್, ಹಣದ ವ್ಯವಹಾರಗಳನ್ನು ನಡೆಸುವುದರಿಂದಲೂ, ವೈಶ್ಯರಲ್ಲಿ ಹೆಚ್ಚು ತೆಲುಗು ಬಳಕೆಯಾಗುವ ಸಂದರ್ಭಗಳಿವೆ. ಹೊರ ಆವರಣಗಳಲ್ಲೂ ತೆಲುಗಿನ ಸಂವಹನ ಕಷ್ಟಕರವಾಗಿಲ್ಲದ ಕಾರಣ ಅನೇಕರಿಗೆ ಕನ್ನಡವನ್ನು ಕಲಿಯುವ ಸಂದರ್ಭಗಳೇ ಬಂದಿಲ್ಲ, ಮೊದಲ ಮತ್ತು ಎರಡನೆಯ ತಲೆಮಾರುಗಳಲ್ಲಿ ಇರುವ ಅದರಲ್ಲೂ ಮಹಿಳೆಯರು ಇಂತಹ ಸಂದರ್ಭಗಳಲ್ಲಿ ಇದ್ದಾರೆ. ಕನ್ನಡದ ಗ್ರಹಿಕೆಯ ಕೌಶಲಗಳನ್ನು ತಕ್ಕಮಟ್ಟಿಗೆ ಇವರುಗಳು ಪಡೆದಿದ್ದಾರೆ. ಆಂಧ್ರಪ್ರದೇಶದ ಇತರೆಡೆಗಳಿಂದ ಬಂದು ವೈಶ್ಯ ಬ್ಯಾಂಕ್‌ಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಕೆಲ ಮಹಿಳೆಯರು ಕನ್ನಡವನ್ನು ಗ್ರಹಿಕೆಯ ನೆಲೆಯಷ್ಟೇ ಪಡೆದಿದ್ದಾರೆ. ಆದರೆ ಇವರ ಮಕ್ಕಳು ಕನ್ನಡವನ್ನು ಕಲಿತು ಬಳಸುತ್ತಾರೆ. ಈಗಿನ ತಲೆಮಾರುಗಳಲ್ಲಿ ಇವರಲ್ಲಿಯೂ ತೆಲುಗನ್ನು ಕಲಿತು ದ್ವಿಭಾಷಿಕರಾಗುವುದಕ್ಕಿಂತ, ಕನ್ನಡವನ್ನು ಕಲಿತು ದ್ವಿಭಾಷಿಕರಾಗುತ್ತಿರುವ ಪ್ರಮಾಣವೇ ಅಧಿಕವಾಗಿ ಕಾಣುತ್ತಿದೆ. ಇದು ಮಹಿಳೆಯರಲ್ಲಿ ಮತ್ತು ಪುರುಷರಲ್ಲಿ ಹೆಚ್ಚು ಲಿಂಗಾಧಾರಿತ ಭಿನ್ನತೆ ಇಲ್ಲ. ಏಕೆಂದರೆ ಶೈಕ್ಷಣಿಕ ಸಂದರ್ಭಗಳಿಗೆ ಒಳಗಾಗುತ್ತಿರುವುದು ಕನ್ನಡ ಮತ್ತು ಇಂಗ್ಲಿಶ್ ಭಾಷೆಗಳ ಸಂದರ್ಭದಲ್ಲೆ ಆದ್ದರಿಂದ ಇವರಲ್ಲಿ ಇತ್ತೀಚೆಗೆ ಮಹಿಳೆಯರು ಮತ್ತು ಪುರುಷರು ವ್ಯಾಪಾರಗಳಿಗೆ ತೊಡಗಿಕೊಳ್ಳದೆ ಉನ್ನತ ಶಿಕ್ಷಣ ಪಡೆದು ಸರ್ಕಾರಿ ಉದ್ಯೋಗಗಳಿಗಾಗಿ ಹಾತೊರೆಯುವವರ ಸಂಖ್ಯೆ ಹೆಚ್ಚಾಗಿ ಕಾಣುತ್ತಿದೆ. ಆದ್ದರಿಂದ ತಲೆಮಾರುಗಳಲ್ಲಿ ಕನ್ನಡವನ್ನು ಹೆಚ್ಚು ಬಳಸುವ ಸಂದರ್ಭಗಳಿಗೆ ಇವರು ಒಳಗಾಗುತ್ತಿದ್ದಾರೆ.

### ಒಕ್ಕಲಿಗ

ಕನ್ನಡದಲ್ಲಿ ಒಕ್ಕಲಿಗ ಎಂಬ ಪದಕ್ಕೆ ಒಕ್ಕಲುತನ ಅಥವಾ ಬೇಸಾಯ ಮಾಡುವವನು ಎಂಬರ್ಥವಿದೆ. ಒಕ್ಕಲಿಗ ಎಂಬ ಪದ ಕರ್ನಾಟಕದಲ್ಲಿ ಗೌಡರು ಎಂಬ ಸಂಕುಚಿತ ಅರ್ಥಕ್ಕೆ ಒಳಗಾಗಿದೆ. ವಿಶಾಲಾರ್ಥದಲ್ಲಿ ಕರ್ನಾಟಕದ ಪ್ರತಿ ಹಳ್ಳಿಯಲ್ಲಿ ಒಕ್ಕಲಿಗರಿದ್ದಾರೆ. ಒಕ್ಕಲಿಗ ಪದಕ್ಕೆ ಗೌಡ ಎಂಬ ಪ್ರತ್ಯಯ ಬಳಕೆಗೆ ಬಂದ ಅದು ಒಂದು ಸಮುದಾಯವಾಗಿ ರೂಪುಗೊಂಡಿದೆ. ಗೌಡ ಎಂದರೆ ಯಜಮಾನ, ನಾಯಕ, ಒಡೆಯ ಎಂದರ್ಥ. ಗೌಡ, ಗೌವುಡ, ರೆಡ್ಡಿ ಎಂದೂ

ಗೌಡರನ್ನು ಕರೆಯುತ್ತಾರೆ. ಆದರೆ ಎಲ್ಲಾ ಕೃಷಿಕ ಸಮುದಾಯಗಳೂ ಒಕ್ಕಲಿಗ ಸಮುದಾಯದವರಾಗಿರಬೇಕು ಎಂದೇನಿಲ್ಲ.

ಒಕ್ಕಲಿಗರಲ್ಲಿ ಹಲವಾರು ಪಂಗಡಗಳಿವೆ. ಅವುಗಳೆಂದರೆ ಗಂಗಡಿಕಾರ, ಮರಸು, ಮುಸುಕು, ಕುಂಚಟಿಗ, ಹಳ್ಳಿಕಾರ, ನೊಣಬ, ರೆಡ್ಡಿ, ಸರ್ಪ, ಜೋಳ, ಸೆಟ್ಟಿಗಾರ, ಕಾಕಿನಾಟ, ಕಾಪು, ಕಮ್ಮ, ರೆಡ್ಡಿ ಒಕ್ಕಲಿಗ, ದಾಸ ಒಕ್ಕಲಿಗ, ನಾಮಧಾರಿ, ಮುಂತಾದ ಹಲವು ಒಳಪಂಗಡಗಳಿವೆ. ಕೆಲವು ವಿದ್ವಾಂಸರು ಒಕ್ಕಲಿಗರ ಧಾರ್ಮಿಕ ಆಚರಣೆ, ಕಸುಬು ಇತ್ಯಾದಿಗಳನ್ನು ಆಧರಿಸಿ ಉಪಪಂಗಡ ಅಥವಾ ಉಪಜಾತಿಗಳೆಂದು ಗುರುತಿಸಿದ್ದಾರೆ. ಒಕ್ಕಲಿಗರು ಕೃಷಿಯಲ್ಲಿ ಮಾತ್ರವಲ್ಲದೆ ಸರ್ಕಾರಿ ಮತ್ತು ಖಾಸಗಿ ಉದ್ಯೋಗಗಳಲ್ಲೂ ರಾಜಕೀಯ ಕ್ಷೇತ್ರದಲ್ಲೂ ಮುಂದಿದ್ದಾರೆ. ಇವರು ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಮುಂದುವರೆದ ಸಮುದಾಯದವರಾಗಿದ್ದಾರೆ. ಇವರಲ್ಲಿನ ಬಹುಪಾಲು ಒಳಪಂಗಡಗಳವರು ಕನ್ನಡ ಸ್ವಭಾಷಿಕರಾಗಿದ್ದು, ಬರವಣಿಗೆಯ ಭಾಷೆಯಾಗಿ ಕನ್ನಡವನ್ನು ಬಳಸುತ್ತಾರೆ. ರೆಡ್ಡಿ ಒಕ್ಕಲಿಗ ಮರಸು ಒಕ್ಕಲಿಗ, ಕಮ್ಮ, ಕಾಪುರೆಡ್ಡಿ ಮುಂತಾದವರ ಮನೆಮಾತು ತೆಲುಗು, ಇವರಲ್ಲಿ ಅನೇಕರು ಹಲವಾರು ತಲೆಮಾರುಗಳ ಹಿಂದೆ ಆಂಧ್ರದಿಂದ ಕೃಷಿಗಾಗಿ ವಲಸೆ ಬಂದು ನೆಲೆಸಿದ್ದಾರೆ. ಮನೆ ಮತ್ತು ಒಳಗುಂಪುಗಳಲ್ಲಿ ತೆಲುಗನ್ನು ಪ್ರಧಾನವಾಗಿ ಮಾತನಾಡುವ ಇವರು ಕನ್ನಡವನ್ನು ಬರವಣಿಗೆಯ ಭಾಷೆಯಾಗಿ ಬಳಸುತ್ತಾರೆ. ಕರ್ನಾಟಕ - ಆಂಧ್ರ ಗಡಿ ಪ್ರದೇಶದ ಜಿಲ್ಲೆಗಳಲ್ಲಿ ತೆಲುಗು ಮಾತನಾಡುವ ಒಕ್ಕಲಿಗರು ಅದರಲ್ಲೂ ಕಮ್ಮ, ಕಾಪು, ಮರಸು ರೆಡ್ಡಿ ಒಕ್ಕಲಿಗರು ಹೆಚ್ಚಾಗಿ ಕಂಡುಬರುತ್ತಾರೆ. ಸಾಂಪ್ರದಾಯಿಕವಾಗಿ ಇವರು ಕೃಷಿಕರು ಮತ್ತು ವ್ಯಾಪಾರವೇ ಮುಖ್ಯ ಉದ್ಯೋಗ, ಸರ್ಕಾರಿ ಹಾಗೂ ಖಾಸಗಿ ಸಂಸ್ಥೆಗಳಲ್ಲೂ ನೌಕರಿ ಮಾಡುತ್ತಾರೆ. ಕರ್ನಾಟಕದಲ್ಲಿ ಇವರು ವಾಸಿಸುತ್ತಿರುವ ಪ್ರದೇಶಗಳಲ್ಲಿ ರಾಜಕೀಯ ಪ್ರಾಬಲ್ಯವನ್ನು ಹೊಂದಿದ್ದಾರೆ.

ಬಳ್ಳಾರಿ ಜಿಲ್ಲೆಯಲ್ಲಿ ಹೆಚ್ಚಾಗಿ ಕಂಡುಬರುವ ಒಕ್ಕಲಿಗರ ಒಳಪಂಗಡಗಳು, ಕಮ್ಮ, ಕಾಪುರೆಡ್ಡಿಗಳೇ ಅಧಿಕ ಸಂಖ್ಯೆಯಲ್ಲಿದ್ದಾರೆ. ಈ ಜಿಲ್ಲೆಯಲ್ಲಿನ ನೀರಾವರಿ ಸೌಲಭ್ಯ ಮತ್ತು ಕೃಷಿ ಭೂಮಿಯಿಂದಾಗಿ ಅನೇಕ ವರ್ಷಗಳ ಹಿಂದೆ ಆಂಧ್ರಪ್ರದೇಶದ ಹಲವು ಭಾಗಗಳಿಂದ ಬಳ್ಳಾರಿ ಜಿಲ್ಲೆಗೆ ವಲಸೆ ಬಂದಿರುವ ಇವರು ಅನೇಕ ಕಡೆಗಳಲ್ಲಿ ಕ್ಯಾಂಪ್‌ಗಳನ್ನು ಮಾಡಿಕೊಂಡು ನೆಲೆಸಿದ್ದಾರೆ. ಇವರಲ್ಲಿ ಅವಿಭಕ್ತ ಕುಟುಂಬಗಳೇ ಹೆಚ್ಚಿನ ಸಂದರ್ಭದಲ್ಲಿ ಕಾಣುತ್ತದೆ. ಸರ್ಕಾರಿ ಮತ್ತು ಖಾಸಗಿ ಉದ್ಯೋಗ ಮಾಡುವವರಲ್ಲಿ ಅಣು ಕುಟುಂಬಗಳಿರುವುದನ್ನು ಕಾಣಲಾಗಿದೆ. ಅಲ್ಲದೆ ತಲೆಮಾರುಗಳಲ್ಲಿ ಇವರು ಸಾಕ್ಷರತೆಯ ಕೌಶಲವನ್ನು ಇಂಗ್ಲಿಶ್ ಮತ್ತು ಕನ್ನಡದಲ್ಲಿ ಪಡೆದುಕೊಳ್ಳುತ್ತಿರುವುದರಿಂದ ಈಗಿನ ತಲೆಮಾರುಗಳಲ್ಲಿ ತೆಲುಗು ಕೆಲವು ಆವರಣಗಳಲ್ಲಿ ಮಾತ್ರ ಬಳಕೆಯಾಗುತ್ತಿದೆ. ಆದರೆ ಕೃಷಿಯನ್ನು ಅವಲಂಬಿಸಿರುವ ತೆಲುಗು ಭಾಷಿಕ ಕಮ್ಮ ರೆಡ್ಡಿ ಕುಟುಂಬಗಳಲ್ಲಿ ಹೆಚ್ಚಿನವರು ಅವಿಭಕ್ತ ಕುಟುಂಬದಲ್ಲೆ ವಾಸವಾಗಿರುವುದರಿಂದ ಅವರಲ್ಲಿ ತೆಲುಗು ಹೆಚ್ಚಿನ ಸಂದರ್ಭದಲ್ಲಿ ಬಳಕೆಯಾಗುತ್ತಿದೆ. ಆದರೆ ಕನ್ನಡದ ಸಾಮಾಜಿಕ

ಸಂದರ್ಭಗಳಿಗೆ ಹೆಚ್ಚು ತೆರೆದುಕೊಳ್ಳುವವರು ಪುರುಷರೇ. ಆದ್ದರಿಂದ ಇವರಲ್ಲಿ ತೆಲುಗು ಭಾಷೆಯನ್ನು ಉಳಿಸಿಕೊಂಡು ಬರುತ್ತಿರುವವರು ಮಹಿಳೆಯರೇ ಆಗಿದ್ದಾರೆ. ತೆಲುಗು ಏಕಭಾಷಿಕರು ಸಹ ಮಹಿಳೆಯರಲ್ಲೆ ಈ ಸಮುದಾಯದಲ್ಲಿ ಮೊದಲ ತಲೆಮಾರುಗಳಲ್ಲಿ ಕಾಣುತ್ತಾರೆ. ವೈವಾಹಿಕ ಸಂಬಂಧದಿಂದ ಬಂದ ಮಹಿಳೆಯರಲ್ಲಿ ಹೆಚ್ಚಿನ ಕನ್ನಡದ ಸಾಮಾಜಿಕ ಸಂದರ್ಭಗಳಿಗೆ ಒಳಗಾಗದ ಮಹಿಳೆಯರು ತೆಲುಗು ಏಕಭಾಷಿಕರಿರುವುದನ್ನು ಕಾಣಲಾಗಿದೆ. ಹಾಗೂ ಭಾಷಾ ದ್ವೀಪಗಳಲ್ಲಿ (ಕ್ಯಾಂಪ್‌ಗಳು) ವಾಸವಾಗಿರುವ ಮಹಿಳೆಯರು ಹೆಚ್ಚಾಗಿ ಕನ್ನಡದ ಸಾಮಾಜಿಕ ಸಂದರ್ಭಗಳಿಗೆ ತೆರೆದುಕೊಳ್ಳದ ಕಾರಣದಿಂದಾಗಿ ಸುತ್ತಮುತ್ತಲ ಆವರಣಗಳಲ್ಲಿ ತೆಲುಗನ್ನು ಬಳಸುವ ಸಂದರ್ಭಗಳೇ ಹೆಚ್ಚಾಗಿರುವ ಕಾರಣದಿಂದಾಗಿ, ಮನೆ ಆವರಣ, ಅಕ್ಕಪಕ್ಕದ ಮನೆ ಸ್ನೇಹಿತರು, ಇನ್ನಿತರ ಆವರಣಗಳಲ್ಲಿ ತೆಲುಗನ್ನು ಮಾತನಾಡುವ ಸಂದರ್ಭಗಳು ಇರುವುದರಿಂದಾಗಿ ಮಹಿಳೆಯರಲ್ಲಿ ತೆಲುಗು ಭಾಷೆಯು ಹೆಚ್ಚು ಸಂಗೋಪನೆಯಾಗುತ್ತಿದೆ. ಕನ್ನಡಿಗರೊಂದಿಗೆ ಅಥವಾ ಕನ್ನಡದ ಸಂದರ್ಭಗಳಿಗೆ ಎದುರಾಗುವ ಸನ್ನಿವೇಶಗಳು ಅವರಿಗೆ ಒದಗಿ ಬಂದಾಗ ವ್ಯವಹಾರಕ್ಕೆ ಎಷ್ಟು ಬೇಕು ಅಷ್ಟು ಕನ್ನಡವನ್ನು ತೆಲುಗು ಮಿಶ್ರಭಾಷೆಯಲ್ಲಿ ಬಳಸಿ ಆ ಸಂದರ್ಭಗಳನ್ನು ನಿರ್ವಹಿಸುತ್ತಾರೆ. ಅಲ್ಲದೆ ಇವರೆಲ್ಲಾ ಟಿ.ವಿ. ರೇಡಿಯೋ, ಸಿನಿಮಾ ಮುಂತಾದವುಗಳಲ್ಲಿ ಮನರಂಜನೆಯ ಕಾರ್ಯಕ್ರಮಗಳನ್ನು ನೋಡುವಾಗ, ಕೇಳುವಾಗ ಅಥವಾ ಪತ್ರಿಕೆಗಳನ್ನು ಓದುವ ಸಂದರ್ಭಗಳು ಸಾಮಾನ್ಯವಾಗಿ ತೆಲುಗೇ ಆಗಿರುತ್ತದೆ. ಬಹಳ ಕಡಿಮೆ ಕನ್ನಡವನ್ನು ಗ್ರಹಿಸುವ ಸಂದರ್ಭಗಳಲ್ಲಿ ಇವರಿದ್ದಾರೆ. ಕ್ಷೇತ್ರಕಾರ್ಯದಲ್ಲಿನ ಅಂಕಿ - ಅಂಶಗಳೂ ಸಹ ಇದನ್ನು ಸ್ಪಷ್ಟಪಡಿಸುತ್ತವೆ.

| | ಕನ್ನಡ ಏಕಭಾಷಿಕರು | ತೆಲುಗು ಏಕಭಾಷಿಕರು | ಕನ್ನಡ-ತೆಲುಗು ದ್ವಿಭಾಷಿಕರು | ತೆಲುಗು-ಕನ್ನಡ ದ್ವಿಭಾಷಿಕರು |
|---|---|---|---|---|
| ಒಟ್ಟು ಭಾಷಿಕರು | 5.5 | 9.1 | 17.2 | 66.9 |
| ಪುರುಷ | 4.3 | 5.1 | 21.1 | 69.3 |
| ಮಹಿಳೆ | 6.6 | 15.5 | 13.3 | 64.4 |

## ನಕ್ಷೆ - 7
## ಒಕ್ಕಲಿಗ ಜಾತಿಯಲ್ಲಿನ ಭಾಷಿಕರ ಅಂಕಿ-ಅಂಶಗಳು



ಒಟ್ಟು ಕನ್ನಡ ಏಕಭಾಷಿಕರಲ್ಲಿ 5.5 % ಗಳಷ್ಟಿದ್ದರೆ, ಪುರುಷರಲ್ಲಿ 4.3 % ಗಳಷ್ಟು, ಮಹಿಳೆಯರಲ್ಲಿ 6.6 % ಪ್ರಮಾಣದಲ್ಲಿದ್ದಾರೆ. ಕನ್ನಡ ಏಕಭಾಷಿಕರೆಂದು ಹೇಳಿಕೊಂಡಿರುವವರು ಕನ್ನಡವನ್ನು ಮನೆಮಾತಾಗಿ ಮಾತನಾಡುವ ಒಕ್ಕಲಿಗ ಕುಟುಂಬಗಳು, ಇವರ ಪ್ರಧಾನ ಉದ್ಯೋಗ ಕೃಷಿ, ಇವರುಗಳು ಸಾಕ್ಷರತೆಯ ಕೌಶಗಳನ್ನು ಪಡೆದುಕೊಳ್ಳುತ್ತಿರುವುದು ಸಹ ಕನ್ನಡದಲ್ಲೆ. ಮಹಿಳೆಯರಲ್ಲಿ ಪುರುಷರಿಗಿಂತ ಹೆಚ್ಚಿನ ಏಕಭಾಷಿಕರಿರುವುದಕ್ಕೆ ಕಾರಣ. ಈ ಸಮುದಾಯಗಳಲ್ಲಿ ಅವಿಭಕ್ತ ಕುಟುಂಬಗಳು ಹೆಚ್ಚಾಗಿದ್ದು, ಇವು ಕೃಷಿಯನ್ನೇ ಮೂಲ ಉದ್ಯೋಗವಾಗಿ ಅವಲಂಬಿಸಿವೆ. ಸಮಾಜದಲ್ಲಿನ ಹೆಚ್ಚಿನ ಸಾಮಾಜಿಕ ಸಂಪರ್ಕಗಳಿಗೆ ಒಳಗಾದಾಗ ಕನ್ನಡದ ಸಾಮಾಜಿಕ ಸಂದರ್ಭಗಳಿಗೆ ಒಳಗಾಗುವ ಮಹಿಳೆಯರು ಕನ್ನಡ ಏಕಭಾಷಿಕರಾಗಿ ಉಳಿದಿದ್ದಾರೆ. ಕೃಷಿ ಕೂಲಿಗಳ ಭಾಷೆ ತೆಲುಗಾಗಿದ್ದರೂ ಇನ್ನಿತರೆ ತೆಲುಗು ಭಾಷಿಕರು ಈ ಕುಟುಂಬದ ಮಹಿಳೆಯರ ಜೊತೆ ವ್ಯವಹರಿಸುವಾಗ ಕನ್ನಡದಲ್ಲೇ ವ್ಯವಹರಿಸುವುದರಿಂದಲೂ ಕುಟುಂಬದ ಯಜಮಾನ್ಯವನ್ನು ಮುಖ್ಯವಾಗಿ ಪುರುಷರೆ ನಿರ್ವಹಿಸುವುದರಿಂದಲೂ ಇವರು ಏಕಭಾಷಿಕರಾಗಿ ಉಳಿದಿರಬಹುದು. ತೆಲುಗು ಏಕಭಾಷಿಕರಲ್ಲಿ ಪುರುಷರಿಗಿಂತ ಮಹಿಳೆಯರೆ ಏಕಭಾಷಿಕರಾಗಿರುವ ಪ್ರಮಾಣ ಕಾಣುತ್ತಿದೆ. ಇದಕ್ಕೆ ಕಾರಣಗಳೇನು? ತೆಲುಗು ಏಕಭಾಷಿಕರೆಂದು ಹೇಳಿಕೊಂಡಿರುವ ಬಹುಪಾಲು ಮಹಿಳೆಯರಲ್ಲಿ ಕಮ್ಮ, ಕಾಪು ರೆಡ್ಡಿ ಕುಟುಂಬದವರು, ಇವರು ಆರ್ಥಿಕವಾಗಿ, ಸಾಮಾಜಿಕವಾಗಿ ಹೆಚ್ಚು ಪ್ರಬಲವಾಗಿದ್ದಾರೆ. ನೂರಾರು ಎಕರೆ ಭೂಮಿಯನ್ನು ಹೊಂದಿ ಕೃಷಿಯನ್ನು ಮುಖ್ಯ ಉದ್ಯೋಗ ಮಾಡಿಕೊಂಡಿದ್ದಾರೆ. ಇದು ಹೆಚ್ಚಿನ ಆದಾಯದ ಮೂಲವಾಗಿದೆ. ಹಾಗಾಗಿ ಈ ಕುಟುಂಬದಲ್ಲಿರುವ ಮಹಿಳೆಯರು ಆರ್ಥಿಕವಾಗಿ ಹೆಚ್ಚು ಸಬಲರಾಗಿರುವುದು ಹೆಚ್ಚಿನ ಸಾಮಾಜಿಕ ಸಂಪರ್ಕವನ್ನು ಅದೇ ವರ್ಗ, ಜಾತಿಯ ಜನರೊಂದಿಗೆ ಹೊಂದಿರುತ್ತಾರೆ. ಜೊತೆಗೆ ಹೆಚ್ಚಿನ ಮಹಿಳೆಯರು ಆಂಧ್ರದಿಂದ ವೈವಾಹಿಕ ಸಂಬಂಧದಿಂದಾಗಿ ಇಲ್ಲಿಗೆ ಬಂದಿರುವುದರಿಂದ ಅವರಿರುವ ಸುತ್ತಮುತ್ತಲ ಪರಿಸರ, ಭಾಷಾ ಬಳಕೆಯ ಆವರಣಗಳು ಎಲ್ಲವೂ ತೆಲುಗಿನ ಸಾಮಾಜಿಕ ಸಂದರ್ಭಗಳಲ್ಲೆ ಇರುತ್ತವೆ. ಆದ್ದರಿಂದ ಕನ್ನಡವನ್ನು ಕಲಿಯುವ ಅವಶ್ಯಕತೆಯಾಗಲಿ, ಅವಕಾಶಗಳಾಗಲಿ ಕಡಿಮೆ. ಕನ್ನಡದ ಸಾಮಾಜಿಕ ಸಂದರ್ಭಗಳಿಗೆ ಒಳಗಾದ ಮಹಿಳೆಯರಲ್ಲಿಯೂ, ತೆಲುಗನ್ನು ಹೆಚ್ಚಿನ ಸಂದರ್ಭದಲ್ಲಿ ಉಳಿಸಿಕೊಂಡಿದ್ದು, ಕನ್ನಡ ಭಾಷೆಯ ವಿಸ್ತಾರ ಕಡಿಮೆ ಇದ್ದಂತಿದೆ. ದೀರ್ಘವಾಗಿ ಕನ್ನಡದ ಸಂಭಾಷಣೆಯಲ್ಲಿ ತೊಡಗಲು ಕಷ್ಟವಿದ್ದಂತಿದೆ. ಕನ್ನಡವನ್ನು ತಕ್ಕಮಟ್ಟಿಗೆ ಗ್ರಹಿಕೆಯ ನೆಲೆಗಳಲ್ಲಿ ಪಡೆದಿರುತ್ತಾರಷ್ಟೆ. ತೆಲುಗು ಏಕಭಾಷಿಕರು ಪುರುಷರಲ್ಲಿ 5.1 % ಗಳಷ್ಟಿದ್ದಾರೆ. ಇವರು ಭಾಷಾದ್ವೀಪಗಳಲ್ಲಿ ಕೃಷಿಯನ್ನು ಅವಲಂಬಿಸಿರುವ ಕುಟುಂಬಗಳಲ್ಲಿ ಕಾಣುವವರಾಗಿದ್ದು, ಹೆಚ್ಚಾಗಿ ಮೊದಲ ತಲೆಮಾರುಗಳಲ್ಲಿ ಕಾಣುತ್ತಾರೆ. ಕನ್ನಡವನ್ನು ತಕ್ಕಮಟ್ಟಿಗೆ ಗ್ರಹಿಸುವ ನೆಲೆಗಳನ್ನು ಇವರು ಪಡೆದಿದ್ದಾರೆ. ದ್ವಿಭಾಷಿಕತೆಯ ಪ್ರಮಾಣವನ್ನು ನೋಡಿದಾಗಲೂ ಕನ್ನಡಿಗ ಒಕ್ಕಲಿಗರು ತೆಲುಗು ಕಲಿತು ದ್ವಿಭಾಷಿಕರಾಗುವ ಪ್ರಮಾಣಕ್ಕಿಂತ ತೆಲುಗು ಭಾಷಿಕರು ಕನ್ನಡವನ್ನು ಕಲಿತು ದ್ವಿಭಾಷಿಕರಾಗುವ ಪ್ರಮಾಣವೇ ಹೆಚ್ಚಾಗುತ್ತಿದೆ. ಇದಕ್ಕೆ ಕಾರಣ ಇವರುಗಳು ಶಿಕ್ಷಣದ ಸಂದರ್ಭಗಳಿಗೆ ಒಳಗಾಗುವ ಸನ್ನಿವೇಶಗಳಿಂದಾಗಿ ರಾಜಕೀಯವಾಗಿ ಪ್ರಬಲರಾಗಿರುವ ಕಾರಣಕ್ಕಾಗಿ ಕನ್ನಡವನ್ನು ಕಲಿಯುವ ಸಂದರ್ಭಗಳು

ಹೆಚ್ಚುತ್ತಿರಬಹುದು. ಮಹಿಳೆಯರಲ್ಲಿ ಇದು ಕಡಿಮೆ ಇರಬಹುದಷ್ಟೆ. ಈಗಿನ ತಲೆಮಾರುಗಳಲ್ಲಿ ಮಹಿಳೆಯರಲ್ಲೂ ದ್ವಿಭಾಷಿಕರಾಗುವ ಪ್ರಮಾಣ ಹೆಚ್ಚಾಗುತ್ತಿದೆ. ಇತ್ತೀಚೆಗೆ ಉನ್ನತ ಶಿಕ್ಷಣ, ಅಧಿಕಾರದ ಸ್ಥಾನಮಾನಗಳನ್ನು ಪಡೆಯಲು ಇಂಗ್ಲಿಶ್‌ನಲ್ಲಿ ಹೆಚ್ಚು ಸಾಕ್ಷರತೆಯ ಕೌಶಲಗಳನ್ನು ಪಡೆಯುತ್ತಿದ್ದಾರೆ. ಕನ್ನಡದ ಶೈಕ್ಷಣಿಕ ಸಂದರ್ಭಗಳಿಗೆ ಇವರಲ್ಲಿನ ಉನ್ನತವರ್ಗ, ಮೇಲ್‌ಮಧ್ಯಮ, ಮಧ್ಯಮವರ್ಗದವರು ಒಳಗಾಗುವುದು ಕಡಿಮೆ. ಜೊತೆಗೆ ಇವರುಗಳು ಬಳಸುವ ತೆಲುಗು ಭಾಷೆ ಹೆಚ್ಚು ಪ್ರತಿಷ್ಠೆ ಎನ್ನುವ ಮನೋಭಾವವನ್ನು ಕಾಣಲಾಗಿದೆ.

**ಪರಿಶಿಷ್ಟ ಜಾತಿಗಳು**

ಸರ್ಕಾರವು ಪರಿಶಿಷ್ಟ ಜಾತಿಗಳೆಂದು ಗುರುತಿಸಿರುವ ಜಾತಿಗಳನ್ನು ಇಲ್ಲಿಯೂ ಪರಿಶಿಷ್ಟ ಜಾತಿಯೆಂಬ ಪರಿಭಾಷೆಯಲ್ಲಿ ಬಳಸಲಾಗಿದೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ದೊರೆತ ಮಾಹಿತಿಯಲ್ಲಿ ಕಂಡುಬಂದಿರುವ ಪರಿಶಿಷ್ಟ ಜಾತಿಗಳನ್ನು ಆಧಾರವಾಗಿಟ್ಟುಕೊಂಡು ಭಾಷಿಕರ ಬಗೆಗಿನ ಮಾಹಿತಿಯನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ವಡ್ಡ**

ಇವರನ್ನು ಬೋವಿಗಳೆಂದೂ ಕರೆಯುತ್ತಾರೆ. ಇವರಲ್ಲಿ ಕಲ್ಲು ವಡ್ಡ, ಮಣ್ಣು ವಡ್ಡ, ಉಪ್ಪು ವಡ್ಡರೆಂಬ ಉಪಪಂಗಡಗಳಿವೆ. ಇವರ ಮನೆಮಾತು ತೆಲುಗು, ಕೆಲವು ಕುಟುಂಬಗಳಲ್ಲಿ ಮನೆಮಾತಾಗಿ ಕನ್ನಡವನ್ನೂ ಬಳಸುತ್ತಾರೆ. ಕಲ್ಲು ಒಡೆಯುವುದು ಹಾಗೂ ಕೂಲಿ ಕೆಲಸ ಮಾಡುವುದು ಇವರ ಸಾಂಪ್ರದಾಯಿಕ ವೃತ್ತಿಗಳಾಗಿವೆ. ವ್ಯವಸಾಯವು ಇವರ ಇತ್ತೀಚಿನ ಕಸುಬು. ಇವರು ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದ ವರ್ಗದವರಾಗಿದ್ದಾರೆ.

ಬಳ್ಳಾರಿ ಜಿಲ್ಲೆಯಲ್ಲಿ ಕಂಡುಬರುತ್ತಿರುವ ಪರಿಶಿಷ್ಟ ಜಾತಿಗಳಲ್ಲಿ ಹೆಚ್ಚಿನ ಸಂಖ್ಯೆಯವರು ಆಂಧ್ರಪ್ರದೇಶದ ಅನೇಕ ಭಾಗಗಳಿಂದ ಉದ್ಯೋಗಕ್ಕಾಗಿ ವಲಸೆ ಬಂದಿರುವವರಾಗಿದ್ದಾರೆ. ಅದರಲ್ಲಿ ಹೆಚ್ಚಿನವರು ಕೂಲಿಯನ್ನು ಮಾಡುತ್ತಿದ್ದು,ಕಟ್ಟಡಗಳಿಗೆ ಕಲ್ಲು ಹೊಡೆಯುವ ಕೆಲಸಗಳಲ್ಲಿ ಹೆಚ್ಚು ನಿರತರಾಗಿದ್ದಾರೆ. ಇನ್ನು ಕೆಲವರು ಬಳ್ಳಾರಿ ಏಕೀಕರಣಕ್ಕೂ ಮುಂಚಿನಿಂದ ಇಲ್ಲಿ ನೆಲೆಸಿರುವವರು. ಮುನಿಸಿಪಾಲಿಟಿಗಳಲ್ಲಿ, ಆಸ್ಪತ್ರೆಗಳಲ್ಲಿ , ಜವಾನರು, ಬೀದಿ ಕಸಗುಡಿಸುವವರು, ಶೌಚಾಲಯಗಳನ್ನು ತೊಳೆಯುವ ಕೆಲಸಗಳಲ್ಲಿ ನಿರತರಾಗಿದ್ದಾರೆ. ಕೆಲವೇ ಕೆಲವರು ಸಣ್ಣ ಪುಟ್ಟ ಸರ್ಕಾರಿ, ಅರೆ ಸರ್ಕಾರಿ ಕೆಲಸಗಳಲ್ಲಿದ್ದಾರೆ. ಇವರಿಗೆ ದಿನನಿತ್ಯದ ಪ್ರಾಥಮಿಕ ಅವಶ್ಯಕತೆಯಾದ ಊಟ, ಬಟ್ಟೆ, ವಸತಿ ಸಮಸ್ಯೆಯೆ ಹೆಚ್ಚು ಮುಖ್ಯವಾಗಿರುವುದಲ್ಲದೆ ಕಡಿಮೆ ಸಾಕ್ಷರತೆಯ ಸಂದರ್ಭಗಳಲ್ಲಿ ಇವರಿದ್ದಾರೆ. ಬಹುಪಾಲು ಭಾಷಿಕರು ಈ ಸಮುದಾಯದಲ್ಲಿ ಒಂದೇ ಪ್ರದೇಶದಲ್ಲಿ ಒಟ್ಟೊಟ್ಟಿಗೆ ನೆಲೆಸುವುದರಿಂದ ಒಳಗುಂಪುಗಳಲ್ಲಿ ಹೆಚ್ಚಾಗಿ, ಹೊರಗುಂಪುಗಳಲ್ಲಿ ಕಡಿಮೆ ಪ್ರಮಾಣದಲ್ಲಿ ತೆಲುಗು ಭಾಷೆಯನ್ನು ಬಳಸುತ್ತಿದ್ದಾರೆ. ಇತ್ತೀಚಿನ ಕರ್ನಾಟಕ ಸರ್ಕಾರದ ಕನ್ನಡ ಭಾಷೆಯ ಅಭಿವೃದ್ಧಿ ಯೋಜನೆಗಾಗಿ ತೆಗೆದುಕೊಳ್ಳಲಾದ ನಿರ್ಧಾರಗಳಿಂದಾಗಿ ಇವರುಗಳಲ್ಲಿ ಕನ್ನಡದಲ್ಲಿ

ಸಾಕ್ಷರತೆಯ ಕೌಶಲಗಳನ್ನು ಪಡೆದುಕೊಳ್ಳುವುದು ಹೆಚ್ಚಾಗುತ್ತಿರುವುದನ್ನು ಕಾಣಲಾಗಿದೆ.

### ಮಾಲ

ಇವರು ತಮ್ಮ ಜಾತಿಯವರೊಂದಿಗೆ ತೆಲುಗಿನಲ್ಲಿ ಕನ್ನಡಿಗರೊಂದಿಗೆ ಕನ್ನಡದಲ್ಲೂ ವ್ಯವಹರಿಸಿ ಕನ್ನಡ ಲಿಪಿಯನ್ನು ಬಳಸುತ್ತಾರೆ. ಕೃಷಿ ಕೂಲಿ ಇವರ ಮುಖ್ಯ ವೃತ್ತಿ. ಕೆಲವರಿಗೆ ಉಳುಮೆ ಮಾಡುವ ಭೂಮಿಯಿದೆ. ಸರ್ಕಾರಿ ಸೇವೆ ಮತ್ತು ಖಾಸಗಿ ನೌಕರಿ ಬ್ಯಾಂಕು, ಹತ್ತಿ ಮತ್ತು ಎಣ್ಣೆ ಗಿರಣಿಗಳಲ್ಲಿ ಇತ್ತೀಚೆಗೆ ಕೆಲವರು ಕೆಲಸ ಮಾಡುತ್ತಾರೆ. ಕೆಲವರು ಸ್ವಯಂ ಉದ್ಯೋಗವನ್ನು ಮಾಡಿಕೊಂಡು ಚಿಲ್ಲರೆ ವ್ಯಾಪಾರ ಹಾಗೂ ತರಕಾರಿ ಮಾರುವವರೂ ಆಗಿದ್ದಾರೆ. ಇವರು ಆರ್ಥಿಕವಾಗಿ, ಸಾಮಾಜಿಕವಾಗಿ ಹಿಂದುಳಿದವರಾಗಿದ್ದಾರೆ.

### ಮಾದಿಗ

ಮಾದಿಗ ಸಮುದಾಯದವರು ಮೂಲತಃ ಆಂಧ್ರಪ್ರದೇಶದವರಾದರೂ ಕನ್ನಡ ಮಾತನಾಡುವವರೂ ಇದ್ದಾರೆ. ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲೂ ಇವರು ಕಂಡುಬರುತ್ತಾರೆ. ಇವರಲ್ಲಿ ದೇಶಭಾಗದವರು ಮತ್ತು ಮಾತಂಗದವರು ಎಂಬ ಎರಡು ಪ್ರಭೇದಗಳಿವೆ. ಇವರ ಮನೆಮಾತುಗಳು ತೆಲುಗು, ಕನ್ನಡವನ್ನು ಕಲಿತು ದ್ವಿಭಾಷಿಕರಾಗಿದ್ದಾರೆ. ಇವರ ಸಾಂಪ್ರದಾಯಿಕ ವೃತ್ತಿಗಳೆಂದರೆ ಚರ್ಮದ ಕೆಲಸ, ಚರ್ಮ ಹದ ಮಾಡುವರು. ಚಪ್ಪಲಿ ಹೊಲೆಯುವುದು ಮತ್ತು ವ್ಯವಸಾಯದ ಕೂಲಿಗಳಾಗಿ ದುಡಿಯುವುದು. ಇತ್ತೀಚೆಗೆ ಕೆಲವರು ಸರ್ಕಾರಿ ಹಾಗೂ ಖಾಸಗಿ ಉದ್ಯೋಗಗಳಲ್ಲಿದ್ದರೆ, ಕ್ರೈಸ್ತಧರ್ಮಕ್ಕೂ ಮತಾಂತರವಾಗಿದ್ದಾರೆ. ಕ್ರೈಸ್ತ ಧರ್ಮಕ್ಕೆ ಮತಾಂತರವಾಗಿರುವವರು ಹೆಚ್ಚು ಕನ್ನಡ ಭಾಷೆಗೆ ಪಲ್ಲಟಗೊಂಡಿದ್ದಾರೆ. ಇವರು ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದ ಸಮುದಾಯವರಾಗಿದ್ದಾರೆ.

### ನಾಯಿಂದ

ಇವರು ಕ್ಷೌರಿಕ ಸಮುದಾಯಕ್ಕೆ ಸೇರಿದವರಾಗಿದ್ದು ಕರ್ನಾಟಕದ ಎಲ್ಲಾ ಭಾಗಗಳಲ್ಲೂ ಕಂಡುಬರುತ್ತಾರೆ. ಭಂಡಾರಿ, ಕೆಲಸಿಗ, ಮಹಾರ್, ಪರಿಯಲಿಗ, ಕ್ಷೌರಿಕ, ಭಜಂತ್ರಿ, ಕ್ಷತ್ರಿಯ, ನಾವಟಿಗ, ಹಡಪದ, ಕೋಡಿಯ, ಅಂಬಟ್ಟನ್, ಮಂಗಳಿ ಮತ್ತು ನಾಪಿತರೆಂದು ಹಲವು ಹೆಸರುಗಳಿಂದ ಪರಿಚಿತರಾಗಿದ್ದಾರೆ. ಇವರು ಮಾತನಾಡುವ ಭಾಷೆಯ ಆಧಾರದ ಮೇಲೆ ಇವರು ಉಪಜಾತಿಗಳನ್ನು ಹೊಂದಿದ್ದಾರೆಂದು ಆಧಾರಗಳಿಂದ ತಿಳಿದುಬರುತ್ತದೆ. ಇವರ ಸಾಂಪ್ರದಾಯಿಕ ವೃತ್ತಿ ಕ್ಷೌರ ಮಾಡುವುದು ಜೊತೆಗೆ ಇತರೆ ಕೂಲಿಯನ್ನು ಮಾಡುತ್ತಾರೆ. ಸಾಂಪ್ರದಾಯಿಕವಾಗಿ ಧಾರ್ಮಿಕ ಸಮಾರಂಭಗಳಲ್ಲಿ ಸಂಗೀತ ವಾದ್ಯಗಳನ್ನು ನುಡಿಸಿ, ಪಂಜನ್ನು ಹಿಡಿದಿರುತ್ತಾರೆ. ಇವರ ಮನೆ ಮಾತು ತೆಲುಗು. ಕುಲಕಸುಬುಗಳನ್ನು ಮಾಡುವುದರಿಂದ ಹೆಚ್ಚಿನ ಸಂದರ್ಭದಲ್ಲಿ ತೆಲುಗು ಭಾಷೆಯನ್ನು ಇವರು ಉಳಿಸಿಕೊಂಡಿದ್ದಾರೆ.

ದಾಸರು

ಇವರು ಕರ್ನಾಟಕ - ಆಂಧ್ರ ಗಡಿ ಪ್ರದೇಶಲ್ಲಿ ಕಾಣಸಿಗುತ್ತಾರೆ. ಇವರು ತೆಲುಗು - ಕನ್ನಡ ಮಾತನಾಡಿ, ಕನ್ನಡ ಲಿಪಿಯನ್ನು ಬಳಸುತ್ತಾರೆ. (ಇವರ ಸಾಂಪ್ರದಾಯಿಕ ವೃತ್ತಿ ಭಿಕ್ಷೆ ಬೇಡುವುದು. ಹೊಲೆಯ, ಮಾದಿಗ ಮತ್ತು ಜಾಂಬವ ಜಾತಿಯವರಿಗೆ ಪುರೋಹಿತರಾಗಿಯೂ ಕೆಲಸ ಮಾಡುತ್ತಾರೆ) ಕೆಲವರು ಕೃಷಿ ಕೂಲಿಗಳಾಗಿಯೂ ದುಡಿಯುತ್ತಾರೆ. ಇವರ ಆರ್ಥಿಕ, ಶೈಕ್ಷಣಿಕ, ಸಾಮಾಜಿಕ, ಪರಿಸ್ಥಿತಿಯು ಸುಧಾರಣೆಯಾಗಬೇಕಿದೆ. ಈ ಸಮುದಾಯದ ಕೆಲವೇ ಜನರಿಗೆ ಕೃಷಿ ಭೂಮಿ ಇರುವಂತಿದೆ. ಇವರಲ್ಲಿ ಹೆಚ್ಚಿನ ಜನರು ಕೂಲಿ ಕೆಲಸ. ಸಣ್ಣಪುಟ್ಟ ವ್ಯಾಪಾರ, ಇತರೆ ಉದ್ಯೋಗಗಳನ್ನು ಅವಲಂಬಿಸಿದ್ದಾರೆ. ಜಾನಪದ ಕಥೆಗಾರರು ಮತ್ತು ನಾಟಕಕಾರರು ಈ ಸಮುದಾಯದಲ್ಲಿ ಇದ್ದಾರೆ. ಇವರಲ್ಲಿರುವ ಉಪಜಾತಿಗಳು ಗೊಲ್ಲದಾಸ ಮತ್ತು ಶೆಟ್ಟಿದಾಸ ಇವರು ತುಂಬಾ ಹಿಂದೆ ಆಂಧ್ರದಿಂದ ವಲಸೆ ಬಂದಿರುವರೆಂದು ಆಧಾರಗಳಿಂದ ತಿಳಿಯಲಾಗಿದೆ.

| | ಕನ್ನಡ ಏಕಭಾಷಿಕರು | ತೆಲುಗು ಏಕಭಾಷಿಕರು | ಕನ್ನಡ-ತೆಲುಗು ದ್ವಿಭಾಷಿಕರು | ತೆಲುಗು-ಕನ್ನಡ ದ್ವಿಭಾಷಿಕರು |
|---|---|---|---|---|
| ಒಟ್ಟು ಭಾಷಿಕರು | 2.2 | 18.2 | 16.6 | 65.1 |
| ಪುರುಷ | 1.0 | 14.0 | 19.9 | 66.0 |
| ಮಹಿಳೆ | 1.2 | 21.8 | 13.7 | 65.3 |



ನಕ್ಷೆ-8
ಪರಿಶಿಷ್ಟ ಜಾತಿಯಲ್ಲಿನ ಭಾಷಿಕರ ಅಂಕಿ-ಅಂಶಗಳು
ಜನಸಂಖ್ಯೆ ಶೇಕಡಾವಾರುಗಳಲ್ಲಿ
0
10
20
30
40
50
60
70
2.2
1
1.2
18.2
14
21.8
16.6
19.9
13.7
65.1
66
65.3
ಒಟ್ಟು
ಪುರುಷ
ಮಹಿಳೆ
ಕ ಏ
ತೆ ಏ
ಕ-ತೆ ದ್ವಿ
ತೆ-ಕ ದ್ವಿ
ಭಾಷಿಕರು

ಕ್ಷೇತ್ರಕಾರ್ಯದಲ್ಲಿ ದೊರೆತ ಅಂಕಿ - ಅಂಶಗಳಿಂದ ನೋಡಿದಾಗ ಕೆಲವು ಭಿನ್ನ ಸಂಗತಿಗಳಿರುವುದನ್ನು ಕಾಣಲಾಗಿದೆ. ಮೇಲಿನ ಅಂಕಿ - ಅಂಶಗಳಲ್ಲಿ ಬಹುಪಾಲು ಭಾಷಿಕರ ಮನೆಮಾತು ತೆಲುಗು ಭಾಷೆಯಾಗಿದೆ. ಕನ್ನಡ ಏಕ ಭಾಷಿಕರು ಈ ಜಾತಿಗಳಲ್ಲಿ ಹೆಚ್ಚಾಗಿ ಕಾಣುತ್ತಿಲ್ಲ. ಕಾರಣ ಏಕಭಾಷಿಕರೆಂದು ಹೇಳಿಕೊಂಡಿರುವವರು ಈ ಜಾತಿಗಳಲ್ಲಿ ಮೇಲ್‌ವರ್ಗ, ಮೇಲ್‌ಮಧ್ಯಮ ವರ್ಗದ ಸರ್ಕಾರಿ ಉದ್ಯೋಗಗಳಲ್ಲಿ ತೊಡಗಿರುವವರು. ಉನ್ನತ ಶಿಕ್ಷಣವನ್ನು ಪಡೆಯುತ್ತಿರುವ ಸ್ಥಳೀಯ ಕನ್ನಡ ಭಾಷಿಕ ಕುಟುಂಬಗಳು ಮಾತ್ರ. ಈ ಜಾತಿಗಳಲ್ಲಿ ಕನ್ನಡ- ತೆಲುಗು ಎರಡೂ ಭಾಷೆಯನ್ನು ಮನೆಮಾತುಗಳೆಂದು ಹೇಳಿಕೊಳ್ಳುವವರ ಪ್ರಮಾಣ ಕೆಲವೆಡೆಗಳಲ್ಲಿ ಕಾಣಲಾಗಿದೆ. ಇದಕ್ಕೆ ಕಾರಣ ಬಹುಶಃ ವೈವಾಹಿಕ ಸಂಬಂಧದಿಂದ ಉಂಟಾದ ದ್ವಿಭಾಷಿಕತೆಯಿಂದಾಗಿ ಈ ರೀತಿಯ ದ್ವಿಭಾಷಾ ಮಾದರಿಗಳು ಇವರಲ್ಲಿ ಕಾಣುತ್ತಿವೆ. ಮೇಲಿನ ವಿವರಗಳಲ್ಲಿ ಹೇಳಿರುವ ಹಾಗೆ ಈ ಪರಿಸರದಲ್ಲಿ ಈ ಜಾತಿಯ ಬಗೆಗೆ ದೊರೆತ ಎಲ್ಲಾ ಮಾಹಿತಿಗಳಲ್ಲಿ ವಲಸಿಗರ ಪ್ರಮಾಣವೇ ಹೆಚ್ಚು ಕಾಣುತ್ತಿರುವುದರಿಂದ ಇವರೆಲ್ಲರ ಮನೆಮಾತು ತೆಲುಗು ಭಾಷೆ ಆಗಿದೆ. ಇವರಲ್ಲಿ 80 % ಭಾಷಿಕರು ತೆಲುಗಿನಲ್ಲೆ ಸಾಕ್ಷರತೆಯ ಕೌಶಲಗಳನ್ನು ಪಡೆದುಕೊಳ್ಳುತ್ತಿದ್ದು ಇತ್ತೀಚಿನ ಸರ್ಕಾರದ ಆಡಳಿತಾತ್ಮಕ ನಿರ್ಧಾರಗಳಿಂದ ಸಮಾಜದಲ್ಲಿ ಮೇಲ್‌ಮುಖ ಚಲನೆಯತ್ತ ಸಾಗಲು ಕನ್ನಡದ ಶಿಕ್ಷಣದ ಸಂದರ್ಭಗಳಿಗೆ ಒಳಗಾಗುವುದರ ಮೂಲಕ ಹೆಚ್ಚು ಹೆಚ್ಚು ದ್ವಿಭಾಷಿಕರಾಗುವುದನ್ನು ಕಾಣಲಾಗಿದೆ. ಒಟ್ಟು ತೆಲುಗು ಏಕಭಾಷಿಕರಲ್ಲಿ 14 % ಗಳಷ್ಟು ಪುರುಷರು, 21.8 % ಗಳಷ್ಟು ಮಹಿಳೆಯರಿರುವುದು ಕಾಣುತ್ತಿದೆ. ಇದಕ್ಕೆ ಮುಖ್ಯವಾದ ಕಾರಣಗಳೆಂದರೆ ಈ ಸಮುದಾಯದಲ್ಲಿರುವ ಅನೇಕ ತೆಲುಗು ಭಾಷಿಕರು ಭಾಷಾ ದ್ವೀಪಗಳಲ್ಲಿ ನೆಲೆಸಿರುವುದರಿಂದ ಕನ್ನಡದ ಸಾಮಾಜಿಕ ಸಂದರ್ಭಗಳಿಗೆ ಒಳಗಾಗುವ ಅವಕಾಶಗಳು ಕಡಿಮೆ. ಭಾಷಿಕರು ಅವಿದ್ಯಾವಂತರಾಗಿದ್ದು, ಆರ್ಥಿಕ, ಸಾಮಾಜಿಕ, ಸ್ಥಿತಿಗತಿ ಕಡಿಮೆ ಇರುವವರಲ್ಲಿ, ಘೋರವಾದ ಜಾತಿಪದ್ಧತಿಯಿಂದಾಗಿ, ಕಲಿಯುವ ಸಾಮರ್ಥ್ಯ ಮಾಸಿದ ವೃದ್ಧರು, ವಯಸ್ಕ ಭಾಷಾ ಕಲಿಕೆಯ ಹಂತವನ್ನು ದಾಟಿರುವ ವಿವಾಹಿತ ಮಹಿಳೆಯಲ್ಲಿ ಹೆಚ್ಚಾಗಿ ತೆಲುಗು ಏಕ ಭಾಷಿಕರು ಇರುವುದನ್ನು ಕಾಣಲಾಗಿದೆ. ಅದರಲ್ಲೂ ಮೊದಲನೇ ತಲೆಮಾರುಗಳಲ್ಲಿ ಹೆಚ್ಚಾಗಿ, ಎರಡನೆ ತಲೆಮಾರುಗಳಲ್ಲಿ ಅಲ್ಪ - ಸ್ವಲ್ಪ ಪ್ರಮಾಣದಲ್ಲಿ ಏಕಭಾಷಿಕರಿದ್ದು ಈಗಿನವರು ಹೆಚ್ಚಾಗಿ ಕನ್ನಡವನ್ನು ಕಲಿತು ದ್ವಿಭಾಷಿಕರಾಗಿದ್ದಾರೆ.

ದ್ವಿಭಾಷಿಕತೆಯ ಪ್ರಮಾಣವನ್ನು ನೋಡಿದಾಗ ಒಟ್ಟು 65.1 % ತೆಲುಗು ಕನ್ನಡ ದ್ವಿಭಾಷಿಕರಲ್ಲಿ 66 % ಗಳಷ್ಟು ಪುರುಷರಲ್ಲಿ, 65.3 % ಗಳಷ್ಟು ಮಹಿಳೆಯರಲ್ಲಿಯೂ ಕಾಣುತ್ತಿದ್ದಾರೆ. ಕನ್ನಡದ ಸಾಮಾಜಿಕ ಸಂದರ್ಭಗಳಿಗೆ ಒಳಗಾಗುವಾಗ ಇವರಿಗೆ ಕನ್ನಡವನ್ನು ಬಳಸುವ ಅವಕಾಶಗಳು ಹೆಚ್ಚು ಇರುವುದರಿಂದಲೂ, ಬಹುಸಂಖ್ಯಾತ ಕನ್ನಡಿಗರ ಭಾಷೆಗೆ ಈ ವರ್ಗದ ಜಾತಿಯ ಭಾಷಿಕರು ಪಲ್ಲಟಗೊಂಡಿದ್ದಾರೆ. ಕೂಲಿಯೆ ಬದುಕಿನ ಭಾಗವಾಗಿರುವುದರಿಂದ, ಕೂಲಿ ಮಾಡುವ ಸಂದರ್ಭಗಳಲ್ಲಿ ಮೇಲ್‌ವರ್ಗದ, ಜಾತಿಯ ಭಾಷಿಕರೊಂದಿಗೆ ವ್ಯವಹರಿಸುವಾಗ ಕನ್ನಡವನ್ನು ಬಳಸುವ ಅನಿವಾರ್ಯವಿದೆ. ಕೆಲವೆಡೆಗಳಲ್ಲಿ ಮಾತ್ರ ಮೇಲ್‌ವರ್ಗದ ಭಾಷಿಕರಿಗೂ ತೆಲುಗು ಗೊತ್ತಿದ್ದರೆ ಮಾತ್ರ ಈ

ವರ್ಗದ ಭಾಷಿಕರೊಡನೆ ತೆಲುಗಿನಲ್ಲಿ ಮಾತನಾಡುತ್ತಾರೆ. ಜೊತೆಗೆ ಕನ್ನಡದ ಔಪಚಾರಿಕ ಸಂದರ್ಭಗಳಲ್ಲಿ ತೆಲುಗು ಭಾಷೆಯನ್ನು ಬಳಸುವಲ್ಲಿ ಇವರಿಗೆ ಹಿಂಜರಿಕೆ ಇದೆ. ಈ ಕಾರಣದಿಂದಲೂ ಇವರಲ್ಲಿ ದ್ವಿಭಾಷಿಕರಾಗುವ ಪ್ರಮಾಣ ಹೆಚ್ಚಾಗುವ ಹಾಗೆ ಕಾಣುತ್ತಿದೆ. ಭಾಷಿಕ ನಡವಳಿಕೆಗಳ ಮೂಲಕ ಸಾಮಾಜಿಕವಾಗಿ ಉನ್ನತ ಸ್ಥಾನ-ಮಾನಗಳನ್ನು ಪಡೆಯುವ ಉದ್ದೇಶವೂ ಇವರಿಗೆ ಇರುವುದರಿಂದ ಕನ್ನಡವನ್ನು ಕಲಿಯುವ ಅವಶ್ಯಕತೆಗಳಿವೆ. ಮಹಿಳೆಯರು ಅವಿದ್ಯಾವಂತರಾಗಿದ್ದರೂ, ಭಾಷಾದ್ವೀಪಗಳಲ್ಲಿ ನೆಲೆಸಿದ್ದು ಹೆಚ್ಚಿನ ತೆಲುಗಿನ ಸಾಮಾಜಿಕ ಸಂದರ್ಭಗಳಿಗೆ ಒಳಗಾಗುತ್ತಿದ್ದರೂ ಸಹ ಇವರಿಗೆ ದ್ವಿಭಾಷಿಕರಾಗುವ ಅವಶ್ಯಕತೆ ಏಕಿದೆ? ಈ ಜಾತಿಗಳಲ್ಲಿ ಕೆಳವರ್ಗದ ಮತ್ತು ಕೆಳಮಧ್ಯಮವರ್ಗದ ಮಹಿಳೆಯರಲ್ಲಿ ಹೆಚ್ಚಾಗಿ ಮಹಿಳಾ ಕಾರ್ಮಿಕರು ಕಂಡುಬರುತ್ತಿರುವುದರಿಂದ ಪುರುಷರಿಗಿಂತ ಹೆಚ್ಚಾಗಿ ದುಡಿಯುತ್ತಿರುವುದರಿಂದ, ದುಡಿಮೆಯ ಸಂದರ್ಭ ಕನ್ನಡದ ಸಾಮಾಜಿಕ ಸಂದರ್ಭವನ್ನು ಆಧರಿಸಿದೆ. ಆದಕಾರಣ ಅನಿವಾರ್ಯವಾಗಿ ಕನ್ನಡವನ್ನು ಕಲಿಯುವ ಅಗತ್ಯಗಳಿವೆ. ಅಲ್ಲದೆ ತಮ್ಮ ಮಕ್ಕಳು ಶೈಕ್ಷಣಿಕ ಸಂದರ್ಭಗಳಿಗೆ ಒಳಗಾದ ಸಂದರ್ಭಗಳಲ್ಲಿ ಕನ್ನಡದ ಗ್ರಹಿಕೆಯ ಕೌಶಲಗಳನ್ನು ಇನ್ನೂ ಹೆಚ್ಚು ಪಡೆದುಕೊಳ್ಳುತ್ತಿದ್ದಾರೆ. ಜೊತೆಗೆ ಇಲ್ಲಿ ಕೆಲವು ಕುಟುಂಬಗಳಲ್ಲಿ ಕನ್ನಡ - ತೆಲುಗು ಎರಡೂ ಭಾಷೆಗಳು ಮನೆಭಾಷೆಗಳಾಗಿವೆ. ತಂದೆಯಿಂದ ಕನ್ನಡವನ್ನೂ ತಾಯಿಯಿಂದ ತೆಲುಗನ್ನೂ ಕಲಿತಿರುವ ಸಂದರ್ಭಗಳು ಈ ಸಮುದಾಯದ ಮಕ್ಕಳಲ್ಲಿ ಕಾಣಲಾಗಿದೆ. ಈ ಜಾತಿಗಳಲ್ಲಿ ಉನ್ನತವರ್ಗ,ಮೇಲ್ ಮಧ್ಯಮವರ್ಗ, ಮಧ್ಯಮವರ್ಗದಲ್ಲಿ ಉತ್ತಮವಾದ ಶೈಕ್ಷಣಿಕ ಸ್ಥಾನಮಾನಗಳನ್ನು ಪಡೆದು ಸರ್ಕಾರಿ ಹುದ್ದೆಗಳಲ್ಲಿ ನಿರತರಾದವರಲ್ಲಿ ಕನ್ನಡ ಭಾಷೆಯೇ ಹೆಚ್ಚಿನ ಸಂದರ್ಭದಲ್ಲಿ ಮನೆ ಮಾತಾಗಿರುವುದನ್ನು ಕಾಣಬಹುದಾಗಿದೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕೆಲವೆಡೆ ಇಂತಹ ಮಾಹಿತಿಗಳು ದೊರೆತಿವೆ. ಆದ್ದರಿಂದ ಕನ್ನಡ - ತೆಲುಗು ದ್ವಿಭಾಷಿಕರ ಅಂಕಿ ಅಂಶಗಳಲ್ಲಿ ಕನ್ನಡ ತೆಲುಗು ಭಾಷೆಗಳನ್ನು ಪ್ರಥಮ ಭಾಷೆಯಾಗಿ ಮಾತನಾಡುತ್ತಿರುವವರ ಸಂಖ್ಯೆಯನ್ನು ಕಾಣಬಹುದಾಗಿದೆ. ಈ ಸಮುದಾಯದಲ್ಲಿ ಬಹಳಷ್ಟು ಭಾಷಿಕರು ಕ್ರಿಶ್ಚಿಯನ್ ಧರ್ಮಕ್ಕೆ ಪಲ್ಲಟವಾಗಿರುವವರು ಕನ್ನಡ - ತೆಲುಗು ಎರಡೂ ಭಾಷೆಗಳನ್ನು ಮನೆಮಾತಾಗಿ ಬಳಸುತ್ತಿದ್ದಾರೆ. ಮುಂದಿನ ತಲೆಮಾರುಗಳಲ್ಲಿ ಕನ್ನಡಕ್ಕೆ ಹೆಚ್ಚಿನ ಪಲ್ಲಟಗಳು ಇವರಲ್ಲಿ ಉಂಟಾಗಬಹುದು. ಪರಿಶಿಷ್ಟ ಜಾತಿಗಳಲ್ಲಿ ಆಟೋ ಓಡಿಸುವವರು, ಕ್ಷೌರಿಕರು, ವ್ಯಾಗಿನ್ ಕೂಲಿಕೆಲಸ ಮಾಡುವವರು, ಸ್ವ ಉದ್ಯೋಗಗಳಲ್ಲಿ ತೊಡಗಿರುವವರಲ್ಲಿ ಸ್ವಭಾಷೆಗಳು ಹೆಚ್ಚಿನ ಸಂದರ್ಭದಲ್ಲಿ ಉಳಿದಿದೆ. ಕುಲಕಸುಬುಗಳನ್ನು ತೊರೆದು ಇತರೆ ವೃತ್ತಿಗಳಿಗೆ ಪಲ್ಲಟವಾದವರಲ್ಲಿ ಭಾಷಾ ಪಲ್ಲಟವು ಹೆಚ್ಚಾಗಿ ಉಂಟಾಗಿದೆ.

**ಪರಿಶಿಷ್ಟ ಪಂಗಡ (ನಾಯಕರು)**

ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ವಾಲ್ಮೀಕಿ, ಬ್ಯಾಡರು, ಬೇಡ, ನಾಯಕ, ತಳವಾರ, ಬೆರಡ, ನಾಯಕ ಮಕ್ಕಳು, ಪಾಳೆಯಗಾರ, ರಾಮೋಷಿ, ಬೆಂಡಾರ, ಮುಂತಾದ ಹೆಸರುಗಳಿಂದ ಗುರುತಿಸಲ್ಪಡುವ ಜನಾಂಗವನ್ನು ಸರ್ಕಾರವು ಪರಿಶಿಷ್ಟ ವರ್ಗವೆಂದು ಗುರುತಿಸಿದೆ. ಇವರಲ್ಲಿ ಎರಡು ಪಂಗಡಗಳಿವೆ. ಊರನಾಯಕ, ಮ್ಯಾಸನಾಯಕ. ಊರನಾಯಕರ ಮನೆಮಾತು ಕನ್ನಡ ಭಾಷೆ. ಮ್ಯಾಸನಾಯಕರ ಮನೆಮಾತು ತೆಲುಗು ಭಾಷೆ. ಇವರಲ್ಲಿ ಹೆಚ್ಚು ಜನ ಆಂಧ್ರಪ್ರದೇಶದ ಅನೇಕ ಭಾಗಗಳಿಂದ ಉದ್ಯೋಗವನ್ನರಸಿ ಬಂದವರಾಗಿದ್ದಾರೆ. ಇವರ ಸಾಂಪ್ರದಾಯಿಕ ವೃತ್ತಿ ಬೇಟೆ. ವಿಜಯನಗರದ ಕಾಲದಲ್ಲಿ ಹಲವರು ಸೈನ್ಯದಲ್ಲಿ ಸೈನಿಕರಾಗಿದ್ದರಲ್ಲದೆ, ಹೈದರನ ಸೈನ್ಯದಲ್ಲಿಯೂ ಇದ್ದರೆಂದು ಚಾರಿತ್ರಿಕ ಆಧಾರಗಳಿಂದ ತಿಳಿದುಬರುತ್ತದೆ. ಇತ್ತೀಚೆಗೆ ಕೃಷಿ ಕ್ಷೇತ್ರದಲ್ಲಿ ಗೇಣಿ ಒಕ್ಕಲುಗಳಾಗಿಯೂ, ಕೂಲಿಕಾರರಾಗಿಯೂ ದುಡಿಯುವವರಾಗಿದ್ದಾರೆ. ಕೂಲಿಯೇ ಹೆಚ್ಚಿನ ಕುಟುಂಬಗಳಿಗೆ ಆದಾಯದ ಮೂಲವಾಗಿದೆ. ಕೆಲವರಷ್ಟೆ ಜಮೀನನ್ನು ಹೊಂದಿ ವ್ಯವಸಾಯದಲ್ಲಿ ನಿರತರಾಗಿದ್ದಾರೆ. ಕೆಲವು ಜನ ಸರ್ಕಾರಿ ಮತ್ತು ಖಾಸಗಿ ಸೇವೆಗಳಲ್ಲಿ ಉದ್ಯೋಗಗಳಲ್ಲಿದ್ದಾರೆ. ಇವರಲ್ಲಿ ಸಾಕ್ಷರತೆಯ ಪ್ರಮಾಣ ಕಡಿಮೆ ಇದ್ದು, ಇವರ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ, ರಾಜಕೀಯ ಪರಿಸ್ಥಿತಿಗಳು ಸುಧಾರಣೆಯಾಗಬೇಕಿದೆ.

ನಾಯಕ ಜನಾಂಗವು ಬಳ್ಳಾರಿ ಪರಿಸರದಲ್ಲಿ ಅಧಿಕ ಸಂಖ್ಯೆಯಲ್ಲಿ ಇರುವುದನ್ನು ಕಾಣಲಾಗಿದೆ. ಇವರು ನೆಲೆಸಿರುವ ಪ್ರದೇಶಗಳಿಗೆ ಅನೇಕ ಕಡೆ ನಾಯಕರ ಕೇರಿಗಳೆಂದು ಕರೆಯಲಾಗುತ್ತಿದೆ. ಇಂತಹ ಕೇರಿಗಳಲ್ಲಿರುವವರು ಹೆಚ್ಚು ಕನ್ನಡ ಭಾಷೆಯನ್ನು ಮಾತನಾಡುವ ನಾಯಕರಾಗಿದ್ದು, ತೆಲುಗು ಭಾಷೆಯನ್ನು ಮಾತನಾಡುವ ಕೇರಿಗಳು ಇವೆ. ಈ ಕೇರಿಗಳಲ್ಲಿ ನೆಲೆಸಿರುವ ಭಾಷಿಕರು ಆಂಧ್ರದ ಹಲವು ಭಾಗಗಳಿಂದ ವಲಸೆ ಬಂದವರಾಗಿದ್ದಾರೆ. ಭಾಷಾದ್ವೀಪಗಳೆಂದು ಗುರುತಿಸುವ ಕೆಲವೆಡೆಗಳಲ್ಲಿ ಇವರು ಹೆಚ್ಚಾಗಿ ಇರುವುದು ಕಂಡುಬಂದಿದೆ. ಇವರಲ್ಲಿ ಅವಿಭಕ್ತ ಕುಟುಂಬಕ್ಕಿಂತ ಅಣುಕುಟುಂಬಗಳು ಅಸ್ತಿತ್ವಕ್ಕೆ ಬಂದಿದ್ದರೂ, ಅವಿಭಕ್ತ ಕುಟುಂಬಗಳು ಸಂಪೂರ್ಣವಾಗಿ ಕಣ್ಮರೆಯಾಗಿಲ್ಲ. ಇನ್ನು ಕೆಲವು ಕುಟುಂಬಗಳು ಒಂದೇ ಸೂರಿನಡಿ ವಾಸವಾಗಿದ್ದಾರೆ. ಇವರಲ್ಲಿ ಹೆಚ್ಚು ಜನ ಮಹಿಳೆಯರು ಅವಿದ್ಯಾವಂತರಾಗಿದ್ದು ಇತ್ತೀಚಿಗೆ ಸಾಕ್ಷರತೆಯ ಸಂದರ್ಭಗಳಿಗೆ ಒಳಗಾಗುತ್ತಿದ್ದಾರೆ. ಮಹಿಳಾ ಕಾರ್ಮಿಕರು ಹೆಚ್ಚಾಗಿರುವಂತೆ ಕಾಣುತ್ತಿದೆ. ಇವರಲ್ಲಿ ಮಹಿಳೆಯರು ಕೂಲಿ, ಮನೆಕೆಲಸ, ತರಕಾರಿ ಮಾರುವುದು. ಇವೇ ಮುಂತಾದ ಕೆಲಸಗಳಲ್ಲಿ ನಿರತರಾಗಿದ್ದಾರೆ. ಪುರುಷರೂ ಸಹ ಹೆಚ್ಚಿನ ಸಂದರ್ಭದಲ್ಲಿ ಕೂಲಿ, ಮನೆಕಟ್ಟುವ ಕೆಲಸಗಳಲ್ಲಿ, ಆಟೋರಿಕ್ಷಾ ಚಾಲಕರಾಗಿರುವುದು ಇನ್ನು ಮುಂತಾದ ಕೂಲಿಯನ್ನು ಆಧರಿಸಿದ ಕೆಲಸಗಳಲ್ಲಿ ಈ ಜನಾಂಗದ ಕೆಳವರ್ಗ ಮತ್ತು ಕೆಳಮಧ್ಯಮವರ್ಗಗಳು ನಿರತರಾಗಿರುವುದನ್ನು ಕಾಣಲಾಗಿದೆ. ಮಧ್ಯಮ, ಮೇಲ್‌ಮಧ್ಯಮವರ್ಗ, ಉನ್ನತವರ್ಗಗಳಲ್ಲಿ ಶೈಕ್ಷಣಿಕ ಸಂದರ್ಭಗಳಿಗೆ ಒಳಗಾಗಿರುವವರು ಉನ್ನತ ಶಿಕ್ಷಣದ ಮೂಲಕ ಸರ್ಕಾರಿ ಹುದ್ದೆಗಳಲ್ಲಿರುವುದಲ್ಲದೆ ಅರೆ ಸರ್ಕಾರಿ, ಖಾಸಗಿ ಕೆಲಸಗಳಲ್ಲೂ ತೊಡಗಿಕೊಂಡಿರುವುದನ್ನು ಕಾಣಲಾಗಿದೆ.


ನಕ್ಷೆ-9
ಪರಿಶಿಷ್ಟ ಪಂಗಡದಲ್ಲಿ ಭಾಷಿಕರ ಅಂಕಿ-ಅಂಶಗಳು
ಜನಸಂಖ್ಯೆ ಶೇಕಡಾವಾರುಗಳಲ್ಲಿ
80
70
60
50
40
30
20
10
0
7.9
7.4
8.4
16.1
10.7
20.3
16.9
12.1
4.3
50.1
69.8
68
ಒಟ್ಟು
ಪುರುಷ
ಮಹಿಳೆ
ಕ ಏ
ಕೆ ಏ
ಕ-ಕೆ ಪ್ರ
ಕೆ-ಕ ದ್ವಿ
ಭಾಷಿಕರು

| | ಕನ್ನಡ ಏಕಭಾಷಿಕರು | ತೆಲುಗು ಏಕಭಾಷಿಕರು | ಕನ್ನಡ-ತೆಲುಗು ದ್ವಿಭಾಷಿಕರು | ತೆಲುಗು-ಕನ್ನಡ ದ್ವಿಭಾಷಿಕರು |
|---|---|---|---|---|
| ಒಟ್ಟು ಭಾಷಿಕರು | 7.9 | 16.1 | 16.9 | 50.1 |
| ಪುರುಷ | 7.4 | 10.7 | 12.1 | 69.8 |
| ಮಹಿಳೆ | 8.4 | 20.3 | 04.3 | 68.0 |

ಮೇಲಿನ ಅಂಕಿ ಅಂಶಗಳನ್ನು ಆಧರಿಸಿ ಹೇಳುವುದಾದರೆ ಒಟ್ಟು ಏಕಭಾಷಿಕರಲ್ಲಿ ಲಿಂಗಾಧಾರಿತ ಭಿನ್ನತೆಗಳಿಂದ ನೋಡಿದಾಗ 1 % ಗಳಷ್ಟು ಮಾತ್ರ ವ್ಯತ್ಯಾಸ ಇರುವುದು ಕಾಣುತ್ತಿದೆ. ಕನ್ನಡ ಏಕಭಾಷಿಕರೆಂದು ಹೇಳಿಕೊಂಡಿರುವ ಭಾಷಿಕರು ಊರನಾಯಕರಲ್ಲಿ ಮಾತ್ರ ಕಾಣಬಹುದಾಗಿದೆ. ಮ್ಯಾಸನಾಯಕರಲ್ಲಿ ಇವರು ಕಂಡುಬರುತ್ತಿಲ್ಲ. ತೆಲುಗು ಭಾಷಿಕರೊಂದಿಗೆ ವೈವಾಹಿಕ ಸಂಬಂಧಗಳು ಉಂಟಾದರೂ ಸಹ ವಿವಾಹಿತ ಮಹಿಳೆಯರ ಭಾಷೆಗೆ ವಿವಾಹಿತ ಪುರುಷರು ಪಲ್ಲಟವಾಗಿರುವ ಸಂದರ್ಭಗಳು ಈ ಕುಟುಂಬಗಳಲ್ಲೇ ಹೆಚ್ಚಿನ ಪ್ರಮಾಣದಲ್ಲಿರುವುದನ್ನು ಹಲವೆಡೆಗಳಲ್ಲಿ ಕಾಣಲಾಗಿದೆ. ಇಂತಹ ಸಂದರ್ಭಗಳಲ್ಲಿ ಭಾಷೆಯನ್ನು ಮಹಿಳೆಯರು ಹೆಚ್ಚಿನ ಸಂದರ್ಭಗಳನ್ನು ಉಳಿಸಿಕೊಂಡಿದ್ದಾರೆ. ಆದ್ದರಿಂದ ಕನ್ನಡ ಭಾಷೆಗೆ ಪಲ್ಲಟಗಳು ಆಗುವ ಸಂದರ್ಭಗಳು ಈ ಮಹಿಳೆಯರಲ್ಲಿ ಕಡಿಮೆ ಪ್ರಮಾಣದಲ್ಲಿ ಇದೆ. ತೆಲುಗು ಏಕಭಾಷಿಕರ ಒಟ್ಟು ಪ್ರಮಾಣದಲ್ಲಿ ಮಹಿಳೆಯರೇ ಏಕಭಾಷಿಕರು ಅಧಿಕ ಸಂಖ್ಯೆಯಲ್ಲಿರುವುದು ಕಾಣುತ್ತಿದೆ. ಪುರುಷರು ಕೇವಲ 10.7 % ಗಳಷ್ಟು ಮಾತ್ರ. ಇದಕ್ಕೆ ಕಾರಣಗಳೇನಿರಬಹುದು. ಏಕಭಾಷಿಕರೆಂದು ಹೇಳಿಕೊಂಡಿರುವ ಪುರುಷರು ಮತ್ತು ಮಹಿಳೆಯರು ಭಾಷಾದ್ವೀಪಗಳಲ್ಲಿ ನೆಲೆಸಿರುವವರಾಗಿದ್ದು, ಹೆಚ್ಚಿನ ಕನ್ನಡದ ಸಾಮಾಜಿಕ ಸಂದರ್ಭಗಳಿಗೆ ಒಳಗಾದವರಾಗಿದ್ದಾರೆ. ಇವರಲ್ಲಿ ಬಹಳಷ್ಟು ಭಾಷಿಕರು ಆಂಧ್ರಪ್ರದೇಶದ ಇತರೆಡೆಗಳಿಂದ ಬಂದು ನೆಲೆಸಿರುವ ವಲಸಿಗರಾಗಿದ್ದು, ಅವಿದ್ಯಾವಂತರು, ಬಡತನ ರೇಖೆಯಲ್ಲಿ ಇರುವವರು, ಬಡತನ ರೇಖೆಗಿಂತ ಕೆಳಗಿರುವವರೂ ಆಗಿದ್ದಾರೆ. ಮೊದಲ ಮತ್ತು ಎರಡನೇ ತಲೆಮಾರುಗಳಲ್ಲಿ ಇರುವವರಲ್ಲಿ ಏಕ ಭಾಷಿಕರ ಪ್ರಮಾಣ ಹೆಚ್ಚಾಗಿದ್ದು ವೈವಾಹಿಕ ಸಂಬಂಧದಿಂದ ಬಂದ ಮಹಿಳೆಯರಲ್ಲಿ ಬಹುಪಾಲು ಭಾಷಿಕರು ವಯಸ್ಕ ಭಾಷಾ ಕಲಿಕೆಯ ಹಂತವನ್ನು ದಾಟದವರಾಗಿದ್ದು ಕನ್ನಡವನ್ನು ಸಹಜವಾಗಿ ಕಲಿಯುವ ಸಂದರ್ಭಗಳು ಕಡಿಮೆ ಇರುವುದರಿಂದಲೂ, ಜೊತೆಗೆ ತೆಲುಗಿನ ಸಾಮಾಜಿಕ ಸಂದರ್ಭಗಳಿಗೆ ಒಳಗಾಗುವುದರಿಂದಲೂ ಕನ್ನಡ ಭಾಷೆಯನ್ನು ಕಲಿಯುವ ಅವಕಾಶಗಳು ಅವರಿಗೆ ಇಲ್ಲ. ಅವರು ಹೆಚ್ಚು ಗ್ರಹಿಸುವುದು (ಟಿ.ವಿ., ರೇಡಿಯೋ ಮುಂತಾದವುಗಳ ಮೂಲಕ) ತೆಲುಗು ಭಾಷೆಯನ್ನೇ. ಇವರಲ್ಲಿ ಗ್ರಹಿಕೆಯ ನೆಲೆಯಲ್ಲಿ ಮಾತ್ರ ಕೆಲವರು ಕನ್ನಡವನ್ನು ಪಡೆದುಕೊಂಡಿದ್ದಾರೆ. ಜೊತೆಗೆ ಇವರಲ್ಲಿ ಕನ್ನಡ ಮನೆಮಾತು ಎಂದು ಹೇಳಿಕೊಳ್ಳುತ್ತಿರುವ ಊರ ಬೇಡರಿಗೆ ತೆಲುಗನ್ನು ಕಲಿತು ದ್ವಿಭಾಷಿಕರಾಗುವ ಅವಶ್ಯಕತೆಗಳು

ಕಡಿಮೆ. ಆದರೆ ಈ ವರ್ಗಗಳಲ್ಲಿ ತೆಲುಗು ಭಾಷಿಕರು ಕನ್ನಡವನ್ನು ಕಲಿತು ದ್ವಿಭಾಷಿಕರಾಗುವ ಪ್ರಮಾಣ ಒಟ್ಟಾರೆಯಾಗಿ ಹೆಚ್ಚಾಗುತ್ತಿದೆ. ಲಿಂಗಾಧಾರಿತ ಭಿನ್ನತೆಗಳಿಂದ ನೋಡಿದಾಗಲೂ ಸಹ ಕೇವಲ 1 % ಗಳಷ್ಟು ಮಾತ್ರ ವ್ಯತ್ಯಾಸವಿರುವುದು ಕಾಣುತ್ತಿದೆ. ಏಕೆ ಇವರಲ್ಲಿ ಕನ್ನಡವನ್ನು ಕಲಿತು ದ್ವಿಭಾಷಿಕರಾಗುವ ಪ್ರಮಾಣ ಹೆಚ್ಚಾಗುತ್ತಿದೆ. ಮೇಲಿನ ವಿವರಗಳಲ್ಲಿ ಹೇಳಿರುವಂತೆ ಇವರಲ್ಲಿ ಕಾಣಲಾಗುತ್ತಿರುವ ಕೆಳವರ್ಗ ಮತ್ತು ಕೆಳಮಧ್ಯಮವರ್ಗದವರು ವಲಸಿಗರಾಗಿದ್ದು, ಹೆಚ್ಚಿನ ಸಂದರ್ಭದಲ್ಲಿ ಕೂಲಿಯೇ ಇವರ ಜೀವನದ ಮೂಲಾಧಾರವಾಗಿದೆ. ಆದ್ದರಿಂದ ತಮಗಿರುವ ಸ್ಥಿತಿ ತಮ್ಮ ಮುಂದಿನ ತಲೆಮಾರುಗಳಿಗೆ ಮುಂದುವರೆಯಬಾರದೆಂದು, ಸಾಮಾಜಿಕವಾಗಿ ಮೇಲ್‌ಮುಖ ಚಲನೆಯ ಕಡೆಗೆ ಚಲಿಸಲು ಇವರಿಗೆ ಕನ್ನಡ ಭಾಷೆ ಒಂದು ರೀತಿಯ 'ರಹದಾರಿ' ಇದ್ದಂತಿದೆ. ಆದ್ದರಿಂದ ಕನ್ನಡದಲ್ಲಿ ಸಾಕ್ಷರತೆಯ ಕೌಶಲಗಳು ಪಡೆಯುವವರ ಸಂಖ್ಯೆ ಈ ವರ್ಗಗಳಲ್ಲಿ ಹೆಚ್ಚಾಗುತ್ತಿರುವುದು ಕಾಣುತ್ತಿದೆ. ಕನ್ನಡ ಭಾಷೆಯ ಅಭಿವೃದ್ಧಿಗಾಗಿ ಕರ್ನಾಟಕ ಸರ್ಕಾರದ ಆಡಳಿತ ನಿರ್ಧಾರಗಳಿಂದಾಗುವ ಪ್ರಯೋಜನವನ್ನು ಪಡೆದುಕೊಳ್ಳುವ ಪ್ರಯತ್ನದಲ್ಲಿ ಕನ್ನಡ ಭಾಷೆಯ ಕಡೆಗಿನ ಪಲ್ಲಟಗಳು ಹೆಚ್ಚಾಗುತ್ತಿದೆ. ಇದನ್ನು ಮುಂದಿನ ಅಧ್ಯಾಯಗಳಲ್ಲಿ ಇನ್ನಷ್ಟು ಅಂಕಿ - ಅಂಶಗಳ ಆಧಾರಗಳಿಂದ ವಿವರಿಸಲಾಗುತ್ತದೆ. ಇನ್ನು ಈ ಸಮುದಾಯದಲ್ಲಿ ಮಧ್ಯಮ, ಮೇಲ್‌ಮಧ್ಯಮ ಉನ್ನತ ವರ್ಗದಲ್ಲಿ ಸರ್ಕಾರಿ ಹುದ್ದೆಗಳಲ್ಲಿ ಇರುವವರು, ಆರ್ಥಿಕವಾಗಿ, ಸಾಮಾಜಿಕವಾಗಿ, ಮುಂದುವರೆಯಲು ಪ್ರಯತ್ನಿಸಿರುವವರು ಹೆಚ್ಚು ಇಂಗ್ಲಿಶ್ ಮತ್ತು ಕನ್ನಡದಲ್ಲಿ ಸಾಕ್ಷರತೆಯ ಕೌಶಲಗಳನ್ನು ಪಡೆಯುತ್ತಿದ್ದಾರೆ. ಕೂಲಿ, ಸ್ವಯಂ ಉದ್ಯೋಗಗಳನ್ನು ಮಾಡುತ್ತಿರುವವರಲ್ಲಿ ಹೆಚ್ಚು ತೆಲುಗು ಭಾಷೆಯು ಮಹಿಳೆಯರಲ್ಲಿ ಉಳಿಸಿಕೊಂಡಿದ್ದು, ಪುರುಷರಲ್ಲಿ ಈ ಪ್ರಮಾಣ ಗುರುತಿಸುವಷ್ಟರ ಮಟ್ಟಿಗೆ ಇದೆ. ಮಹಿಳೆಯರಿಗೆ ಹೋಲಿಸಿದಲ್ಲಿ ಸ್ವಲ್ಪ ಕಡಿಮೆಯಷ್ಟೆ. ಸಾಂಪ್ರದಾಯಿಕ ವೃತ್ತಿ (ಬೇಟೆ)ಗಳಿಂದ ಇತರೆ ವೃತ್ತಿಗೆ ಪಲ್ಲಟವಾಗಿರುವವರಲ್ಲಿ ಭಾಷಾ ಪಲ್ಲಟಗಳೂ ಉಂಟಾಗಿರುವುದು ಒಂದೆಡೆ ಕಂಡುಬಂದರೆ, ಇತರ ವೃತ್ತಿಗಳಿಂದ ಸರ್ಕಾರದ ಉನ್ನತ ಉದ್ಯೋಗಗಳನ್ನು ಪಡೆದುಕೊಂಡಿರುವವರಲ್ಲಿಯೂ ಭಾಷಾ ಪಲ್ಲಟಗಳು ಉಂಟಾಗಿರುವುದನ್ನು ಕಾಣಲಾಗಿದೆ.

**ಇತರೆ ಜಾತಿಗಳು**

**ಅಗಸ**

ಮಡಿವಾಳ, ದೋಬಿ, ಸಾಕಲವಾಡು, ರಜಕ ಎಂದು ಕರೆದು ಕರೆದುಕೊಳ್ಳುವ ಇವರು ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲಿ ನೆಲಸಿದ್ದಾರೆ. ಕನ್ನಡ, ತುಳು, ಕೊಡವ, ತೆಲುಗು ಇವರ ಭಾಷೆಗಳಾಗಿವೆ. ಇವರು ಮಾತನಾಡುವ ಭಾಷೆ ಭೌಗೋಳಿಕ ಪ್ರದೇಶ ಹಾಗೂ ಭಾಷಾ ಸಂದರ್ಭಗಳ ಮೇಲೆ ಅವಲಂಬಿತವಾಗಿದೆ. ಆದರೆ ಹೆಚ್ಚಿನ ಜನರು ಕನ್ನಡದಲ್ಲಿ ಮಾತನಾಡಿ ಕನ್ನಡವನ್ನು ಬರವಣಿಗೆಯ ಭಾಷೆಯಾಗಿ ಬಳಸುತ್ತಿದ್ದಾರೆ. ಸಾಕಲವಾಡುಗಳೆಂದು ಕರೆದುಕೊಳ್ಳುವ

ಉಪಪಂಗಡ ತೆಲುಗು ಮಾತನಾಡುತ್ತಿರುವುದು ಕಾಣುತ್ತಿದೆ. ಇವರ ಸಾಂಪ್ರದಾಯ ವೃತ್ತಿ ಬಟ್ಟೆ ಒಗೆಯುವುದು. ಗ್ರಾಮೀಣ ಪ್ರದೇಶಗಳಲ್ಲಿ ಕೆಲವರು ವ್ಯವಸಾಯ ಹಾಗೂ ದಿನಗೂಲಿಯನ್ನು ತಮ್ಮ ಉಪಕಸುಬನ್ನಾಗಿ ಮಾಡಿಕೊಂಡಿದ್ದಾರೆ. ನಗರ ಪ್ರದೇಶಗಳಲ್ಲಿ ನೌಕರಿ ಮತ್ತು ಖಾಸಗಿ ಸಂಸ್ಥೆಗಳಲ್ಲಿ ನೌಕರರಾಗಿದ್ದಾರೆ. ಹಾಗೂ ಕೆಲವರು ಡ್ರೈಕ್ಲೀನ್ ಅಂಗಡಿಗಳನ್ನು ನಡೆಸುತ್ತಾರೆ. ಬಳ್ಳಾರಿ ಪರಿಸರದಲ್ಲಿ ಕಾಣಲಾಗಿರುವ ಅಗಸರಲ್ಲಿ ಹೆಚ್ಚಿನವರ ಮನೆಮಾತು ತೆಲುಗು. ಸಾಂಪ್ರದಾಯಿಕ ವೃತ್ತಿಯಿಂದ ಇತರೆ ವೃತ್ತಿಗಳಿಗೆ ಪಲ್ಲಟವಾಗಿರುವವರಲ್ಲಿ ಕನ್ನಡವನ್ನು ಕಲಿತು ದ್ವಿಭಾಷಿಕರಾಗಿರುವ ಪ್ರಮಾಣವೂ ಹೆಚ್ಚಾಗಿದೆ. ಸಾಂಪ್ರದಾಯಿಕ ವೃತ್ತಿಯನ್ನು ಮಾಡುತ್ತಿರುವವರಲ್ಲಿ ಸ್ವಭಾಷೆಯನ್ನು ಉಳಿಸಿಕೊಂಡಿದ್ದಾರೆ.

**ಉಪ್ಪಾರ**

ಹೆಸರೇ ಸೂಚಿಸುವಂತೆ ಇವರ ಮೂಲ ಉದ್ಯೋಗ ನೆಲದ ಉಪ್ಪನ್ನು ತಯಾರಿಸುವುದು. ಈಗ ಇವರು ಹೆಚ್ಚಾಗಿ ಕೃಷಿ ತೋಟಗಾರಿಕೆ ಮತ್ತು ಕಲ್ಲು ಕಟ್ಟಡದ ಗಾರೆ ಕೆಲಸ, ಇಟ್ಟಿಗೆ ಮತ್ತು ಸುಣ್ಣದ ಭಟ್ಟಿ ಕೆಲಸಗಳಲ್ಲಿತೊಡಗಿದ್ದಾರೆ. ಈ ಜಾತಿಯು ಕನ್ನಡ ಮತ್ತು ತೆಲುಗು ಭಾಷಿಕ ಉಪ ವಿಭಾಗಗಳನ್ನು ಹೊಂದಿದೆ. ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲಿ ಇವರು ಕಂಡುಬರುತ್ತಾರೆ. ಕನ್ನಡವನ್ನು ಮಾತನಾಡಿ ಕನ್ನಡವನ್ನು ಬರವಣಿಗೆಯಲ್ಲಿ ಬಳಸುತ್ತಾರೆ.

**ಕುಂಬಾರ**

ಇವರ ಸಾಂಪ್ರದಾಯಿಕ ವೃತ್ತಿ ಮಣ್ಣಿನ ಪಾತ್ರೆ ಮಡಿಕೆಗಳನ್ನು ತಯಾರಿಸುವುದಾಗಿದೆ. ಇವರು ಕರ್ನಾಟಕದ ಎಲ್ಲಾ ಪ್ರದೇಶಗಳಲ್ಲಿಯೂ ಕಂಡುಬರುತ್ತಾರೆ. ಇವರಲ್ಲಿ ಗುಂಡಭಕ್ತ ಮತ್ತು ವೀರಶೈವ ಕುಂಬಾರ ಎಂಬ ಪಂಗಡಗಳಿವೆ. ಇವರು ಕನ್ನಡವನ್ನು ಮಾತನಾಡಿ ಕನ್ನಡ ಲಿಪಿಯನ್ನು ಬಳಸುತ್ತಾರೆ. ಕೆಲವರು ಮಾತ್ರ ವ್ಯಾಪಾರದ ಸಂದರ್ಭಗಳಲ್ಲಿ ತೆಲುಗು ಭಾಷೆಗೆ ಆಂಶಿಕ ಪಲ್ಲಟವಾಗುವುದನ್ನು ಕಾಣಬಹುದು. ಇತ್ತೀಚೆಗೆ ಕೆಲವರು ಸರ್ಕಾರಿ ಮತ್ತು ಖಾಸಗಿ ಸಂಸ್ಥೆಗಳಲ್ಲಿ ನೌಕರಿಯಲ್ಲಿದ್ದಾರೆ. ಕೆಲವರು ಇಟ್ಟಿಗೆ ತಯಾರಿಸುವ ಮತ್ತು ಹೆಚ್ಚಿನ ಕಾರ್ಖಾನೆಗಳನ್ನು ನಡೆಸುತ್ತಾರೆ.

**ಬಲಿಜ**

ಇವರು ಬಲಿಜ ನಾಯ್ಡು, ಎಂದು ಕರ್ನಾಟಕದಲ್ಲಿ ಕರೆದುಕೊಳ್ಳುತ್ತಾರೆ. ಕರ್ನಾಟಕದ ಪೂರ್ವ ಭಾಗಗಳಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ಇವರ ಮನೆಮಾತು ತೆಲುಗು. ಕನ್ನಡ ದ್ವಿತೀಯ ಭಾಷೆ. ಬರವಣಿಗೆಯ ಭಾಷೆಯೂ ಕನ್ನಡ. ವೃತ್ತಿ ಹಾಗೂ ಜಿಲ್ಲೆಗಳಿಗನುಸಾರವಾಗಿ ಇವರನ್ನು ನಾಲ್ಕು ಪಂಗಡಗಳಾಗಿ ವಿಭಾಗಿಸಲಾಗಿದೆ. ದಾಸ, ಗಾಜಲು, ದುಂಡಿ ಮತ್ತು ಗೋಣಿ ಬಲಿಜ, ಗ್ರಾಮೀಣ ಪ್ರದೇಶಗಳಲ್ಲಿ ಇರುವವರು ಮುಖ್ಯವಾಗಿ ವ್ಯವಸಾಯಗಾರರು, ಹಾಗೂ

ಕೃಷಿ ಕೂಲಿಗಳು, ನಗರ ಹಾಗೂ ಪಟ್ಟಣಗಳಲ್ಲಿರುವವರು ವ್ಯಾಪಾರಗಳಲ್ಲಿ ತೊಡಗಿದ್ದಾರೆ. ಇನ್ನು ಕೆಲವರು ಸರ್ಕಾರಿ ಹಾಗೂ ಖಾಸಗಿ ಸಂಸ್ಥೆಗಳಲ್ಲಿ ನೌಕರಿಗಳಲ್ಲಿದ್ದಾರೆ. ಮೇಲ್‌ವರ್ಗಗಳಲ್ಲಿ ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಮುಂದುವರೆದಿದ್ದರೆ ಇನ್ನೂ ಕೆಲವೆಡೆಗಳಲ್ಲಿ ಇವರಲ್ಲಿ ಹಿಂದುಳಿದಿರುವುದು ಕಾಣುತ್ತದೆ.

**ಈಡಿಗ**

ದೀವರ್, ಬಿಲ್ಲವ, ನಾಮಧಾರಿ, ಹಳೆಪೈಕ, ಈಡಿಗ, ಇಳಿಗ ಎಂಬ ಹೆಸರುಗಳಿಂದ ಕರೆದುಕೊಳ್ಳುವ ಇವರುಗಳು ಆಂಧ್ರದ ರಾಜಮಂಡ್ರಿ ಮತ್ತು ಪೆನುಗೊಂಡದಿಂದ ಬಂದವರೆಂದು ಆಧಾರಗಳಿಂದ ತಿಳಿದುಬರುತ್ತದೆ. ಕರ್ನಾಟಕದ ಇತರೆ ಜಿಲ್ಲೆಗಳಲ್ಲಿ ಈ ಸಮುದಾಯವನ್ನು ಗುರುತಿಸಬಹುದಾಗಿದೆ. ಇವರಲ್ಲಿರುವ ಮುದ್ದೆ ಈಡಿಗ, ಸಾಸ್ತೆ ಈಡಿಗ ಮತ್ತು ಆರ್ಯ ಈಡಿಗರೆಂಬ ಉಪಜಾತಿಗಳ ಪಂಗಡಗಳಿವೆ. ಇವರು ಹಲವು ವೃತ್ತಿಯನ್ನು ಆಧರಿಸಿದ್ದಾರೆ. ಅವಿಭಕ್ತ ಕುಟುಂಬಗಳು ಇವರಲ್ಲಿ ಸಾಮಾನ್ಯ, ಇವರ ಸಾಂಪ್ರದಾಯಕ ವೃತ್ತಿಯೆಂದರೆ ಈಚಲು ಮರದಿಂದ ಮದ್ಯ ಸಂಗ್ರಹಿಸುವುದು. ಇವರಲ್ಲಿ ವ್ಯವಸಾಯಗಾರರು ಹಾಗೂ ವ್ಯವಸಾಯದ ಕೂಲಿಕಾರರೂ ಇದ್ದಾರೆ. ಸಾಕಷ್ಟು ಸಂಖ್ಯೆಯಲ್ಲಿ ಈಡಿಗರು ಕೃಷಿಯೇತರ ವೃತ್ತಿಯಲ್ಲಿ ತೊಡಗಿದ್ದಾರೆ. ಇವರು ಕನ್ನಡ - ತೆಲುಗು ತುಳು ಭಾಷೆಗಳನ್ನು ಮಾತನಾಡುತ್ತಾರೆ. ಆಂಧ್ರ - ಕರ್ನಾಟಕ ಗಡಿ ಭಾಗದಲ್ಲಿರುವ ಈಡಿಗರ ಮನೆಮಾತು ಹೆಚ್ಚಿನ ಸಂದರ್ಭದಲ್ಲಿ ತೆಲುಗು.

**ವಿಶ್ವಕರ್ಮ**

ವಿಶ್ವಕರ್ಮ ಐದು ಕಲಾಕಾರರ ಗುಂಪುಗಳಾದ ಅಕ್ಕಸಾಲಿಗ, ಕಮ್ಮಾರ, ಕಂಬಾರ, ಬಡಗಿ ಮತ್ತು ಶಿಲ್ಪಕಾರರನ್ನು ಹೊಂದಿರುವುದರಿಂದ ಇವರನ್ನು ಪಂಚಾಳರೆಂದು ಕರೆಯಲಾಗುತ್ತಿದೆ. ಇವರು ಅಕ್ಕಸಾಲಿ, ಆಚಾರಿ, ಸೋನಾರ, ಕಮ್ಮಾರ ವಿಶ್ವಕರ್ಮ ಬ್ರಾಹ್ಮಣ, ಸುತಾರ ಮತ್ತು ಗೆಜ್ಜಿಗಾರರೆಂಬ ಹಲವು ನಾಮಗಳಿಂದ ಪರಿಚಿತರಾಗಿದ್ದಾರೆ. ಇದು ಹಲವು ಉಪಜಾತಿಗಳ ಸಮುದಾಯವಾಗಿದೆ. ಇವರು ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲೂ ಕಂಡುಬರುತ್ತಾರೆ. ಕನ್ನಡವನ್ನು ಮಾತನಾಡಿ ಕನ್ನಡ ಲಿಪಿಯನ್ನು ಬಳಸುತ್ತಾರೆ. ಇವರ ಪಾರಂಪರಿಕ ವೃತ್ತಿ ಕರಕುಶಲ ಕೆಲಸ ಇಂದಿಗೂ ಈ ಕುಟುಂಬಗಳು ಅದನ್ನೇ ಅವಲಂಬಿಸಿವೆ. ಕರಕುಶಲ ಕೆಲಸದೊಂದಿಗೆ ಇವರಲ್ಲಿ ಬೇಸಾಯಗಾರರು ವ್ಯಾಪಾರಗಾರರು, ಸರ್ಕಾರಿ ಮತ್ತು ಖಾಸಗಿ ಸಂಸ್ಥೆಗಳಲ್ಲಿ ನೌಕರರು ಆಗಿದ್ದಾರೆ. ಚಿತ್ರ ಬಿಡಿಸುವುದು ಲೋಹದ ಕೆತ್ತನೆ, ಕಲ್ಲಿನ ಕೆತ್ತನೆ ಮಾಡುವುದರಲ್ಲಿ ಪರಿಣಿತರು. ಹಲವಾರು ಆಭರಣದ ಕೆಲಸವನ್ನು ಮಾಡುತ್ತಾರೆ.

## ನಕ್ಷೆ-10
## ಇತರೆ ಜಾತಿಗಳಲ್ಲಿನ ಭಾಷಿಕರ ಅಂಕಿ-ಅಂಶಗಳು



| | ಕನ್ನಡ ಏಕಭಾಷಿಕರು | ತೆಲುಗು ಏಕಭಾಷಿಕರು | ಕನ್ನಡ-ತೆಲುಗು ದ್ವಿಭಾಷಿಕರು | ತೆಲುಗು-ಕನ್ನಡ ದ್ವಿಭಾಷಿಕರು |
|---|---|---|---|---|
| ಒಟ್ಟು ಭಾಷಿಕರು | 12.8 | 2.0 | 19.5 | 65.5 |
| ಪುರುಷ | 07.7 | 1.7 | 18.5 | 71.9 |
| ಮಹಿಳೆ | 10.5 | 2.0 | 17.4 | 70.1 |

ಮೇಲಿನ ಅಂಕಿ - ಅಂಶಗಳಲ್ಲಿ ಏಕ ಭಾಷಿಕರ ಒಟ್ಟು ಪ್ರಮಾಣದಲ್ಲಿ ಮಹಿಳೆಯರಲ್ಲೇ ಹೆಚ್ಚು ಕನ್ನಡ ಏಕಭಾಷಿಕರಿರುವುದು ಕಾಣುತ್ತಿದೆ. ಇಲ್ಲಿ ಕನ್ನಡ ಏಕಭಾಷಿಕರೆಂದು ಹೇಳಿಕೊಳ್ಳುತ್ತಿರುವ ಭಾಷಿಕರು ಮುಖ್ಯವಾಗಿ ಕಂಡುಬಂದಿರುವುದು ವಿಶ್ವಕರ್ಮ, ಉಪ್ಪಾರ ಮತ್ತು ಕುಂಬಾರರಲ್ಲಿ. ಈ ಜಾತಿಗಳಲ್ಲಿರುವವರ ಮನೆಮಾತು ಕನ್ನಡವೇ ಆಗಿದೆ. ತೆಲುಗು ಕಲಿಯುವ ಅವಶ್ಯಕತೆಗಳ ಕಡಿಮೆ ಸಂದರ್ಭಗಳಲ್ಲಿ ಇವರಿದ್ದಾರೆ. ಪುರುಷರು ತೆಲುಗಿನ ಸಾಮಾಜಿಕ ಸಂದರ್ಭಗಳಲ್ಲಿ ವ್ಯಾಪಾರದ ಸಂದರ್ಭಗಳಿಗೆ ಒಳಗಾಗುವಾಗ ಮಾತ್ರ ತೆಲುಗು ಕಲಿಯುವ ಅವಶ್ಯಕತೆ ಇದೆ. ಈ ಜಾತಿಗಳಲ್ಲಿ ಆರ್ಥಿಕವಾಗಿ ಹಾಗೂ ಸಾಮಾಜಿಕವಾಗಿ ಹಿಂದುಳಿದವರಾಗಿದ್ದು, ಸಾಕ್ಷರತೆಯ ಪ್ರಮಾಣವೂ ಕಡಿಮೆ ಕಾಣುವಂತಿದೆ. ತೆಲುಗು ಏಕಭಾಷಿಕರೆಂದು ಹೇಳಿಕೊಳ್ಳುತ್ತಿರುವವರಲ್ಲಿ ಲಿಂಗಾಧಾರಿತ ಭಿನ್ನತೆಗಳಲ್ಲಿ ಹೆಚ್ಚಿನ ವ್ಯತ್ಯಾಸವಿಲ್ಲ. ಇವರುಗಳು ಹೆಚ್ಚು ತೆಲುಗು ಸಾಮಾಜಿಕ ಸಂದರ್ಭಗಳಲ್ಲಿ ಇರುವ ಮೊದಲ ತಲೆಮಾರಿನವರಾಗಿದ್ದಾರೆ. ಆದ್ದರಿಂದ ತೆಲುಗು ಏಕಭಾಷಿಕರು ಕೃಷಿಯನ್ನು ಆಧರಿಸಿರುವ ಕುಟುಂಬಗಳಲ್ಲಿ ಹೆಚ್ಚು ಕಾಣುತ್ತಾರೆ. ಆಂಧ್ರದಿಂದ ವೈವಾಹಿಕ ಸಂಬಂಧದಿಂದಾಗಿ ಬಂದಿರುವ ಮಹಿಳೆಯರಲ್ಲಿ ಸ್ವಲ್ಪಮಟ್ಟಿಗೆ ಏಕಭಾಷಿಕರು ಕಾಣುತ್ತಾರೆ. ಈ ಜಾತಿಗಳಲ್ಲಿ ಕನ್ನಡ ಮನೆಮಾತಾಗಿರುವವರಿಗೆ ತೆಲುಗನ್ನು ಕಲಿತು ದ್ವಿಭಾಷಿಕರಾಗುವ ಅವಕಾಶಗಳು ಕಡಿಮೆ. ವ್ಯಾಪಾರದ ಸಂದರ್ಭಗಳಲ್ಲಿ ಮತ್ತು ಖಾಸಗಿ ವೃತ್ತಿ, ಸ್ವಯಂ ವೃತ್ತಿಗಳನ್ನು ಮಾಡುವವರು ಮಾತ್ರ ತೆಲುಗನ್ನು ಕಲಿತು ದ್ವಿಭಾಷಿಕರಾಗಿರುವುದು. ತೆಲುಗು ಮನೆಮಾತಾಗಿರುವ ಈಡಿಗ, ಬಲಿಜ ಮತ್ತು ಅಗಸರಲ್ಲಿ ಕನ್ನಡವನ್ನು ಕಲಿತು ದ್ವಿಭಾಷಿಕರಾಗುವ ಪ್ರಮಾಣ ಹೆಚ್ಚಿದೆ, ಇದಕ್ಕೆ ಕಾರಣಗಳೇನಿರಬಹುದು. ಈ ಜಾತಿಗಳಲ್ಲಿ ಸ್ವ ಉದ್ಯೋಗಗಳಲ್ಲಿ ತೊಡಗಿರುವವರು ಮತ್ತು ಖಾಸಗಿ, ವ್ಯಾಪಾರ ಸಂದರ್ಭಗಳಲ್ಲಿ ಇರುವುದು ಹೆಚ್ಚಾಗಿದೆ. ಆಂಧ್ರಪ್ರದೇಶದಿಂದ ಬಂದು ನೆಲಿಸಿರುವವರ ಪ್ರಮಾಣವೂ ಹೆಚ್ಚಿದೆ. ಜೊತೆಗೆ ತೆಲುಗು ಭಾಷೆಯನ್ನು ಮನೆ ಆವರಣದಲ್ಲಷ್ಟೆ ಉಳಿಸಿಕೊಂಡಿದ್ದಾರೆ. ಸಾಕ್ಷರತೆಯ ಪ್ರಮಾಣವನ್ನು ಕನ್ನಡ ಮತ್ತು ಇಂಗ್ಲಿಶ್ ಭಾಷೆಯಲ್ಲಿ ಪಡೆಯುವಂತೆ ಕಾಣುತ್ತದೆ. ಶೈಕ್ಷಣಿಕ ಸಂದರ್ಭಗಳಿಗೆ ಒಳಗಾಗುವಾಗ ಮತ್ತು ಕನ್ನಡದ ಸಾಮಾಜಿಕ ಸಂದರ್ಭಗಳಿಗೆ ಹೆಚ್ಚು ಒಳಗಾಗುವ ಅವಶ್ಯಕತೆಗಳಿರುವುದರಿಂದ ಇವರಲ್ಲಿ ಕನ್ನಡ ದ್ವಿಭಾಷಿಕರಾಗುವ ಪ್ರಮಾಣ ತಲೆಮಾರುಗಳಲ್ಲಿ ಹೆಚ್ಚಾಗುತ್ತಿರುವಂತೆ ಕಾಣುತ್ತಿದೆ. ಇನ್ನು ಕೆಲವರು ತಮ್ಮ ಸಾಂಪ್ರದಾಯಿಕ ವೃತ್ತಿಯಿಂದ ಇತರೆ ವೃತ್ತಿಗಳಿಗೆ ಪಲ್ಲಟವಾಗಿರುವವರಲ್ಲಿ ತಲೆಮಾರುಗಳಲ್ಲಿ ಕನ್ನಡಕ್ಕೆ ಹೆಚ್ಚಿನ

ಪಲ್ಲಟವಾಗಿ ಇಂಗ್ಲಿಶ್‌ನಲ್ಲಿ ಸಾಕ್ಷರತೆಯ ಕೌಶಲವನ್ನು ಪಡೆದುಕೊಳ್ಳುತ್ತಿರುವಂತೆ ಕಾಣುತ್ತಿದೆ.

ಇದುವರೆಗಿನ ಅಂಕಿ - ಅಂಶಗಳ ಆಧಾರದಿಂದ ಮತ್ತು ಕ್ಷೇತ್ರಕಾರ್ಯದಲ್ಲಿ ಗಮನಿಸಿದ ಅಂಶಗಳಿಂದ ನೋಡಿದರೆ ಜಾತಿ, ವರ್ಗ, ಕಸಬು, ತಲೆಮಾರು, ಗ್ರಾಮೀಣ, ನಗರ ಸಂದರ್ಭಗಳು, ಕುಟುಂಬ ಈ ಎಲ್ಲಾ ಸಾಮಾಜಿಕ ಭಿನ್ನಾಂಶಗಳಿಂದ ದ್ವಿಭಾಷಿಕತೆಯ ಸಂರಚನೆಯ ಸ್ವರೂಪದಲ್ಲಿ ಹಲವು ಸಂಗತಿಗಳು ಇರುವುದು ತಿಳಿದು ಬಂದಿದೆ. ಸಮಾಜದಲ್ಲಿ ದ್ವಿಭಾಷಿಕತೆಯ ಕಲಿಕೆ - ಬಳಕೆಯ ನೆಲೆಗಳು ಭಿನ್ನವಾಗಿವೆ. ಜಾತಿಗಳಲ್ಲಿ ಇದರ ವ್ಯತ್ಯಾಸಗಳು ಇನ್ನಷ್ಟು ಭಿನ್ನವಾಗಿವೆ. ಇನ್ನಿತರ ಸಾಮಾಜಿಕ ಭಿನ್ನಾಂಶಗಳಿಂದ ನೋಡಿದಾಗ ಈ ವ್ಯತ್ಯಾಸಗಳು ಇದ್ದೇ ಇದೆ. ಸಾಮಾಜಿಕ ಶ್ರೇಣೀಕೃತ ವ್ಯವಸ್ಥೆಯಲ್ಲಿ ಮೇಲ್‌ಜಾತಿಗಳೆಂದು ಹೇಳಿಕೊಳ್ಳುವವರಲ್ಲಿ ಮೇಲ್ ವರ್ಗಗಳಲ್ಲಿ ಭಾಷೆ ಪ್ರತಿಷ್ಠೆಯ ಪ್ರಶ್ನೆಯಾಗಿದ್ದರೆ, ಕೆಳಜಾತಿ, ವರ್ಗಗಳಲ್ಲಿ ಪ್ರತಿಷ್ಠೆಯ ಭಾಷೆಯ ಕಡೆ ಪಲ್ಲಟಗಳು ಉಂಟಾಗುತ್ತಿವೆ. ಬಹುಸಂಖ್ಯಾತ ಕನ್ನಡಿಗರ ಭಾಷೆಗೆ ತೆಲುಗು ಭಾಷಿಕರು ಪಲ್ಲಟವಾಗುತ್ತಿರುವುದರಿಂದ ಕನ್ನಡ ಭಾಷೆಯ ಮೇಲೆ ಹೆಚ್ಚಿನ ಪ್ರಭಾವವೇನೂ ಉಂಟಾಗಿಲ್ಲ. ಅಲ್ಪ-ಸ್ವಲ್ಪ ಪ್ರಭಾವವನ್ನು ಮಾತ್ರ ಬಳ್ಳಾರಿ ಕನ್ನಡ ಪ್ರಭೇದದಲ್ಲಿ ಗುರುತಿಸಬಹುದಾಗಿದೆ. ಹೆಚ್ಚು ಹೆಚ್ಚು ದ್ವಿಭಾಷಿಕತೆಯು ಉಂಟಾಗುತ್ತಿರುವುದು ಶೈಕ್ಷಣಿಕ ಸಂದರ್ಭಗಳಿಗೆ ಒಳಗಾದಾಗ ಮತ್ತು ಭಾಷೆಯ ಕೌಶಲಗಳು ಗಟ್ಟಿಗೊಳ್ಳುವುದೂ ಸಹ ಶೈಕ್ಷಣಿಕ ಸಂದರ್ಭಗಳಿಂದಲೇ. ಸಾಮಾಜೀಕರಣದಿಂದ ಉಂಟಾದ ದ್ವಿಭಾಷಿಕತೆಯಲ್ಲಿ ಮೌಖಿಕ ಕೌಶಲಗಳು ಹೆಚ್ಚಿನ ಪ್ರಮಾಣದಲ್ಲಿರುತ್ತದೆ. ಕನ್ನಡಿಗರಿಗೆ ತೆಲುಗನ್ನು ಗ್ರಹಿಸುವ ಕೌಶಲಗಳು ಹೆಚ್ಚಿರುವುದು ಕಾಣುತ್ತದೆ. ಇದರಿಂದ ಅರೆದ್ವಿಭಾಷಿಕತೆಯ ಸಂದರ್ಭವನ್ನು ಗುರುತಿಸಬಹುದಾಗಿದೆ. ದ್ವಿಭಾಷಿಕರು ಮತ್ತು ಅರೆ ದ್ವಿಭಾಷಿಕರಿಬ್ಬರು ದ್ವಿಭಾಷಾ ಸನ್ನಿವೇಶವನ್ನು ನಿರ್ವಹಿಸುವ ನೆಲೆಗಳು ಇನ್ನೂ ಭಿನ್ನನೆಲೆಯಲ್ಲಿ ಇರುವಂಥದ್ದು. ಎರಡು ಭಾಷೆಗಳನ್ನು ಕಲಿಯುವಾಗ ಒಂದು ಭಾಷೆಗೆ ಇರುವ ಅವಕಾಶ, ಸಫಲತೆಯಿಂದ ಉನ್ನತ - ಪ್ರಧಾನ ಸ್ಥಾನವನ್ನು ಪಡೆಯುತ್ತಿದ್ದರೆ ಮತ್ತೊಂದು ಮಿತವಾದ ಸಮಾಜೋಭಾಷಿಕ ಕಾರ್ಯಗಳಿಂದಾಗಿ ಬಳಕೆಯ ಪ್ರಮಾಣ ಕಡಿಮೆಯಿರುತ್ತದೆ. ಮನೆ ಆವರಣಗಳಲ್ಲಿ ತೆಲುಗನ್ನು ಬಳಸುತ್ತಿರುವ ಭಾಷಿಕರಿಗೆ ಮನೆಯಲ್ಲಿ ತೆಲುಗು ಪ್ರಧಾನ ಭಾಷೆಯಾಗಿದ್ದರೆ, ಹೊರ ಆವರಣಗಳಲ್ಲಿ ಕನ್ನಡವೇ ಪ್ರಧಾನ ಭಾಷೆ. ಏಕಭಾಷಿಕರೆಂದು ಹೇಳುತ್ತಿರುವವರಲ್ಲಿ ಅರೆದ್ವಿಭಾಷಿಕತೆಯು ಹೆಚ್ಚಿನ ಸಂದರ್ಭಗಳಲ್ಲಿ ಗ್ರಹಿಕೆಯ ನೆಲೆಗಳಲ್ಲಿ ಇದೆ. ಸಮಾಜದಲ್ಲಿ ಕೆಳವರ್ಗದವರಿಗೆ ಒಂದೆಡೆ ಏಕಭಾಷಿಕರಾಗಲು ಜಾತಿಪದ್ಧತಿ, ಸಮಾಜೋಆರ್ಥಿಕ ಸ್ಥಾನಮಾನಗಳು, ಪರಿಸರ, ಅನಕ್ಷರತೆ ಕಾರಣವಾಗಿದ್ದರೆ, ಮತ್ತೊಂದೆಡೆ ಮೇಲ್‌ವರ್ಗಗಳಲ್ಲಿ ಏಕಭಾಷಿಕರಾಗಲು ಭಾಷೆಯ ಪ್ರತಿಷ್ಠೆ, ಸುತ್ತ - ಮುತ್ತಲ ಪರಿಸರ, ಸಮಾಜೋ ಆರ್ಥಿಕ ಸ್ಥಾನಮಾನಗಳು, ಇತ್ಯಾದಿಗಳು ಕಾರಣವಾಗಿವೆ. ಹಾಗೆಯೇ ತೆಲುಗು - ಕನ್ನಡ ದ್ವಿಭಾಷಿಕರಾದವರು ಹೆಚ್ಚಿನ ಸಂದರ್ಭದಲ್ಲಿ, ಶಿಕ್ಷಣಕ್ಕಾಗಿ ಮತ್ತು ಉದ್ಯೋಗಕ್ಕಾಗಿ, ಸಾಮಾಜಿಕ ಚಲನೆಯಲ್ಲಿ ಮೇಲ್‌ಮುಖವಾಗಿ ಚಲಿಸಲು ಭಾಷೆಯು ಒಂದು ರೀತಿಯ ರಹದಾರಿ ಇದ್ದಂತಿದೆ. ವೈವಾಹಿಕ ಸಂಬಂಧದಿಂದ ಉಂಟಾದ ದ್ವಿಭಾಷಿಕತೆಯಲ್ಲಿ ಹೆಚ್ಚು

ಅರೆದ್ವಿಭಾಷಿಕತೆಯ ಸಂದರ್ಭಗಳಿರುವುದು ಕಾಣುತ್ತದೆ. ಕಸುಬುಗಳನ್ನು ಆಧರಿಸಿ ದ್ವಿಭಾಷಿಕರಾದವರಲ್ಲಿ, ಆಂಶಿಕ ಪಲ್ಲಟ ಕೆಲವೆಡೆ ಕಾಣುತ್ತಿದ್ದರೆ, ಸಂಪೂರ್ಣ ಪಲ್ಲಟಗಳು ಕೆಲವೆಡೆ ಉಂಟಾಗುತ್ತಿವೆ. ಹೀಗೆ ಸಮಾಜದಲ್ಲಿ ದ್ವಿಭಾಷಿಕತೆಯ ಸಂರಚನೆಯ ಸ್ವರೂಪ ಸಾಮಾಜಿಕ ಭಿನ್ನಾಂಶಗಳಿಂದ ನೋಡಿದಾಗ ವಿಭಿನ್ನವಾಗಿರುವುದು ಕಂಡುಬರುತ್ತಿದೆ. ಸಮಾಜೋಭಾಷಿಕ ಅಂಶಗಳು ಭಾಷಿಕರ ಕಲಿಕೆ - ಬಳಕೆಯ ನೆಲೆಗಳ ಮೇಲೆ ಬೀರುವ ಪರಿಣಾಮದಿಂದಾಗಿ ಏಕಭಾಷಿಕರು, ದ್ವಿಭಾಷಿಕರು, ಅರೆದ್ವಿಭಾಷಿಕರು ಒಂದು ದ್ವಿಭಾಷಾ ಸಂದರ್ಭದಲ್ಲಿ ಇರುವ ಸಂಗತಿಗಳು ತಿಳಿದು ಬರುತ್ತಿದೆ. ಆದ್ದರಿಂದ ದ್ವಿಭಾಷಿಕತೆ ಸಮಾಜದಲ್ಲಿ ಒಂದೇ ರೀತಿ ಇರುವುದಿಲ್ಲ. ಸಮಾಜದ ರಚನೆಯಲ್ಲಿ ವಿಭಿನ್ನವಾದ ನೆಲೆಯಲ್ಲಿ ದ್ವಿಭಾಷಿಕತೆ ಕಾಣಿಸಿಕೊಳ್ಳುತ್ತಿರುತ್ತದೆ.



ಅಧ್ಯಾಯ : ಆರು

# ದ್ವಿಭಾಷಿಕತೆಯ ಅವಶ್ಯಕತೆ - ಕಷ್ಟ - ನಿರ್ವಹಣೆ

೧. ವಲಸೆಯ ಕಾರಣದಿಂದ ಉಂಟಾದ ದ್ವಿಭಾಷಿಕತೆ

೨. ವೈವಾಹಿಕ ಸಂಬಂಧದಿಂದ ಉಂಟಾದ ದ್ವಿಭಾಷಿಕತೆ

ಅಧ್ಯಾಯ : ಆರು

# ದ್ವಿಭಾಷಿಕತೆಯ ಅವಶ್ಯಕತೆ - ಕಷ್ಟ - ನಿರ್ವಹಣೆ

ಎರಡು ಭಿನ್ನ ಭಾಷೆಗಳು ಸಂಪರ್ಕಕ್ಕೆ ಬಂದು ಉಂಟಾಗುವ ದ್ವಿಭಾಷಾ ಪರಿಸರದಲ್ಲಿ ಎಲ್ಲರಿಗೂ ದ್ವಿಭಾಷಿಕರಾಗುವ ಅವಶ್ಯಕತೆಯಾಗಲೀ, ಒತ್ತಾಯವಾಗಲೀ ಇರುವುದಿಲ್ಲ. ದ್ವಿಭಾಷಿಕತೆ ಎನ್ನುವುದು ನಿರ್ದಿಷ್ಟ ಪ್ರದೇಶದಲ್ಲಿ ಕಂಡುಬರುವ ಭಾಷಾ ಲಕ್ಷಣವಷ್ಟೇ. ದ್ವಿಭಾಷಿಕ ಪ್ರದೇಶದಲ್ಲಿ ನೆಲೆಸಿರುವವರೆಲ್ಲಾ ದ್ವಿಭಾಷಿಕರಾಗಿರುವುದಿಲ್ಲ. ದ್ವಿಭಾಷಿಕರಾಗುವ ಅವಶ್ಯಕತೆಗಳು ಕೆಲವರಿಗಷ್ಟೇ ಇರುತ್ತದೆ. ಆದ್ದರಿಂದ ಒಂದು ದ್ವಿಭಾಷಾ ಪರಿಸರವೆಂದರೆ ಇಡೀ ದ್ವಿಭಾಷಿಕರಿಂದಲೇ ಆದದ್ದಲ್ಲ. ಏಕಭಾಷಿಕರೂ, ದ್ವಿಭಾಷಿಕರೂ, ಬಹುಭಾಷಿಕರೂ ಎಲ್ಲರೂ ಸೇರಿ ಒಂದು ದ್ವಿಭಾಷಾ ಪರಿಸರವಿರುತ್ತದೆ. ಹಾಗಾದರೆ ದ್ವಿಭಾಷಿಕರಾಗುವ ಒತ್ತಡಗಳು ಸಮಾಜದಲ್ಲಿ ಯಾರಿಗೆ ಯಾವ ಕಾರಣಗಳಿಗಾಗಿ ಉಂಟಾಗುತ್ತವೆ. ದ್ವಿಭಾಷಿಕರಾದವರು ಎರಡು ಭಾಷೆಗಳನ್ನು ಹೇಗೆ ಕಲಿಯುತ್ತಾರೆ ಮತ್ತು ನಿರ್ವಹಿಸುತ್ತಾರೆ. ಏಕಭಾಷಿಕರಿಗೆ ದ್ವಿಭಾಷಾ ಸಂದರ್ಭಗಳು ಎದುರಾಗುವುದಿಲ್ಲವೆ. ಎದುರಾದರೆ ಹೇಗೆ ದ್ವಿಭಾಷಾ ಸಂದರ್ಭವೊಂದನ್ನು ನಿಭಾಯಿಸುತ್ತಾರೆ. ದ್ವಿಭಾಷಾ ಸಂದರ್ಭಗಳನ್ನು ನಿಭಾಯಿಸುವುದು ಯಾರಿಗೆ ಕಷ್ಟವಾಗುತ್ತದೆ ಎಂಬಂತಹ ಹಲವು ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ. ಇಂತಹ ಸಂದರ್ಭದಲ್ಲಿ ಸಮುದಾಯವೊಂದರಲ್ಲಿ ದ್ವಿಭಾಷಿಕತೆ ಉಂಟಾಗಲು ಇರುವ ಕಾರಣಗಳಲ್ಲಿ, ಚಾರಿತ್ರಿಕ ಸಂಗತಿಗಳು, ಪ್ರಸ್ತುತ ವಿದ್ಯಮಾನಗಳು ಹೇಗೆ ದ್ವಿಭಾಷಾ ಪರಿಸರಗಳಲ್ಲಿ ದ್ವಿಭಾಷಿಕರಾಗುವ ಒತ್ತಡಗಳನ್ನು ಉಂಟುಮಾಡಿವೆ ಎಂದು ತಿಳಿಯುವುದರಿಂದ ಮುಂದಿನ ಸವಾಲುಗಳಿಗೆ ಉತ್ತರಗಳನ್ನು ಹುಡುಕಬಹುದಾಗಿದೆ.

ಚರಿತ್ರೆಯ ಪುಟಗಳಲ್ಲಿ ಬಳ್ಳಾರಿ ಪರಿಸರದ ಕನ್ನಡ - ತೆಲುಗು ದ್ವಿಭಾಷಾ ಸಂದರ್ಭ ಇಂದು ನಿನ್ನೆಯದಲ್ಲ. ಶತಮಾನಗಳ ಇತಿಹಾಸವನ್ನು ಒಳಗೊಂಡ ದ್ವಿಭಾಷಾ ಪರಿಸರವಾಗಿದೆ. ಬಳ್ಳಾರಿ ಪರಿಸರದಲ್ಲಿ ವಿಜಯನಗರದ ಅರಸರ ಕಾಲದಿಂದಲೇ ದ್ವಿಭಾಷಿಕ ಪರಿಸರವೊಂದು ನೆಲೆಗೊಂಡಿತ್ತೆಂದು, ಅಂದಿನ ಜನ - ಜೀವನವನ್ನು ಕುರಿತಂತೆ ಹೇಳುವ ಇತಿಹಾಸಕಾರರು, ಸಮುದಾಯದಲ್ಲಿ ಹೇಗೆ ದ್ವಿಭಾಷಿಕರ ಕಲಿಕೆ - ಬಳಕೆಗಳಿದ್ದವು, ದ್ವಿಭಾಷಿಕತೆಯ ಸ್ವರೂಪ

ಪ್ರಮಾಣಗಳು ಎಂಥವು ಎಂಬುದರ ಬಗೆಗೆ ಏನನ್ನೂ ಹೇಳಿಲ್ಲ. ಅನೇಕ ವರ್ಷಗಳಿಂದ ಒಟ್ಟಿಗೆ ಜೀವಿಸುತ್ತಿದ್ದ ಭಾಷಿಕರಲ್ಲಿ ಹುಟ್ಟಿಕೊಂಡ ಸಂಘರ್ಷಗಳು ಭಾಷಾವಾರು ಪ್ರಾಂತ್ಯಗಳ ವಿಭಜನೆಗೆ ಕಾರಣವಾಯಿತು. ಭಾಷಾವಾರು ಪ್ರಾಂತ ವಿಂಗಡನೆಯಾದಾಗ ದ್ವಿಭಾಷಾ ಪ್ರದೇಶವೊಂದು ಇಬ್ಭಾಗವಾಗಬೇಕಾಯಿತು. ಆಂಧ್ರ - ಕರ್ನಾಟಕಗಳೆರಡರಲ್ಲೂ ಕನ್ನಡ - ತೆಲುಗು ಭಾಷೆಯನ್ನಾಡುವ ಭಾಷಿಕರು ಹಂಚಿಹೋದರು. ತೆಲುಗು ಮಾತನಾಡುವ ಪ್ರದೇಶವನ್ನು ಆಂಧ್ರ ಎಂತಲೂ ಕನ್ನಡ ಮಾತನಾಡುವ ಪ್ರದೇಶಗಳನ್ನು ಕರ್ನಾಟಕವೆಂತಲೂ ಕರೆಯುತ್ತೇವಷ್ಟೆ. ಈ ಪ್ರದೇಶಗಳು ಬರಿ ಕನ್ನಡ ಭಾಷಿಕರಿಂದಾಗಲೀ ಬರಿ ತೆಲುಗು ಭಾಷಿಕರಿಂದಾಗಲೀ ಕೂಡಿಲ್ಲವಾದ್ದರಿಂದ ಕನ್ನಡವನ್ನು ಮಾತನಾಡುವವರು ಆಂಧ್ರ ಪ್ರದೇಶದಲ್ಲೂ, ತೆಲುಗನ್ನು ಮಾತನಾಡುವವರು ಕರ್ನಾಟಕದಲ್ಲಿ ಕಾಣುತ್ತಾರೆ. ಭಾಷೆಯ ಕಲಿಕೆ - ಬಳಕೆಯ ನೆಲೆಗಳು ಭಿನ್ನವಾಗಿರಬಹುದಷ್ಟೆ.

ಭಾಷಾವಾರು ಪ್ರಾಂತ ವಿಂಗಡನೆಯಿಂದಾಗಿ ಸರ್ಕಾರವು ರಾಜಕೀಯ ಗಡಿಗಳನ್ನು ಭಾಷಿಕರ ಮಧ್ಯೆ ಹಾಕಲಾಯಿತೆ ಹೊರತು ಭಾಷಿಕ ಗಡಿಗಳನ್ನು ಹಾಕಲು ಸಾಧ್ಯವಿಲ್ಲ. ರಾಜಕೀಯ ಗಡಿಗಳನ್ನು ಮೀರಿ ದ್ವಿಭಾಷಿಕತೆ ಮತ್ತು ಬಹು ಭಾಷಿಕತೆಗಳು ಸಮುದಾಯಗಳಲ್ಲಿ ನೆಲೆಗೊಂಡಿವೆ. ಗಡಿಭಾಗದ ಜನರಿಗೆ ಭಾಷಾ ಬಂಧನವಿರುವುದಿಲ್ಲ. ಆದ್ದರಿಂದ ಎರಡು ಭಾಷೆಗಳ ಕಲಿಕೆ ಸಹಜವಾಗಿಯೇ ಲಭಿಸಿರುತ್ತದೆ. ಹಾಗಾದರೆ ಗಡಿ ಒಳಗೆ ಬದುಕುವ ಭಾಷಿಕರಿಗೆ ಭಾಷಾ ಬಂಧನವಿರುತ್ತದೆಯೇ? ರಾಜಕೀಯ ಒತ್ತಾಯಗಳು ಭಾಷಿಕರ ಮೇಲೆ ಹೇರಲ್ಪಟ್ಟಾಗ ಮಾತ್ರ ಭಾಷಾ ಬಂಧನಗಳು ಉಂಟಾಗಬಹುದು. ಇಲ್ಲದಿದ್ದರೆ ಯಾವುದೇ ಭಾಷೆಯನ್ನು ಕಲಿತು - ಬಳಸುವ ಆಯ್ಕೆ ವ್ಯಕ್ತಿಯದ್ದಾಗಿರುತ್ತದೆ. ಕಲಿಕೆ - ಬಳಕೆ ಸಂದರ್ಭಗಳು ಕೆಲವೊಮ್ಮೆ ವ್ಯಕ್ತಿಯ ಆಯ್ಕೆ ಆಗಿದ್ದರೆ, ಕೆಲವೊಮ್ಮೆ ಸಮುದಾಯದ ಆಯ್ಕೆಯಾಗಿರುತ್ತದೆ. ಆದ್ದರಿಂದ ದ್ವಿಭಾಷಾ ಸಂದರ್ಭವೊಂದರಲ್ಲಿ ವ್ಯಕ್ತಿಗತ ದ್ವಿಭಾಷಿಕತೆ ಮತ್ತು ಸಾಮುದಾಯಿಕ ದ್ವಿಭಾಷಿಕತೆ ಎರಡೂ ಭಿನ್ನ ನೆಲೆಯಲ್ಲಿರಬಹುದು. ಹಾಗೆಯೇ ಒಂದು ಭಾಷೆಯನ್ನು ಬಲ್ಲ ಭಾಷಿಕರು ಮತ್ತೊಂದು ಭಾಷೆಯನ್ನು ಕೇಳಿ ಅರ್ಥಮಾಡಿಕೊಳ್ಳುವ ನೆಲೆಯಲ್ಲಿ ಮಾತ್ರ ಒಂದು ಭಾಷೆಯ ಸಾಮರ್ಥ್ಯವನ್ನು ಪಡೆದಿರಬಹುದು. ಇಂತಹ ಸಂದರ್ಭವನ್ನು ಅರೆ ದ್ವಿಭಾಷಿಕತೆ ಎಂದು ಕರೆಯುತ್ತಾರೆ. "ಸಾಮುದಾಯಿಕ ನೆಲೆಯಲ್ಲಿ ಮತ್ತು ವ್ಯಕ್ತಿಗತ ನೆಲೆಯಲ್ಲಿ ಅರೆ ದ್ವಿಭಾಷಿಕತೆ ಬೇರೆ - ಬೇರೆ ರೀತಿಯಲ್ಲಿ ಬೇರೆ - ಬೇರೆ ಪರಿಣಾಮದೊಂದಿಗೆ ಕಾಣಿಸಿಕೊಳ್ಳಲು ಸಾಧ್ಯ" ಕೆ.ವಿ.ನಾರಾಯಣ (1998:6). ಆದ್ದರಿಂದ ದ್ವಿಭಾಷಾ ಸಂದರ್ಭವೊಂದರಲ್ಲಿ ಭಾಷಿಕರ ಕಲಿಕೆ - ಬಳಕೆ - ನಿರ್ವಹಣೆಯ ನೆಲೆಗಳು ಕುತೂಹಲಕಾರಿಯಾಗಿವೆ. ಬಳ್ಳಾರಿ ಪರಿಸರದಲ್ಲಿ ತೆಲುಗು - ಕನ್ನಡ ದ್ವಿಭಾಷಿಕತೆಯು ಉಂಟಾಗಿರುವುದಕ್ಕೆ ಗುರುತಿಸಲಾದ ಕಾರಣಗಳಲ್ಲಿ ಮುಖ್ಯವಾಗಿ ಎರಡು ರೀತಿಯ ಕಾರಣಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ. ಬಳ್ಳಾರಿ ಪರಿಸರದಲ್ಲಿ ಚಾರಿತ್ರಿಕ ಕಾರಣದಿಂದಲೂ ಕನ್ನಡ - ತೆಲುಗು ದ್ವಿಭಾಷಿಕ ಸಂದರ್ಭವಿದೆಯಾದರೂ ಇಲ್ಲಿ ಮುಖ್ಯವಾಗಿ ಎರಡು ನೆಲೆಗಳಲ್ಲಿ ದ್ವಿಭಾಷಿಕತೆಯು ಉಂಟಾಗಿರುವುದನ್ನು ಗಮನಿಸಲಾಗಿದೆ. 1. ವಲಸೆ ಕಾರಣದಿಂದ 2. ವೈವಾಹಿಕ

ಸಂಬಂಧದಿಂದ. ಅನೇಕ ಕಾರಣಗಳಿಂದಾಗಿ ಉಂಟಾಗಿರುವ ವಲಸೆಯಿಂದ ಕನ್ನಡ - ತೆಲುಗು ದ್ವಿಭಾಷಾ ಸಂದರ್ಭಗಳು ಹೆಚ್ಚಾಗಿರುವುದು ಕಾಣುತ್ತಿದೆ. ಆದ್ದರಿಂದ ವಲಸಿಗರಿಂದ ಉಂಟಾದ ದ್ವಿಭಾಷಿಕತೆಯು ಅನೇಕ ಕಾರಣಗಳಿಂದ ಮುಖ್ಯವಾಗಿದೆ.

## ವಲಸಿಗರಿಂದ ಉಂಟಾದ ದ್ವಿಭಾಷಿಕತೆ

" 'ವಲಸೆ' ಒಂದು ಸಾಮಾಜಿಕ ಪ್ರಕ್ರಿಯೆ. ಇದು ಒಂದು ದೇಶದ ಅಭಿವೃದ್ಧಿಯಲ್ಲಿ ಮಹತ್ವದ ಪಾತ್ರವಹಿಸುತ್ತದೆ. ವಲಸೆ ಪ್ರತಿಯೊಂದು ಸಮಾಜದಲ್ಲೂ ನಿರಂತರವಾಗಿ ನಡೆಯುವ ಪ್ರಕ್ರಿಯೆಯಾಗಿದೆ. ಮೂಲನಿವಾಸಿಗಳು, ಪ್ರವಾಸಿಗರು, ಸಂದರ್ಶಕರು, ಮತ್ತು ನಿರಾಶ್ರಿತರು ವಲಸೆಗಾರರೆನಿಸಿಕೊಳ್ಳುವುದಿಲ್ಲ. 'ವಲಸೆ' ಎಂದರೆ 'ಒಂದು ವ್ಯಕ್ತಿ ಇಲ್ಲವೆ ಒಂದು ಭಾಷಿಕ ಸಮುದಾಯ ದೈಹಿಕವಾಗಿ ಒಂದು ಸಾಮಾಜಿಕ ಪರಿಸರದಿಂದ ಇನ್ನೊಂದು ಸಾಮಾಜಿಕ ಪರಿಸರದಲ್ಲಿ ಶಾಶ್ವತವಾಗಿ ನೆಲೆಸುವುದು" ಇದು ವಲಸೆಯ ಸ್ಥೂಲವಾದ ವ್ಯಾಖ್ಯಾನ, ಬಡತನ, ಬರಗಾಲ, ಉದ್ಯೋಗ, ವ್ಯಾಪಾರ, ಶಿಕ್ಷಣ, ಅತಿವೃಷ್ಟಿ, ಅನಾವೃಷ್ಟಿ, ಭೂಕಂಪ, ಚಂಡಮಾರುತ, ಬಿರುಗಾಳಿ, ಯುದ್ಧಗಳು ಇತ್ಯಾದಿ ಕಾರಣಗಳಿಂದ ಒಂದು ಗ್ರಾಮೀಣ ಪ್ರದೇಶದಿಂದ ಮತ್ತೊಂದು ಗ್ರಾಮೀಣ ಪ್ರದೇಶಕ್ಕೆ ಮತ್ತು ಒಂದು ನಗರ ಪ್ರದೇಶದಿಂದ ಮತ್ತೊಂದು ನಗರ ಪ್ರದೇಶಕ್ಕೆ ವಲಸೆ ಹೋಗುವುದು ಸಹಜ. ಈ ವಲಸೆಯಲ್ಲಿ ಅನೇಕ ಪ್ರಕಾರಗಳಿವೆ. ಕಾಲ ಮತ್ತು ಅಂತರ ಸ್ಥಾನಮಾನಗಳ ಆಧಾರದ ಮೇಲೆ ವಲಸೆಯನ್ನು ವರ್ಗೀಕರಿಸುತ್ತಾರೆ. ದೇಶದ ಒಳಗಡೆಯಲ್ಲಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಹೋಗಿ ಶಾಶ್ವತವಾಗಿ ನೆಲೆಸುವುದಕ್ಕೆ 'ಆಂತರಿಕ ವಲಸೆ' " ಎನ್ನುತ್ತಾರೆ. ಪಿ.ಮಹಾದೇವಯ್ಯ (1999:16). ಆಂಧ್ರಪ್ರದೇಶದ ತೆಲುಗರು ಕರ್ನಾಟಕದ ಬಳ್ಳಾರಿ ಜಿಲ್ಲೆಗೆ ವಲಸೆ ಬಂದಿರುವುದು ಅಥವಾ ಕನ್ನಡಿಗರು ಆಂಧ್ರಪ್ರದೇಶಕ್ಕೆ ಹೋಗಿರುವುದು ಆಂತರಿಕ ವಲಸೆ ಎನಿಸಿದೆ. ಅದೇರೀತಿ ಒಂದು ಜಿಲ್ಲೆಯಿಂದ ಮತ್ತೊಂದು ಜಿಲ್ಲೆಗೆ, ತಾಲ್ಲೂಕಿನಿಂದ ಮತ್ತೊಂದು ತಾಲ್ಲೂಕಿಗೆ, ಒಂದು ಗ್ರಾಮದಿಂದ ಮತ್ತೊಂದು ಗ್ರಾಮಕ್ಕೆ ಶಾಶ್ವತವಾಗಿ ವಲಸೆ ಹೋಗುವುದು ಈ ಪ್ರಕಾರದ ವಲಸೆಯಲ್ಲಿ ಬರುತ್ತದೆ. ಆಂಧ್ರಪ್ರದೇಶದ ತೆಲುಗರು ಬಳ್ಳಾರಿ ಜಿಲ್ಲೆಗೆ ವಲಸೆ ಬಂದಿರುವುದು ಆಂಧ್ರಪ್ರದೇಶದ ದೃಷ್ಟಿಯಲ್ಲಿ ಹೊರವಲಸಿಗರಾದರೆ, ಬಳ್ಳಾರಿ ಜಿಲ್ಲೆಯ ದೃಷ್ಟಿಯಿಂದ ಒಳವಲಸಿಗರಾಗಿದ್ದಾರೆ. 'ವಲಸೆ' ಎನ್ನುವ ಪರಿಕಲ್ಪನೆಯನ್ನು ಇಲ್ಲಿ ಒಂದು ದ್ವಿಭಾಷಾ ಪ್ರದೇಶದಿಂದ ಮತ್ತೊಂದು ದ್ವಿಭಾಷಾ ಪ್ರದೇಶಕ್ಕೆ ಭಾಷಿಕರು ಬಂದಿರುವ 'ವಲಸೆ' ಎಂದು ಬಳಸಲಾಗಿದೆ.

ಬಳ್ಳಾರಿ ಪರಿಸರದಲ್ಲಿ ಬಹುಸಂಖ್ಯಾತ ಕನ್ನಡಿಗರ ಜೊತೆ ತಮಿಳು, ತೆಲುಗು, ಉರ್ದು, ಮರಾಠಿ ಮಾತನಾಡುವ ಸಮುದಾಯಗಳು ನೆಲೆಗೊಂಡಿವೆಯಲ್ಲದೆ ಇನ್ನು ಕೆಲವರು ಜಗತ್ತಿನ ಹಲವು ಭಾಷೆಗಳನ್ನು ಕಲಿತು ಬಳಸುವ ಭಾಷಿಕರು ಇಲ್ಲಿ ಕಾಣುತ್ತಾರೆ. ಅರವತ್ತು - ಎಪ್ಪತ್ತರ ದಶಕಗಳಲ್ಲಿ ಈ ಜಿಲ್ಲೆಯಲ್ಲಿ ಉಂಟಾದ ತುಂಗ - ಭದ್ರ ಆಣೆಕಟ್ಟು

ನಿರ್ಮಾಣ ಸಂದರ್ಭದಲ್ಲಿ ಆಂಧ್ರ - ತಮಿಳು ನಾಡುಗಳಿಂದ ಆಣೆಕಟ್ಟಿನ ಕಾಮಗಾರಿಗಳಿಗಾಗಿ ಬಂದ ಅನ್ಯಭಾಷಿಕರನೇಕರು ಆಣೆಕಟ್ಟಿನ ಕೆಲಸ ಪೂರ್ಣಗೊಂಡ ನಂತರ ಮತ್ತೆ ತಮ್ಮ ತಾಯ್ನಾಡಿಗೆ ಹೋಗದೆ ಇಲ್ಲೆ ನೆಲೆನಿಂತರು. ಕೆಲವರಷ್ಟೇ ಅವರಲ್ಲಿ ತಿರುವಲಸೆ ಹೋದಂತೆ ಕಾಣುತ್ತದೆ. ಹೆಚ್ಚಿನ ವಲಸಿಗರು ಇಲ್ಲೆ ಸಣ್ಣ - ಪುಟ್ಟ ಉದ್ಯೋಗಗಳನ್ನು ಮಾಡಿಕೊಂಡು, ಕೂಲಿ, ಕೃಷಿಕೂಲಿ, ಕುಲಕಸುಬುಗಳು, ಆಟೋ, ಸೈಕಲ್ ರಿಕ್ಷಾ ಓಡಿಸುವುದು, ಪಶುಪಾಲನೆ, ಬಟ್ಟೆ ಇಸ್ತ್ರಿ ಮಾಡುವುದು, ಕ್ಷೌರಿಕ ವೃತ್ತಿ, ಮನೆಕೆಲಸಗಳನ್ನು ಮಾಡುವುದು ಇತ್ಯಾದಿ ಉದ್ಯೋಗಗಳಲ್ಲಿ ತೊಡಗಿಕೊಂಡಿದ್ದರೆ, ಕೆಲವರು ಮುನಿಸಿಪಾಲಿಟಿಯಲ್ಲಿ ಸ್ವೀಪರ್‌ಗಳಾಗಿ, ರೈಲ್ವೆ ನಿಲ್ದಾಣ, ಆಸ್ಪತ್ರೆಗಳಲ್ಲಿ ಮತ್ತು ಕೆಲವು ಸರ್ಕಾರಿ ಕಛೇರಿಗಳಲ್ಲಿ ಜವಾನರಾಗಿ , ಚಾಲಕರಾಗಿ, ಗುಮಾಸ್ತರಾಗಿ ಕೆಲಸ ನಿರ್ವಹಿಸುತ್ತಿದ್ದಾರೆ. ಇವರಲ್ಲಿ ಬಹಳಷ್ಟು ಜನರು ಕೆಳವರ್ಗ, ಕೆಳಜಾತಿಯವರಾಗಿದ್ದು, ಅವಿದ್ಯಾವಂತರು, ಆರ್ಥಿಕವಾಗಿ, ಸಾಮಾಜಿಕವಾಗಿ, ಹಿಂದುಳಿದವರಾಗಿದ್ದು, ದಿನನಿತ್ಯದ ಬದುಕಿಗೆ ಕೂಲಿಯೆ ಆಧಾರವಾಗಿದೆ. ಇದರ ಜೊತೆಗೆ ಬಳ್ಳಾರಿ ಜಿಲ್ಲೆಯ ಪೂರ್ವಭಾಗದ ತಾಲ್ಲೂಕಿನಲ್ಲಿ ನೆಲೆಗೊಂಡಿರುವ ಔದ್ಯಮೀಕರಣ ಪ್ರಕ್ರಿಯೆಯು ಸೃಷ್ಟಿಸಿರುವ ಉದ್ಯೋಗಾವಕಾಶಕ್ಕಾಗಿಯೂ ಮತ್ತು ಬಳ್ಳಾರಿ ಜಿಲ್ಲೆಯಲ್ಲಿನ ಬಹುದೊಡ್ಡ ಗಣಿಗಾರಿಕೆಯು ಸೃಷ್ಟಿಸಿರುವ ಉದ್ಯೋಗಾವಕಾಶಗಳಿಂದಾಗಿಯೂ ಆಂಧ್ರದಿಂದ ಈ ಪ್ರದೇಶಕ್ಕೆ ವಲಸೆ ಬಂದು ನೆಲೆಸಿರುವವರ ಪ್ರಮಾಣ ಹೆಚ್ಚಿದೆ. ತುಂಗಭದ್ರಾ ನದಿ ಹರಿಯುವ ವಿರುದ್ಧ ದಿಕ್ಕಿನಲ್ಲಿ ವಲಸೆಯು ಹರಿದುಕೊಂಡು ಬಂದಿದೆ.

ಮತ್ತೊಂದೆಡೆ ತುಂಗಭದ್ರಾ ನದಿಯ ನೀರಾವರಿ ಸೌಲಭ್ಯದಿಂದಾಗಿ ಇಲ್ಲಿನ ಭೂಮಿಯನ್ನು ಕೊಂಡು ಸಾಗುವಳಿ ಮಾಡಲು ವಲಸೆ ಬಂದಿರುವ ಅನೇಕ ಕೃಷಿ ಕುಟುಂಬಗಳು, ಇವರಲ್ಲಿಹೆಚ್ಚಿನವರು ನೂರಾರು ಎಕರೆ ಭೂಮಿಯನ್ನು ಹೊಂದಿದ್ದು, ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಮುಂದುವರೆದವರಾಗಿದ್ದು, ಇವರು ನೆಲೆಸಿರುವ ಸ್ಥಳಗಳಲ್ಲಿ ರಾಜಕೀಯವಾಗಿಯೂ ಪ್ರಬಲರಾಗಿದ್ದಾರೆ. ಇವರುಗಳಲ್ಲಿ ಹೆಚ್ಚಿನ ಕುಟುಂಬಗಳು ಮೇಲ್ಜಾತಿಗಳೆಂದು ಹೇಳಿಕೊಳ್ಳುವ ಕುಟುಂಬಗಳಾಗಿದ್ದು, ಇತರೆ ಜಾತಿಗಳು ಅಲ್ಪ ಪ್ರಮಾಣದಲ್ಲಿ ಕಾಣುತ್ತಾರೆ. ಕೃಷಿಯನ್ನು ಆಧರಿಸಿದ ಕುಟುಂಬಗಳಾದ್ದರಿಂದ ಹೆಚ್ಚಾಗಿ ಅವಿಭಕ್ತ ಕುಟುಂಬಗಳು ಇರುವುದು ಕಾಣುತ್ತಿದೆ. ಇನ್ನು ಕೆಲವು ತೆಲುಗು ಭಾಷಿಕರು ತಲೆ - ತಲಾಂತರಗಳಿಂದಲೂ ಇಲ್ಲೆ ನೆಲೆಸಿರುವ ಸ್ಥಳೀಯ ಗುಂಪುಗಳು ಇವರುಗಳು ವ್ಯಾಪಾರ, ವಾಣಿಜ್ಯ, ಕೈಗಾರಿಕೆ, ಶಿಕ್ಷಣ ಸಂಸ್ಥೆಗಳು, ರೈಸ್‌ಮಿಲ್, ದಿನಸಿ ಅಂಗಡಿಗಳು, ಚಿತ್ರಮಂದಿರ. ಇತ್ಯಾದಿ ವ್ಯಾಪಾರ - ವ್ಯವಹಾರಗಳಲ್ಲಿ ತೊಡಗಿದ್ದಾರೆ. ಬಳ್ಳಾರಿಯಂತಹ ನಗರ ಪ್ರದೇಶದಲ್ಲೆ ಹೆಚ್ಚಿನ ತೆಲುಗು ಭಾಷಿಕರು ನೆಲೆಸಿರುವುದರಿಂದ ಬಳ್ಳಾರಿ ನಗರವಲ್ಲೊಂದು ಆಂಧ್ರಪ್ರದೇಶವಿದೆ ಎನಿಸುತ್ತದೆ. ಕೂಲಿಗಾಗಿ ವಲಸೆ ಬಂದಿರುವವರು ತೋರಣಗಲ್ಲು, ಹೊಸಪೇಟೆ, ಕಂಪ್ಲಿ, ಸಿರುಗುಪ್ಪ ಸುತ್ತ - ಮುತ್ತಲ ಪ್ರದೇಶಗಳಲ್ಲಿ ನೆಲೆಸಿದ್ದಾರೆ. ಇವರು ನೆಲೆಸಿರುವ ಪ್ರದೇಶಗಳನ್ನು ತೆಲುಗು ಕ್ಯಾಂಪ್‌ಗಳೆಂದು ಕರೆಯಲಾಗುತ್ತದೆ. ಇಂತಹ ಅನೇಕ ಕ್ಯಾಂಪ್‌ಗಳು ಬಳ್ಳಾರಿಯ ಪೂರ್ವ ಮತ್ತು ಉತ್ತರ ಭಾಗದಲ್ಲಿ

ನೆಲೆಗೊಂಡಿವೆ.

ಈ ಪ್ರದೇಶದಲ್ಲಿ ಕನ್ನಡಿಗರೇ ಬಹುಸಂಖ್ಯಾತರಂತೆ ಕಾಣುತ್ತಿದ್ದು, ಕೃಷಿಯನ್ನು ಬದುಕನ್ನಾಗಿ ಮಾಡಿಕೊಂಡಿರುವ ಜನರ ಪ್ರಮಾಣವೇ ಅಧಿಕವಾಗಿ ಕಾಣುತ್ತಿದೆ. ಪಟ್ಟಣದ ವ್ಯಾಪಾರ, ವಾಣಿಜ್ಯ, ಕೈಗಾರಿಕೆ, ಶಿಕ್ಷಣ ಸಂಸ್ಥೆಗಳು, ರೈಸ್ ಮಿಲ್‌ಗಳು, ಕನ್ನಡಿಗರ ಕೈಯಲ್ಲಿ ಇವೆ. ಬಳ್ಳಾರಿ ನಗರ ಪ್ರದೇಶದಲ್ಲಿ ಮಾತ್ರ ಕನ್ನಡಿಗರು ಮತ್ತು ತೆಲುಗರಿಬ್ಬರಲ್ಲೂ ಆರ್ಥಿಕ ಸ್ಥಾನಮಾನಗಳು ಸಮ ಪ್ರಮಾಣದಲ್ಲಿ ಇದ್ದಂತೆ ತೋರುತ್ತದೆ. ಆದರೆ ರಾಜಕೀಯವಾಗಿ ಹೆಚ್ಚಿನ ಸ್ಥಾನಗಳು ತೆಲುಗು ಭಾಷಿಕರೇ ಪಡೆದುಕೊಂಡಿದ್ದಾರೆ. ಆದ್ದರಿಂದ ಬಳ್ಳಾರಿ ನಗರ ಮತ್ತು ಸುತ್ತ - ಮುತ್ತಲ ಪ್ರದೇಶಗಳಲ್ಲಿ ತೆಲುಗು ಭಾಷಿಕರು ರಾಜಕೀಯವಾಗಿ ಪ್ರಬಲರಾಗಿರುವುದರಿಂದ ಭಾಷೆಯ ಬಳಕೆಯ ಮೇಲೆ ಇದು ಪ್ರಭಾವ ಬೀರುವಂತಿದೆ. ಹಾಗೆ ಕನ್ನಡಿಗರು ಬಹುಸಂಖ್ಯಾತರಾಗಿದ್ದು ಹೆಚ್ಚಿನ ಶಿಕ್ಷಣ ಸಂಸ್ಥೆಗಳನ್ನು ಹೊಂದಿದವರಾಗಿರುವುದರಿಂದ ಶಿಕ್ಷಣದಿಂದುಂಟಾಗುತ್ತಿರುವ ದ್ವಿಭಾಷಿಕತೆಯಲ್ಲಿ ಕನ್ನಡಿಗರ ಪಾತ್ರವೂ ಗಮನಾರ್ಹ.

ವಲಸೆ ಬಂದ ಭಾಷಿಕರಲ್ಲಿ ಲಿಂಗಾಯತರು, ಬ್ರಾಹ್ಮಣ ಜಾತಿಗಳು ಪ್ರಮಾಣದಲ್ಲಿ ಇಲ್ಲವೇ ಇಲ್ಲವೆನ್ನುವಷ್ಟಿದೆ. ಮಿಕ್ಕಂತೆ ಎಲ್ಲಾ ಜಾತಿಗಳವರು, ಎಲ್ಲಾ ವರ್ಗದವರು, ಎಲ್ಲಾ ವಯಸ್ಸಿನವರು ವಲಸೆ ಬಂದಿದ್ದಾರೆ. ಕೆಳವರ್ಗ, ಕೆಳಜಾತಿಗಳು ಕೂಲಿಗಾಗಿಯೇ ಅಧಿಕವಾಗಿ ವಲಸೆ ಬಂದಿರುವುದು ಕಾಣುತ್ತಿದೆ. ಕೆಲವೆಡೆಗಳಲ್ಲಿ ಕನ್ನಡಿಗರಿಗಿಂತ ಉನ್ನತ ವರ್ಗದ ತೆಲುಗು ವಲಸಿಗರೇ ಹೆಚ್ಚಿನ ಪ್ರಮಾಣದ ಕೃಷಿ ಭೂಮಿಯನ್ನು ಹೊಂದಿದವರಾಗಿದ್ದು, ಕನ್ನಡಿಗರು ಅವರ ಗದ್ದೆಗಳಲ್ಲಿ ಕೆಲಸ ಮಾಡುತ್ತಿರುವ ಪರಿಸ್ಥಿತಿಗಳಿವೆ. ಹೆಚ್ಚಿನ ವಲಸಿಗರು ಒಂದೇ ಪ್ರದೇಶಗಳಲ್ಲಿ ನೆಲೆಸಿರುವುದರಿಂದ ಇಂತಹ ಪ್ರದೇಶಗಳು ಪುಟ್ಟ - ಪುಟ್ಟ ಭಾಷಾದ್ವೀಪಗಳೇ ಆಗಿವೆ. ಕರ್ನಾಟಕ ಸರ್ಕಾರ ಅವರವರ ಮನೆಭಾಷೆಯಲ್ಲೆ ಶಿಕ್ಷಣ ನೀಡಬಹುದೆಂಬ ಭಾಷಾ ನೀತಿಗನುಗುಣವಾಗಿ ಕೆಲವು ತೆಲುಗು ಭಾಷಿಕರು ತೆಲುಗು ಮಾಧ್ಯಮದಲ್ಲಿ ಶಿಕ್ಷಣವನ್ನು ಪಡೆಯುತ್ತಿದ್ದಾರೆ. ಇವರಲ್ಲಿ ಕೆಲವರು ವಲಸೆ ಬಂದು ಮೂರು - ನಾಲ್ಕು ತಲೆಮಾರುಗಳ ಹಿಂದಿನವರಾಗಿದ್ದರೆ, ಕೆಲವು ಕುಟುಂಬಗಳು ಒಂದೆರಡೆ ತಲೆಮಾರುಗಳ ಹಿಂದೆ ವಲಸೆ ಬಂದಂತೆ ಕಾಣುತ್ತಿದೆ. ಇವರೆಲ್ಲರ ಮನೆಭಾಷೆ ತೆಲುಗು.

ಹೀಗೆ ವಲಸೆ ಬಂದ ತೆಲುಗು ಭಾಷಿಕರಿಗೆ ಇಲ್ಲಿನ ಸಾಮಾಜಿಕ ಪರಿಸರದ ಭಾಷೆಯನ್ನು ಕಲಿಯುವ ಅವಕಾಶಗಳು ಉಂಟಾಗಿದೆ. ಬಹುಸಂಖ್ಯಾತ ಕನ್ನಡಿಗರು ಈ ಜಿಲ್ಲೆಯಲ್ಲಿ ನೆಲೆಸಿರುವುದರಿಂದಲೂ, ಕರ್ನಾಟಕ ಸರ್ಕಾರದ ಆಡಳಿತ ಭಾಷೆ ಕನ್ನಡ ಆಗಿರುವುದರಿಂದಲೂ ಕನ್ನಡವನ್ನು ಕಲಿತು - ಬಳಸುವ ಅವಕಾಶಗಳು ತೆಲುಗರಿಗೆ ಇದ್ದಂತೆ ಕನ್ನಡಿಗರಿಗೆ ತೆಲುಗು ಭಾಷೆಯನ್ನು ಕಲಿತು ಬಳಸಬೇಕಾದ ಅನಿವಾರ್ಯತೆಗಳಿಲ್ಲ. ಆದ್ದರಿಂದ ತೆಲುಗು ಭಾಷಿಕರಿಗೆ ಈ ಸಮುದಾಯದಲ್ಲಿ ದ್ವಿಭಾಷಿಕರಾಗುವ ಅವಶ್ಯಕತೆಗಳು ಹೆಚ್ಚು ಇದೆ. ಇಂತಹ ಸಂದರ್ಭಗಳಲ್ಲಿ ಹೇಗೆ ತೆಲುಗು ಭಾಷಿಕರು ಕನ್ನಡ ಭಾಷೆಯನ್ನು ಕಲಿತು ಬಳಸುತ್ತಾರೆ.

ತೆಲುಗು ಭಾಷಿಕರೇ ಹೇಳುವಂತೆ ಕನ್ನಡವನ್ನು ಕಲಿತದ್ದು ಅಕ್ಕಪಕ್ಕದ ಮನೆಗಳಲ್ಲಿ, ಸ್ನೇಹಿತರ ಬಳಿ, ಎಂದರೆ ಇವರಲ್ಲಿ ದ್ವಿಭಾಷಿಕತೆ ಉಂಟಾಗಿರುವುದು ಸಾಮಾಜೀಕರಣದಿಂದ. ಇದು ಹೆಚ್ಚಾಗಿ ಮೊದಲ ತಲೆಮಾರುಗಳಲ್ಲಿ ಮತ್ತು ಎರಡನೆಯ ತಲೆಮಾರುಗಳಲ್ಲಿ ಕಾಣಸಿಗುತ್ತದೆ. ಈಗಿನ ತಲೆಮಾರುಗಳಲ್ಲಿ ಶೈಕ್ಷಣಿಕ ಸಂದರ್ಭಗಳಿಂದಾಗಿಯೇ ದ್ವಿಭಾಷಿಕರಾಗುತ್ತಿರುವ ಅವಶ್ಯಕತೆಗಳು ಹೆಚ್ಚಾಗುತ್ತಿವೆ. ಆದ್ದರಿಂದ ಈಗಿನ ತಲೆಮಾರುಗಳಲ್ಲಿ ಶಿಕ್ಷಣದಿಂದಾಗಿ ಹೆಚ್ಚಿನ ದ್ವಿಭಾಷಿಕತೆ ಉಂಟಾಗುತ್ತಿದೆ. ಹಾಗಾದರೆ ಸಾಮಾಜೀಕರಣದಿಂದ ಉಂಟಾಗುತ್ತಿರುವ ದ್ವಿಭಾಷಿಕತೆಗೂ, ಶೈಕ್ಷಣಿಕವಾಗಿ ಉಂಟಾಗುತ್ತಿರುವ ದ್ವಿಭಾಷಿಕತೆಗೂ ವ್ಯತ್ಯಾಸಗಳಿವೆಯೆ? ಸಾಮಾಜೀಕರಣದಿಂದ ಉಂಟಾಗಿರುವ ದ್ವಿಭಾಷಿಕತೆಯಲ್ಲಿ ಹೆಚ್ಚಾಗಿ ಮೌಖಿಕ ಕೌಶಲಗಳು ನೆಲೆಗೊಂಡಿದ್ದರೆ, ಶೈಕ್ಷಣಿಕ ಸಂದರ್ಭಗಳಿಂದ ಉಂಟಾದ ದ್ವಿಭಾಷಿಕತೆಯಲ್ಲಿ ಮೌಖಿಕ ಕೌಶಲಗಳ ಜೊತೆಗೆ ಸಾಕ್ಷರತೆಯ ಕೌಶಲಗಳು ಗಟ್ಟಿಗೊಂಡಿರುತ್ತವೆ. 'ವಲಸೆಗಾರರು ಸಾಮಾನ್ಯವಾಗಿ ಅನೌಪಚಾರಿಕ ಬಗೆಯಲ್ಲಿ ಭಾಷೆಯನ್ನು ಕಲಿಯುತ್ತಾರೆ. ಅವರ ಭಾಷಾ ಕಲಿಕೆಗೆ ಮಿತಿಗಳಿವೆ. ಅವರು ಕೆಲವು ಭಾಷಾ ಕೌಶಲಗಳನ್ನು ಸೀಮಿತ ಸಾಮರ್ಥ್ಯವನ್ನು ಗಳಿಸುತ್ತಾರೆ. ಅವರ ಮೊದಲ ಭಾಷೆ ಅಥವಾ ಪರಿಸರದ ಮತ್ತೊಂದು ಪ್ರಬಲ ಭಾಷೆ ಕಲಿಕೆಯಲ್ಲಿ ಪ್ರಭಾವ ಬೀರುತ್ತದೆ. ಗೂರ್ಖಾಗಳು, ಮಲೆಯಾಳಿ ವ್ಯಾಪಾರಿಗಳು, ತಮಿಳು ಕೆಲಸಗಾರರು, ಮಾರವಾಡಿಗಳು, ಮಾತನಾಡುವ ಕನ್ನಡವನ್ನು ಕೇಳಿದರೆ ಮೇಲಿನ ಮಾತು ಸ್ಪಷ್ಟವಾಗುತ್ತದೆ. ಪರಿಸರದ ಪ್ರಬಲ ಭಾಷೆಗಳಾದ ಹಿಂದಿ ಇಲ್ಲವೇ ಇಂಗ್ಲಿಶ್ ಕೂಡ ಅವರ ಕನ್ನಡ ಕಲಿಕೆಯನ್ನು ನಿಯಂತ್ರಿಸುತ್ತಿರುತ್ತದೆ.' ಕೆ.ವಿ.ನಾರಾಯಣ (2001:37). ಆದ್ದರಿಂದ ಸಾಮಾಜೀಕರಣದಿಂದ ಉಂಟಾಗುವ ದ್ವಿಭಾಷಿಕತೆಗೂ ಶೈಕ್ಷಣಿಕ ಕಾರಣಗಳಿಂದ ಉಂಟಾಗುವ ದ್ವಿಭಾಷಿಕತೆಗೂ ಭಿನ್ನತೆಗಳಿವೆ.

ಭಾಷೆಯೊಂದನ್ನು ಕಲಿತು ದ್ವಿಭಾಷಿಕರಾದ ಮೇಲೆ ಹೇಗೆ ಎರಡು ಭಾಷೆಗಳನ್ನು ಬಳಸುತ್ತಾರೆ. ಯಾವ - ಯಾವ ಆವರಣಗಳಲ್ಲಿ ಯಾವ ಭಾಷೆಯನ್ನು ಎಷ್ಟು ಬಳಸಬೇಕೆಂಬುದರ ಬಗೆಗೆ ಪ್ರಜ್ಞಾಪೂರ್ವಕ ಅರಿವಿರುತ್ತದೆಯೆ, ಭಾಷಾ ಆಯ್ಕೆಯನ್ನು ನಿಯಂತ್ರಿಸುವ, ನಿರ್ದೇಶಿಸುವ ಅಂಶಗಳು ಯಾವುವು? ಎಂಬುದನ್ನು ಕುರಿತಂತೆ ತೆಲುಗು - ಕನ್ನಡ ದ್ವಿಭಾಷಿಕರ ಭಾಷಾ ಬಳಕೆಯ ನೆಲೆಗಳನ್ನು ನೋಡಿದಾಗ ಕೆಳವರ್ಗದ ತೆಲುಗು ಭಾಷಿಕರಲ್ಲಿ ಕನ್ನಡವನ್ನು ಕಲಿತು ದ್ವಿಭಾಷಿಕರಾದವರು ಮೊದಲ ತಲೆಮಾರುಗಳಲ್ಲಿ ಕನ್ನಡಕ್ಕೆ ಆಂಶಿಕ ಪಲ್ಲಟವಾಗಿರುವುದೇ ಹೆಚ್ಚಿದ್ದಂತಿದೆ. ಇವರಲ್ಲಿ ಕನ್ನಡದ ಸಂದರ್ಭಗಳಲ್ಲಿ ಉದ್ಯೋಗವನ್ನು ಮಾಡುವವರು ಮಾತ್ರ ಕನ್ನಡದ ಅಧಿಕಾರಿಗಳ ಬಳಿ ಮಾತನಾಡುವಾಗ ಔಪಚಾರಿಕ ಆವರಣಗಳಲ್ಲಿ ಕನ್ನಡವನ್ನು ಬಳಸುತ್ತಾರೆ. ಅದೇ ಅನೌಪಚಾರಿಕ ಆವರಣಗಳಲ್ಲಿ ಸ್ನೇಹಿತರ ಬಳಿ, ತೆಲುಗು ಗೊತ್ತಿರುವ ಕನ್ನಡಿಗರ ಬಳಿ ತೆಲುಗನ್ನು ಮಾತನಾಡಲು ಇಚ್ಛಿಸುತ್ತಾರೆ. ಇವರಲ್ಲಿ ಭಾಷಾ ಆಯ್ಕೆ ಬಹುಮಟ್ಟಿಗೆ ನಿಗದಿಗೊಂಡಿರುವಂತಿದೆ. ಕನ್ನಡಿಗರು ಕಂಡ ತಕ್ಷಣ ಕನ್ನಡ, ತೆಲುಗರನ್ನು ಕಂಡತಕ್ಷಣ ತೆಲುಗು ಭಾಷೆಗೆ ನುಡಿಪಲ್ಲಟ ಮಾಡುತ್ತಾರೆ. ಈ ವರ್ಗದ ಹೆಚ್ಚಿನ ಮಹಿಳೆಯರಲ್ಲಿ ಆಂಶಿಕವಾದ ಪಲ್ಲಟ ಕನ್ನಡ ಭಾಷೆಯ ಕಡೆಗೆ ಆದಂತಿದೆ.

ಇವರುಗಳು ಹೆಚ್ಚು - ಹೆಚ್ಚು ಒಂದೇ ಪ್ರದೇಶದಲ್ಲಿ ನೆಲೆಸಿರುವುದರಿಂದ ಇವರುಗಳಿಗೆ ಕನ್ನಡದ ಸಾಮಾಜಿಕ ಸಂದರ್ಭಗಳಿಗಿಂತ ತೆಲುಗಿನ ಸಾಮಾಜಿಕ ಸಂದರ್ಭಗಳಲ್ಲಿ ದಿನನಿತ್ಯದ ಸಾಮಾಜಿಕ, ಭಾಷಿಕ ಕ್ರಿಯೆಗಳು ನಡೆಯುತ್ತಿರುವುದರಿಂದಲೂ, ಕೂಲಿ, ಕೃಷಿ ಕೂಲಿ, ಮನೆಕೆಲಸಗಳಿಗೆ ಹೋಗುವಂತಹ ಸಂದರ್ಭಗಳಲ್ಲಿ ಮಾತ್ರ ಆಂಶಿಕ ಪಲ್ಲಟ ಕನ್ನಡ ಭಾಷೆಯ ಕಡೆಗೆ ಇರುತ್ತದೆ. ಭಾಷಾದ್ವೀಪಗಳಲ್ಲಿ ನೆಲೆಸಿರದ ತೆಲುಗು ಭಾಷಿಕ ಕೆಳವರ್ಗದ ಕುಟುಂಬಗಳು ಮಾತ್ರ ಮನೆ, ಸಂಬಂಧಿಕರು ಆವರಣಗಳಲ್ಲಿ ಭಾಷೆಯನ್ನು ಉಳಿಸಿಕೊಂಡು ಮಿಕ್ಕಂತೆ ಸಂಪೂರ್ಣವಾದ ಪಲ್ಲಟ ಕನ್ನಡ ಭಾಷೆಯ ಕಡೆಗೆ ಆಗಿದೆ. ಇಲ್ಲಿ ಲಿಂಗಾಧಾರಿತವಾದ ವ್ಯತ್ಯಾಸವೇನೂ ಕಾಣುವುದಿಲ್ಲ. ಏಕೆಂದರೆ ಕನ್ನಡದ ಸಾಮಾಜಿಕ ಸಂದರ್ಭಗಳಿಗೆ ಹೆಚ್ಚು ತೆರೆದುಕೊಳ್ಳಬೇಕಾದ ಅವಕಾಶಗಳು ದಿನನಿತ್ಯದ ಬದುಕಿನಲ್ಲಿ ಹಾಸುಹೊಕ್ಕಿರುತ್ತವೆ. ಆದ್ದರಿಂದ ತೆಲುಗು ಮನೆ ಆವರಣದಲ್ಲಿ, ಒಳಗುಂಪಿನ ಸಂಬಂಧಿಕರಲ್ಲಿ ಮಾತ್ರ ಉಳಿದುಕೊಂಡಿದೆ. ಇನ್ನು ಈ ವರ್ಗಗಳಲ್ಲಿ ಬಹುಮಟ್ಟಿಗೆ ಪುರುಷರು ಕನ್ನಡ ಭಾಷೆಗೆ ಸಂಪೂರ್ಣ ಪಲ್ಲಟಗಳಾಗಿದ್ದರೂ, ಭಾಷಾ ದ್ವೀಪಗಳಲ್ಲಿ ನೆಲೆಸಿರುವವರಲ್ಲಿ ಇನ್ನೂ ಕೆಲವರು ಆಂಶಿಕ ಪಲ್ಲಟವಾಗಿರುವುದು ಕಾಣುತ್ತಿದೆ. ಕಾರಣ ಇವರುಗಳು ತಮ್ಮ ಕುಲಕಸುಬನ್ನೂ, ಸಣ್ಣ ಪುಟ್ಟ ಉದ್ಯೋಗಕ್ಕಾಗಿ ಸ್ವಭಾಷಿಕರನ್ನೆ ಅವಲಂಬಿಸಿರುವುದರಿಂದಲೂ ಭಾಷೆಯನ್ನು ಹೆಚ್ಚು ಉಳಿಸಿಕೊಂಡಿದ್ದಾರೆ. ಈಗಿನ ತಲೆಮಾರುಗಳಲ್ಲಿ ಶಿಕ್ಷಣದ ಸಂದರ್ಭಗಳಿಗೆ ಒಳಗಾದವರಲ್ಲಿ ಒಂದು ಹಂತದವರೆಗೂ ಮನೆಭಾಷೆಯ ಪ್ರಭಾವ ಉಚ್ಚಾರಣೆಯ ಹಂತದಲ್ಲಿದ್ದು, ಕನ್ನಡ - ತೆಲುಗು ಭಾಷೆಗಳ ಪ್ರತ್ಯೇಕ ಅರಿವು ಉಂಟಾದಾಗ ಕನ್ನಡ ಭಾಷಾ ಕೌಶಲಗಳು ಹೆಚ್ಚು ಗಟ್ಟಿಗೊಳ್ಳುತ್ತಾ ಹೋಗಿ ತೆಲುಗು ಭಾಷೆ ಮನೆ ಆವರಣಕ್ಕೆ ಮಾತ್ರ ಸೀಮಿತಗೊಳ್ಳುತ್ತಿರುವಂತೆ ಕಾಣುತ್ತದೆ. ಆದರೆ ಈ ಎಲ್ಲರೂ ಗ್ರಹಿಕೆಯ ನೆಲೆಗಳಿಗೆ ಮಾತ್ರ ತೆಲುಗನ್ನೆ ಉಳಿಸಿಕೊಂಡಂತಿದೆ. ರೇಡಿಯೋದಲ್ಲಿ ತೆಲುಗು ಚಿತ್ರಗೀತೆಗಳನ್ನು ಕೇಳುವುದರ ಮೂಲಕ, ಈ ಟಿ.ವಿ, ಜೆಮಿನಿ ಟಿ.ವಿಯಲ್ಲಿ ತೆಲುಗು ಸಿನಿಮಾ, ಧಾರವಾಹಿಗಳನ್ನು ನೋಡುವುದರ ಮೂಲಕ ತೆಲುಗು ಭಾಷೆಯನ್ನು ಗ್ರಹಿಕೆಯ ನೆಲೆಯಲ್ಲಿ ಉಳಿಸಿಕೊಂಡಿದ್ದಾರೆ.

ಉನ್ನತವರ್ಗದ ತೆಲುಗು ಭಾಷಿಕರಲ್ಲಿ ತೆಲುಗು ಭಾಷೆ ಮನೆ ಆವರಣದಲ್ಲಿ ಹೆಚ್ಚು ಬಳಸಿದರೂ, ಔಪಚಾರಿಕ ಆವರಣಗಳಲ್ಲೂ ತೆಲುಗು ಸ್ನೇಹಿತರು, ಅಧಿಕಾರಿಗಳು, ಇತರೆ ವರ್ಗದ ಜನರೊಂದಿಗೆ ಭಾಷೆಯನ್ನು ಬಳಸುತ್ತಾರೆ. ಕೆಳವರ್ಗದ ತೆಲುಗು ಭಾಷಿಕರಿಗಿದ್ದಂತೆ ಯಾವುದೇ ರೀತಿಯ ಭಾಷಾ ಬಳಕೆಗೆ ಹಿಂಜರಿಕೆಗಳು ಇದ್ದಂತೆ ತೋರುವುದಿಲ್ಲ. ತಾವು ಬಳಸುವ ಭಾಷೆ ಪ್ರತಿಷ್ಠೆ ಎನ್ನುವುದೇ ಇದಕ್ಕೆ ಕಾರಣವಾಗಿರಬಹುದು. ಕನ್ನಡವನ್ನು ಕಲಿತು ದ್ವಿಭಾಷಿಕರಾದವರು ಯಾವ ವರ್ಗದ, 'ಜಾತಿಯ ಭಾಷಿಕರಾದರೂ ಬಹುಮಟ್ಟಿಗೆ ಭಾಷಾ ಆಯ್ಕೆಗಳು ನಿಗದಿಗೊಂಡಿದ್ದು, ಕನ್ನಡ ದ್ವಿಭಾಷಾ ಸಂದರ್ಭವೊಂದರಲ್ಲಿ ಹೆಚ್ಚು ಪ್ರಜ್ಞಾಪೂರ್ವಕವಾಗಿಯೇ ಭಾಷಿಕರು ಸಹಜವಾಗಿ ಭಾಷಿಕ ಸಂದರ್ಭಗಳನ್ನು ನಿಭಾಯಿಸುವಂತೆ ಕಾಣುತ್ತಿದೆ.

## ವೈವಾಹಿಕ ಸಂಬಂಧದಿಂದ ಉಂಟಾದ ದ್ವಿಭಾಷಿಕತೆ

ಬಳ್ಳಾರಿ ಪರಿಸರದ ದ್ವಿಭಾಷಾ ಸಂದರ್ಭದಲ್ಲಿ ವಲಸಿಗರಿಂದ ಉಂಟಾದ ದ್ವಿಭಾಷಿಕತೆ ಒಂದೆಡೆ ಕಂಡುಬರುತ್ತಿದ್ದರೆ, ಆಂಧ್ರದೊಂದಿಗಿನ ವೈವಾಹಿಕ ಸಂಬಂಧದಿಂದಾಗಿ ಉಂಟಾಗಿರುವ ದ್ವಿಭಾಷಿಕತೆ ಮತ್ತೊಂದೆಡೆ ಕಾಣುತ್ತಿದೆ. ಆಂಧ್ರ - ಕರ್ನಾಟಕದ ಗಡಿ ಪ್ರದೇಶದ ತೆಲುಗರು - ತೆಲುಗರೊಂದಿಗೆ, ತೆಲುಗರು - ಕನ್ನಡಿಗರೊಂದಿಗೆ ವೈವಾಹಿಕ ಸಂಬಂಧವನ್ನು ಬೆಳೆಸಿರುವುದರಿಂದ ಉಂಟಾಗಿರುವ ದ್ವಿಭಾಷಿಕತೆ ಒಂದು ರೀತಿಯಲ್ಲಿ ಭಿನ್ನವಾಗಿದೆ. ತೆಲುಗು ಪ್ರದೇಶಗಳಿಂದ ವೈವಾಹಿಕ ಸಂಬಂಧದಿಂದಾಗಿ ಬಂದ ವಿವಾಹಿತ ಮಹಿಳೆಯರು ಹೇಗೆ ಕನ್ನಡವನ್ನು ಕಲಿತು ದ್ವಿಭಾಷಿಕರಾಗಿದ್ದಾರೆ. ಇವರಿಗೆ ದ್ವಿಭಾಷಿಕರಾಗುವ ಒತ್ತಡಗಳು ಇವೆಯೆ ಹೇಗೆ ಭಾಷೆಯನ್ನು ಕಲಿಯುತ್ತಾರೆ. ಏಕೆಂದರೆ ಸಾಮಾನ್ಯವಾಗಿ ವಿವಾಹವಾಗಿ ಬರುವ ಮಹಿಳೆಯರು ವಯಸ್ಕ ಭಾಷಾ ಕಲಿಕೆಯ ಹಂತವನ್ನು ದಾಟಿದವರಾಗಿರುತ್ತಾರೆ. ಆದ್ದರಿಂದ ಭಾಷಾ ಕಲಿಕೆ ಸಹಜವಾಗಿರುವುದಿಲ್ಲ. ವಿವಾಹದ ಸಂದರ್ಭಗಳಿಗೆ ಒಳಗಾದ ಮತ್ತೊಂದು ಭಾಷೆಯನ್ನು ಕಲಿಯುವ ಅನಿವಾರ್ಯಗಳು ಒದಗಿಬಂದರೆ ಹೇಗೆ ಇಂತಹ ಸಂದರ್ಭವೊಂದನ್ನು ನಿಭಾಯಿಸಬಲ್ಲರು ಎಂಬುದು ಕುತೂಹಲದ ಸಂಗತಿ. ಪರಿಸರದಲ್ಲಿ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ದೊರೆತ ಬಹಳಷ್ಟು ದ್ವಿಭಾಷಾ ಕುಟುಂಬಗಳ ಬಗೆಗಿನ ಮಾಹಿತಿಯ ಭಿನ್ನ ಸಂದರ್ಭವೊಂದನ್ನು ಮುಂದಿಟ್ಟಿದೆ. ವೈವಾಹಿಕ ಸಂಬಂಧದಲ್ಲಿ ಸಾಮಾನ್ಯವಾಗಿ ವಿವಾಹಿತ ಪುರುಷರ ಭಾಷೆಗೆ ಮಹಿಳೆಯರು ಪಲ್ಲಟಗೊಳ್ಳುವ ಸಂದರ್ಭಗಳೇ ಹೆಚ್ಚು ಕಾಣುತ್ತಿರುವ ಸಂದರ್ಭದಲ್ಲಿ ಇಲ್ಲಿ ಮಾತ್ರ ವಿವಾಹಿತ ಮಹಿಳೆಯರ ಭಾಷೆಗೆ ಪುರುಷರು ಪಲ್ಲಟಗೊಂಡಿರುವುದರಿಂದ ಹೆಚ್ಚಿನ ದ್ವಿಭಾಷಿಕರಾಗುವ ಅನಿವಾರ್ಯಗಳು ಮಹಿಳೆಯರಲ್ಲಿ ಕಾಣುತ್ತಿಲ್ಲ.

ಸುತ್ತ - ಮುತ್ತಲ ಪರಿಸರ ಕನ್ನಡದ್ದೇ ಆಗಿದ್ದು, ಕನ್ನಡದ ಸಾಮಾಜಿಕ ಸಂದರ್ಭಗಳಿಗೆ ತೆರೆದುಕೊಳ್ಳುವ ಅನಿವಾರ್ಯ ಅವಕಾಶಗಳು ವಿವಾಹಿತ ಮಹಿಳೆಯರಲ್ಲಿ ಉಂಟಾದರೆ ಮಾತ್ರ ಕನ್ನಡವನ್ನು ಕಲಿಯುವ ಅವಶ್ಯಕತೆ ಒದಗುತ್ತದೆ. ಇಲ್ಲವಾದರೆ ಕೇವಲ ಗ್ರಹಿಕೆಯ ನೆಲೆಗಳಲ್ಲಷ್ಟೆ ಕನ್ನಡವನ್ನು ಕಲಿತು ಜೀವನವನ್ನು ನಿರ್ವಹಿಸುತ್ತಿರುವ ಮಹಿಳೆಯರೂ ಕಾಣುತ್ತಿದ್ದಾರೆ. ಇದಕ್ಕೆ ಬಹುಮಟ್ಟಿಗೆ ಅವರಿರುವ ಕುಟುಂಬ, ಪರಿಸರ, ಕಸಬು, ಜಾತಿ, ವರ್ಗ, ಶಿಕ್ಷಣ, ಈ ಎಲ್ಲಾ ಸಾಮಾಜಿಕ ಭಿನ್ನಾಂಶಗಳು ಕಾರಣವಾಗಿರುತ್ತವೆ. ಗ್ರಾಮೀಣ ಸಂದರ್ಭದಲ್ಲಿನ ಕೆಳಜಾತಿಯ, ಕೆಳವರ್ಗದ, ಅವಿಭಕ್ತ ಕುಟುಂಬದಲ್ಲಿ ನೆಲೆಸಿರುವ ವಿವಾಹಿತ ಮಹಿಳೆಗಾಗಲಿ, ಮೇಲ್‌ವರ್ಗದ ವಿವಾಹಿತ ಮಹಿಳೆಗಾಗಲಿ ಮತ್ತೊಂದು ಭಾಷೆಯನ್ನು ಕಲಿತು ಬಳಸುವ ಅವಶ್ಯಕತೆ ಇಲ್ಲದಿರಬಹುದು. ಆದರೆ ನಗರ ಸಂದರ್ಭಗಳಲ್ಲಿ ಹೆಚ್ಚಿನ ಸಾಮಾಜಿಕ ಸಂಪರ್ಕವಿದ್ದು ಸುತ್ತ - ಮುತ್ತಲ ಪರಿಸರ, ದಿನನಿತ್ಯದ ವ್ಯವಹಾರಗಳಿಗಾಗಿ, ಕನ್ನಡದ ಸಂದರ್ಭಗಳಿಗೆ ತೆರೆದುಕೊಳ್ಳಬೇಕಾದ್ದರಿಂದ ಮೌಖಿಕ ನೆಲೆಗಳಲ್ಲಿ ಭಾಷೆಯನ್ನು ಪಡೆದುಕೊಳ್ಳುವ ಸಾಧ್ಯತೆ ಹೆಚ್ಚು ಇರುತ್ತದೆ. ಜೊತೆಗೆ

ಕುಟುಂಬದಲ್ಲಿ ದ್ವಿಭಾಷಿಯಾಗುವ ಅವಶ್ಯಕತೆ ಇಲ್ಲದಿದ್ದರೂ, ಮಕ್ಕಳನ್ನು ಕನ್ನಡದ ಶೈಕ್ಷಣಿಕ ಸಂದರ್ಭಗಳಿಗೆ ಒಳಪಡಿಸಿದಾಗ ಹೆಚ್ಚಿನ ಮಹಿಳೆಯರು ದ್ವಿಭಾಷಿಕರಾಗಿರುವುದು ಕಾಣುತ್ತಿದೆ. ಭಾಷೆ ಕಲಿಕೆ ಪ್ರಾರಂಭವಾಗಿ ಕನ್ನಡ ಸಂದರ್ಭದಲ್ಲೆ ಬದುಕು ಮುಂದುವರೆದಂತೆಲ್ಲ ಕನ್ನಡದ ಮೌಖಿಕ ನೆಲೆಗಳು ಗಟ್ಟಿಕೊಳ್ಳುತ್ತಾ ಹೋಗುತ್ತವೆ. ಯಾವ ಆವರಣದಲ್ಲಿ ಕನ್ನಡ - ತೆಲುಗು ಭಾಷೆಯನ್ನು ಎಷ್ಟು ಬಳಸಬೇಕೆಂಬುದರ ಬಗೆಗಿನ ಭಾಷಾ ಆಯ್ಕೆ ನಿಗದಿಗೊಳ್ಳುತ್ತದೆ. ಇಂಥ ಸಂದರ್ಭದಲ್ಲಿ ವೈವಾಹಿಕ ಸಂಬಂಧದಿಂದಾಗಿ ಮಹಿಳೆಯರಲ್ಲಿ ಉಂಟಾದ ದ್ವಿಭಾಷಿಕತೆಯಲ್ಲಿ ಹೆಚ್ಚಿನ ನುಡಿಪಲ್ಲಟವನ್ನು ಕಾಣಬಹುದಾಗಿದೆ. ಜೊತೆಗೆ ಕನ್ನಡ ಭಾಷೆಯ ವಿಸ್ತಾರ ಕಡಿಮೆ ಇರುವಂತೆ ಕಾಣುತ್ತಿದೆ. ಏಕೆಂದರೆ ಒಂದು ಭಾಷೆಯನ್ನು ಕಲಿತು ಅನೇಕ ವರ್ಷಗಳ ನಂತರ ಮತ್ತೊಂದು ಭಾಷೆಯನ್ನು ಕಲಿಯಬೇಕಾದ ಪ್ರಸಂಗಗಳು ಒದಗಿ ಬರುವುದರಿಂದ ಮನೆಭಾಷೆಯನ್ನು ಕಲಿತಷ್ಟು ಸಹಜವಾಗಿ ಮತ್ತೊಂದು ಭಾಷೆಯನ್ನು ಕಲಿಯಲು ಆಗದೆ ಇರಬಹುದು. ಇಂಥ ಸಂದರ್ಭದಲ್ಲಿ ಸಹಜವಾಗಿಯೇ ನುಡಿಮಿಶ್ರಣ, ನುಡಿಪಲ್ಲಟದ ಭಾಷಿಕ ಕ್ರಿಯೆಗಳು ಉಂಟಾಗುತ್ತವೆ. ಭಾಷೆಯ ಕೌಶಲಗಳು ಗಟ್ಟಿಗೊಳ್ಳುತ್ತಾ ಹೋದಂತೆ ಮಿಶ್ರ ಮಾಡಿ ಬಳಸುತ್ತಿರುತ್ತಾರೆ. ಸಹಜವಾಗಿ ಎರಡು ಭಾಷೆಗಳನ್ನು ಬಳಸುವ ಸ್ಥಿತಿಯನ್ನು ತಲುಪಬಹುದು. ದೀರ್ಘವಾಗಿ ಇಂತಹ ಮಹಿಳೆಯರ ಜೊತೆ ಕೂತು ಕನ್ನಡ ಮಾತನಾಡುವ ಸಂದರ್ಭದಲ್ಲಿ ತಿಳಿದುಬಂದ ಸಂಗತಿಗಳಿವು. ಕನ್ನಡದಲ್ಲೇ ಮಾತು - ಕತೆಗಳನ್ನು ಪ್ರಾರಂಭಿಸಿದರೂ ಹೆಚ್ಚು ಹೊತ್ತು ಕನ್ನಡದಲ್ಲಿ ಸಂಭಾಷಣೆಯನ್ನು ಮುಂದುವರೆಸಲಾರರು. ಮಧ್ಯೆ - ಮಧ್ಯೆ ತೆಲುಗು ಭಾಷೆಯ ಪದಗಳು ಅಡ್ಡಬರುತ್ತಿರುತ್ತವೆ. ಇಲ್ಲವಾದರೆ ತೆಲುಗಿಗೆ ನುಡಿಪಲ್ಲಟ ಮಾಡುತ್ತಿರುತ್ತಾರೆ.

ದ್ವಿಭಾಷಿಕರಾಗುವ ಒತ್ತಡಗಳು ಅಥವಾ ಅವಶ್ಯಕತೆಗಳು ಯಾರಿಗಿದೆ. ದ್ವಿಭಾಷಿಕರಾದವರು ಹೇಗೆ ದ್ವಿಭಾಷಾ ಸಂದರ್ಭವನ್ನು ನಿರ್ವಹಿಸುತ್ತಾರೆ ಎಂಬ ಸಂಗತಿಗಳನ್ನು ನೋಡಲಾಗಿದೆ. ಮೊದಲೇ ಹೇಳಿದಂತೆ ದ್ವಿಭಾಷಾ ಪ್ರದೇಶದಲ್ಲಿ ಇರುವವರೆಲ್ಲರೂ ದ್ವಿಭಾಷಿಕರಾಗಿರುವುದಿಲ್ಲ. ಯಾರಿಗೆ ದ್ವಿಭಾಷಾ ಸಂದರ್ಭವೊಂದರಲ್ಲಿ ದ್ವಿಭಾಷಿಕರಾಗುವ ಅವಶ್ಯಕತೆ, ಅನಿವಾರ್ಯಗಳು ಉಂಟಾಗುತ್ತವೆಯೋ ಅವರು ಮಾತ್ರ ದ್ವಿಭಾಷಿಕರಾಗುತ್ತಾರೆ. ಇನ್ನುಳಿದಂತೆ ಏಕಭಾಷಿಕರು, ಅರೆದ್ವಿಭಾಷಿಕರು, ಬಹುಭಾಷಿಕರು ದ್ವಿಭಾಷಾ ಸಂದರ್ಭದಲ್ಲಿರುವುದು ಕಾಣಬಹುದಾಗಿದೆ. ದ್ವಿಭಾಷಾ ಸಂದರ್ಭಗಳಲ್ಲಿ ನೆಲೆಸಿರುವವರಲ್ಲಿ ಯಾರಿಗೆ ದ್ವಿಭಾಷಾ ಸಂದರ್ಭವೊಂದು ಕಷ್ಟವಾಗಬಹುದು. ಅದನ್ನು ಹೇಗೆ ನಿಭಾಯಿಸುತ್ತಾರೆ. ಸಾಮಾನ್ಯವಾಗಿ ಕಂಡುಬಂದಂತೆ ಏಕಭಾಷಿಕರಿಗೆ ದ್ವಿಭಾಷಾ ಸಂದರ್ಭಗಳು ಕಷ್ಟ ಇದ್ದಂತೆ ಕಾಣುತ್ತಿದೆ. ಅಂತಹ ಮುಖ್ಯವಾದ ಸಂದರ್ಭಗಳು ಕ್ಷೇತ್ರಕಾರ್ಯದಲ್ಲಿ ಕಂಡುಬಂದದ್ದು, 'ಶಿಕ್ಷಣ' ಆವರಣ. ಈ ಆವರಣದಲ್ಲೆ ಏಕೆ ದ್ವಿಭಾಷಾ ಸಂದರ್ಭವೊಂದು ಕಷ್ಟಕರವಾಗಿದೆ. ತೆಲುಗು ಭಾಷಿಕರು ಹೆಚ್ಚು ಹೆಚ್ಚು ಬರುತ್ತಿರುವ ಶಾಲೆಗಳಲ್ಲಿ ಕನ್ನಡ ಏಕಭಾಷೆಯನ್ನು ಬಲ್ಲ ಶಿಕ್ಷಕರು ಇಂತಹ ಸಂದರ್ಭಗಳಿಗೆ ಒಳಗಾಗಿರುವುದು ಕಂಡುಬಂದಿದೆ. ಹಾಗಾದರೆ ಇಂತಹ ಸಂದರ್ಭವನ್ನು ಹೇಗೆ ಶಿಕ್ಷಕರು ನಿರ್ವಹಿಸುತ್ತಾರೆ? ಹೆಚ್ಚು ತೆಲುಗಿನ ಸಾಮಾಜಿಕ ಸಂದರ್ಭಗಳಿಗೆ ಒಳಗಾದ

ತೆಲುಗು ಸ್ವಭಾಷಿಕ ಮಕ್ಕಳು ಶಿಕ್ಷಣದ ಸಂದರ್ಭಗಳಿಗೆ ಒಳಗಾದಾಗ ಅಂಥ ಮಕ್ಕಳಿಗೆ ಶಾಲೆಯಲ್ಲಿ ತರಗತಿಯ ಆವರಣವೊಂದನ್ನು ಬಿಟ್ಟರೆ ಬೇರೆಡೆಗಳಲ್ಲಿ ಕನ್ನಡವನ್ನು ಕಲಿತು ಬಳಸುವ ಅವಕಾಶಗಳೇ ಇರುವುದಿಲ್ಲ. ಇಂಥ ಸಂದರ್ಭಗಳಲ್ಲಿ ಆ ಮಕ್ಕಳಿಗೆ ಶಿಕ್ಷಕರ ಬಳಿ ಕನ್ನಡದಲ್ಲಿ ಸಂವಹನ ಕಷ್ಟವಾಗುತ್ತದೆ. ಹಾಗೆಯೆ ಏಕಭಾಷೆಯನ್ನು ಬಲ್ಲ ಕನ್ನಡದ ಶಿಕ್ಷಕನಿಗೆ ತೆಲುಗಿನ ಮಕ್ಕಳಿಗೆ ಪಠ್ಯವನ್ನು ಅರ್ಥೈಸುವ ನೆಲೆಗಳಲ್ಲಿ ಕಷ್ಟಕರವಾಗುತ್ತದೆ. ಇಂತಹ ಸಂದರ್ಭಗಳಲ್ಲಿ ಕನ್ನಡ - ತೆಲುಗು ಭಾಷೆಗಳನ್ನು ಬಲ್ಲವರಿಂದ ಸಹಾಯವನ್ನು ಪಡೆದು ದ್ವಿಭಾಷಾ ಸಂದರ್ಭವೊಂದನ್ನು ನಿರ್ವಹಿಸುತ್ತಾರೆ. ಅಂದರೆ ಕನ್ನಡ - ತೆಲುಗು ಭಾಷೆಗಳು ಚೆನ್ನಾಗಿ ಬಲ್ಲಂತಹ ಶಾಲೆಯ ಇತರ ಶಿಕ್ಷಕರೊಡನೆಯೂ, ವಿದ್ಯಾರ್ಥಿಗಳೊಂದಿಗೆಯೂ ಇನ್ನಿತರೆ ವ್ಯಕ್ತಿಗಳಿಂದ ಶಿಕ್ಷಕರೆ ತಕ್ಕಮಟ್ಟಿಗೆ ಸಂವಹನಗೊಳಿಸುವಷ್ಟು ತೆಲುಗು ಭಾಷೆಯನ್ನು ಕಲಿತಿರುವ ಸಂದರ್ಭಗಳು ತೋರಣಗಲ್‌ನಂತಹ ಸರ್ಕಾರಿ ಕನ್ನಡ ಮಾಧ್ಯಮಿಕ ಶಾಲೆಯ ಶಿಕ್ಷಕರಲ್ಲಿ ಕಂಡುಬಂದಿದೆ.

ಹಾಗೆಯೇ ಸಂಪೂರ್ಣವಾಗಿ ತೆಲುಗು ಏಕಭಾಷೆಯ ಸಂದರ್ಭಗಳಿಗೆ ಒಳಗಾದ ಮಗುವೊಂದು ಕನ್ನಡದ ಶೈಕ್ಷಣಿಕ ಸಂದರ್ಭವೊಂದನ್ನು ಪ್ರವೇಶಿಸಿದಾಗಲೂ ಸಹ ಶಿಕ್ಷಕರಿಗೆ ಉಂಟಾಗುವ ದ್ವಿಭಾಷಾ ಸಂದರ್ಭವೊಂದರ ಕಷ್ಟ, ಕಲಿಕೆಯ ಮೊದಲ ಹಂತಗಳಲ್ಲಿ ಉಂಟಾಗುತ್ತದೆ. ಇಂತಹ ಸಂದರ್ಭದಲ್ಲಿ ತೆಲುಗು ಭಾಷಿಕ ಮಗು ಕನ್ನಡದ ಇತರ ಮಕ್ಕಳೊಂದಿಗೆ ಬೆರೆಯುವುದರ ಮೂಲಕ, ಆಟದ ಗುಂಪುಗಳಲ್ಲಿ, ಪಾಠದ ಚರ್ಚೆಗಳಲ್ಲಿ ಕನ್ನಡದ ಮಕ್ಕಳೊಂದಿಗೆ ಸೇರುವುದರಿಂದ ಭಾಷಿಕ ಸಂದರ್ಭವನ್ನು ಎದುರಿಸುತ್ತಾರೆ. ಎಲ್ಲಿ ಸಂವಹನದ ಅವಧಿ ದೀರ್ಘವಾಗಿರುತ್ತದೆಯೋ ಅಲ್ಲಿ ದ್ವಿಭಾಷಾ ಸಂದರ್ಭವೊಂದನ್ನು ಏಕಭಾಷಿಕರು ಎದುರಿಸುವುದು ಸ್ವಲ್ಪಮಟ್ಟಿಗೆ ಕಷ್ಟಕರವಾಗಿರುತ್ತದೆ. ಎಲ್ಲಿ ಸಂವಹನದ ಅವಧಿ ಕಡಿಮೆ ಇರುತ್ತದೆಯೋ ಅಲ್ಲಿ ದ್ವಿಭಾಷಾ ಸಂದರ್ಭವೊದನ್ನು ನಿಭಾಯಿಸುವುದು ಏಕಭಾಷಿಕರಿಗೆ ಅಷ್ಟೊಂದು ಕಷ್ಟವೆನಿಸುವುದಿಲ್ಲ.

ಔಪಚಾರಿಕ ಆವರಣಗಳನ್ನು ಗಮನಿಸಿದರೆ ಸರ್ಕಾರಿ ಕಛೇರಿಗಳಲ್ಲಿ ಕೆಲಸ ಮಾಡುತ್ತಿರುವವರು ಏಕಭಾಷಿಕರಾಗಿದ್ದಾಗ, ತೆಲುಗು ಏಕಭಾಷಿಕನೊಬ್ಬ ಬಂದು ತೆಲುಗಿನಲ್ಲೆ ತನ್ನ ಕೆಲಸಕ್ಕೆ ಸಂಬಂಧಿಸಿದ ವಿವರಗಳನ್ನು ಕೇಳುವಾಗಿನ ಸಂದರ್ಭಗಳಲ್ಲಿ, ಬಸ್‌ನಿಲ್ದಾಣಗಳಲ್ಲಿನ 'ವಿಚಾರಣೆ' ವಿಭಾಗಗಳಲ್ಲಿ ಏಕಭಾಷಿಕ ಯಾವುದೋ ಊರಿಗೆ ಹೋಗುವ ಬಸ್ ಬಗೆಗೆ ವಿಚಾರಿಸುವ ಸಂದರ್ಭಗಳಲ್ಲಿ ಹೆಚ್ಚಿನ ಸಂವಹನದ ಅವಧಿ ದೀರ್ಘವಾಗಿ ಇರುವುದಿಲ್ಲವಾದ್ದರಿಂದ ಹೆಚ್ಚಿನ ಕಷ್ಟವೇನೂ ಭಾಷಿಕರ ನಡುವೆ ಉಂಟಾಗುವುದಿಲ್ಲ. ಆದರೂ ಎರಡೂ ಭಾಷೆಗಳನ್ನು ಬಲ್ಲವರೇ (ತರ್ಜುಮೆಗಾರರೇ) ಇಲ್ಲಿಯೂ ಈ ಸಂದರ್ಭವೊಂದನ್ನು ಪೂರೈಸುತ್ತಾರೆ. ಅಕ್ಕ - ಪಕ್ಕದಲ್ಲಿರುವ ತೆಲುಗು ಗೊತ್ತಿರುವ ಉದ್ಯೋಗಿಯೊಬ್ಬರು ಮಧ್ಯೆ ಪ್ರವೇಶಿಸಿ ತೆಲುಗಿನಲ್ಲಿಉತ್ತರ ಕೊಡಬಹುದು. ಬಸ್‌ಗಳಲ್ಲಿ ಪ್ರಯಾಣಿಸುವಾಗ ಅನ್ಯಭಾಷಿಕ ಪ್ರಯಾಣಿಕನೊಬ್ಬನ ಬಳಿ ಏಕಭಾಷಿಕ ನಿರ್ವಾಹಕನಿಗೆ ಒದಗುವ ದ್ವಿಭಾಷಿಕ ಸಂದರ್ಭದ ಕಷ್ಟವನ್ನು ಪಕ್ಕದಲ್ಲೆ ಕುಳಿತಿರುವ ಸಹ ಪ್ರಯಾಣಿಕನ ತರ್ಜುಮೆಯಿಂದಾಗಿ ಈ ಸಂದರ್ಭವೊಂದರ ಕಷ್ಟ ದೂರಸರಿಯಬಹುದು. ಬಹುಮಟ್ಟಿಗೆ ಇಂತಹ ಏಕಭಾಷಿಕ ಕನ್ನಡಿಗರು

ಲಿಂಗಾಯತ, ಕುರುಬ ಜಾತಿಗಳಲ್ಲಿ ಕಾಣುವಂತಿದ್ದು, ತೆಲುಗು ಏಕ ಭಾಷಿಕರು ಕೆಳವರ್ಗ, ಕೆಳಜಾತಿಗಳಲ್ಲಿನ ಮಹಿಳೆಯರು, ಸಾಮಾಜಿಕ ಸಂದರ್ಭಗಳಿಗೆ ಒಳಗಾದವರು ಔಪಚಾರಿಕ ಆವರಣಗಳಲ್ಲಿ ತೆಲುಗು ಭಾಷೆಯನ್ನ ಬಳಸುವುದರಿಂದ ಏಕಭಾಷಿಕ ಕನ್ನಡಿಗರಿಗೆ ದ್ವಿಭಾಷಾ ಸಂದರ್ಭವೊಂದು ಕಷ್ಟವೆನಿಸಬಹುದು.

ನ್ಯಾಯಾಂಗಗಳಲ್ಲಿ ಅಪರಾಧಿಯೊಬ್ಬ ತೆಲುಗು ಭಾಷಿಕನಾಗಿದ್ದು ತೆಲುಗಿನಲ್ಲೆ ಸಾಕ್ಷಿಹೇಳುವ ಪ್ರಸಂಗಗಳು ಬಂದಾಗ ಆ ನ್ಯಾಯಾಂಗದ ತರ್ಜುಮೆದಾರರೆ ನ್ಯಾಯಾಧೀಶರಿಗೆ ಕನ್ನಡಕ್ಕೆ ಅಥವಾ ಇಂಗ್ಲಿಶ್‌ಗೆ ತರ್ಜುಮೆ ಮಾಡುತ್ತಾರೆ. ಕೆಲವೊಂದು ಸಂದರ್ಭಗಳಲ್ಲಿ ನ್ಯಾಯಾಧೀಶರಿಗೆ ಎರಡೂ ಭಾಷೆಗಳು ಗೊತ್ತಿದ್ದರೆ ಭಾಷಾಂತರ ಮಾಡುವ ಅವಕಾಶಗಳು ಉಂಟಾದಂತೆ ಕಂಡಿಲ್ಲ. ಆಸ್ಪತ್ರೆ, ನರ್ಸಿಂಗ್ ಹೋಂ ಮುಂತಾದ ಕಡೆಗಳಲ್ಲಿ ಕೆಲಸ ಮಾಡುವ ಕನ್ನಡ ಏಕಭಾಷಿಕ ಮಹಿಳೆಯರಿಗೆ ತೆಲುಗು ಏಕಭಾಷಿಕರೊಬ್ಬರು ಡಾಕ್ಟರ್ ಬಗೆಗೋ, ರೋಗಿಯೊಬ್ಬರ ಬಗೆಗೋ ವಿಚಾರಿಸುವ ಸನ್ನಿವೇಶಗಳಲ್ಲಿ ತೆಲುಗು ಗೊತ್ತಿರುವ ಇನ್ನೊಬ್ಬರ ಬಳಿ ಅವರಿಗೆ ಉತ್ತರ ಕೊಡಬಹುದು. ಇಲ್ಲವೆ ಅವರು ತೆಲುಗಿನಲ್ಲೆ ಮಾತನಾಡುತ್ತಿದ್ದರೆ, ಇವರು ಉತ್ತರವನ್ನು ಕನ್ನಡದಲ್ಲೆ ಕೊಡುತ್ತಿರಬಹುದು. ಇಂಥ ಅರೆದ್ವಿಭಾಷಿಕತೆ ಸನ್ನಿವೇಶಗಳಿರುವುದು ಹಲವು ಕಡೆಗಳಲ್ಲಿ ಕಾಣುತ್ತಿವೆ. ತೆಲುಗು ಏಕಭಾಷಿಕರು ಮಹಿಳೆಯರಲ್ಲೇ ಹೆಚ್ಚಾಗಿ ಕಾಣುತ್ತಿರುವುದರಿಂದ ಅದರಲ್ಲೂ ಮೊದಲ, ಎರಡನೇ ತಲೆಮಾರಿನಲ್ಲಿರುವ ತೆಲುಗು ಏಕಭಾಷಿಕರಿಗೆ ಕನ್ನಡದ ಭಾಷಿಕ ಸಂದರ್ಭಗಳು ಎದುರಾದಾಗ ಆಂಗಿಕ ಭಾಷೆಯೊಂದರ ಮೂಲಕ ಸಂದರ್ಭವೊಂದನ್ನು ನಿರ್ವಹಿಸುತ್ತಾರೆ. ಇಲ್ಲಿಯೂ ಸಹ ಕನ್ನಡವನ್ನು ಅವರು ಗ್ರಹಿಸುತ್ತಿರುತ್ತಾರೆ. ಆದರೆ ಮಾತನಾಡುವ ಸಾಮರ್ಥ್ಯಗಳು ಇರುವುದಿಲ್ಲ. ಇಂತಹ ಸಂದರ್ಭಗಳಲ್ಲಿ ವ್ಯಾಪಾರದ ಸಂದರ್ಭವೊಂದು ಎದುರಾಗದ ಸ್ವಲ್ಪ ಗೊಂದಲಗಳಿಗೆ ಒಳಗಾಗಬಹುದು. ವ್ಯಾಪಾರದ ಸಂದರ್ಭಗಳಲ್ಲಿ ಚೌಕಾಸಿ ಮಾಡುವಾಗ, ವಸ್ತುಗಳನ್ನು ಕೊಳ್ಳುವಾಗ ಭಾಷಿಕರ ಮಧ್ಯೆ ನಡೆಯುವ ಸಂವಹನವು ಸರಿಯಾಗಿ ಅರ್ಥವಾಗದೆ ವ್ಯಾಪಾರಿಗೆ ಕೊಡುವ ಹಣದಲ್ಲಿ ಹೆಚ್ಚು - ಕಡಿಮೆಯಾದಾಗ ಜಗಳಗಳುಂಟಾದ ಸಂದರ್ಭಗಳನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಾಣಲಾಗಿದೆ. ಇಂತಹ ಸಮಯದಲ್ಲಿ ಕನ್ನಡ - ತೆಲುಗು ಎರಡೂ ಭಾಷೆಗಳನ್ನು ಬಲ್ಲವರು ಜಗಳದ ಮಧ್ಯೆ ಹೋಗಿ ಸಂದರ್ಭಕ್ಕೆ ಕಾರಣವಾದ ಗೊಂದಲವೊಂದನ್ನು ಪರಿಹರಿಸಬೇಕಾಯಿತು. ಇಂತಹ ಹಲವು ಸಂದರ್ಭಗಳು ದ್ವಿಭಾಷಾ ಸಂದರ್ಭವೊಂದರಲ್ಲಿ ಏಕಭಾಷಿಕರ ನಡುವೆ ಉಂಟಾಗಿರುತ್ತದೆ.

ಎರಡನೆಯ ಭಾಷೆಯನ್ನು ಕಲಿಯುವಲ್ಲಿ ಸಾಮಾಜಿಕ, ಆರ್ಥಿಕ, ಮನಶಾಸ್ತ್ರೀಯ ಅಂಶಗಳು ಮತ್ತು ಸಾಂಸ್ಕೃತಿಕ ಅಂಶಗಳು ಕಲಿಕೆಯನ್ನು ಪ್ರಭಾವಿಸುತ್ತವೆ. ಸಾಮಾಜಿಕ ಮತ್ತು ಆರ್ಥಿಕ ಅಂಶಗಳು ಮುಖ್ಯವಾದ ಭಿನ್ನಾಂಶಗಳಾಗಿರುವುದನ್ನು ಹಲವು ಅಧ್ಯಯನಗಳ ವಲಸಿಗ ಅಲ್ಪಸಂಖ್ಯಾತರ ಬಗೆಗಿನ ಸಂಶೋಧನೆಯಲ್ಲಿ ತಿಳಿದುಬರುತ್ತವೆ. ಎರಡು ಭಾಷೆಗಳನ್ನು ಸಮವಾಗಿ ಕಲಿಯುವಾಗ ಒಂದು ಭಾಷೆಗೆ ಇರುವ ಅವಕಾಶ, ಸಫಲತೆಯಿಂದ ಉನ್ನತ - ಪ್ರಧಾನ ಸ್ಥಾನವನ್ನು ಪಡೆಯುತ್ತಿದ್ದರೆ ಮತ್ತೊಂದು ಮಿತವಾದ ಸಮಾಜೋಭಾಷಿಕ ಕಾರ್ಯಗಳಿಂದಾಗಿ

ಬಳಕೆಯ ಪ್ರಮಾಣ ಕಡಿಮೆಯಿರುತ್ತದೆ. ಆದ್ದರಿಂದ ದ್ವಿಭಾಷಾ ಸಂದರ್ಭವೊಂದರಲ್ಲಿ ದ್ವಿಭಾಷಿಕರು, ಬಹುಭಾಷಿಕರು, ಏಕಭಾಷಿಕರು, ಅರೆದ್ವಿಭಾಷಿಕರು ಇವರೆಲ್ಲರೂ ಕಲಿಕೆ - ಬಳಕೆಗಳು ನಿರ್ವಹಿಸುವ ನೆಲೆಯಲ್ಲಿ ಭಿನ್ನವಾಗಿರುತ್ತವೆ. ಜೊತೆಗೆ ಸಮಾಜೋಭಾಷಿಕ ಅಂಶಗಳು ಹೆಚ್ಚಿಗೆ ಕಲಿಕೆ - ಬಳಕೆಯನ್ನು ಪ್ರಭಾವಿಸುತ್ತಿರುತ್ತವೆ. ಅಲ್ಲದೆ ಪ್ರಸ್ತುತ ಸಮಾಜದಲ್ಲಿನ ವಿದ್ಯಮಾನಗಳಿಂದಾಗಿ ಎರಡು ಭಾಷೆಗಳ ಕಲಿಕೆ - ಬಳಕೆಯ ಕಾತುರ ವಲಯಗಳು ಹಿಗ್ಗುತ್ತಾ - ಕುಗ್ಗುತ್ತಾ ಇರುತ್ತವೆ. ಮನೆಭಾಷೆಯೇ ಸ್ಥಾನಪಲ್ಲಟಕ್ಕೆ ಒಳಗಾಗುತ್ತಿರುತ್ತದೆ. ಕಲಿಕೆ ಮತ್ತು ಬಳಕೆಯ ನೆಲೆಗಳಲ್ಲಿ ಭಾಷಿಕರು ಒಂದು ರೀತಿಯ ತಾಂತ್ರಿಕತೆ ಪ್ರದರ್ಶಿಸುತ್ತಿರುತ್ತಾರೆ. ವ್ಯಕ್ತಿ ಸಮಾಜದಲ್ಲಿ ಭಾಷೆಯನ್ನು ಪಡೆಯುವ ಕ್ರಿಯೆ ವ್ಯಕ್ತಿಯ ಜೀವನಪೂರ್ತಿ ನಡೆಯುತ್ತದೆ. ಆದ್ದರಿಂದ ಕಲಿತ ಭಾಷೆಯನ್ನು ಸಂದರ್ಭಕ್ಕೆ ತಕ್ಕಂತೆ, ಬೇಕಾದ ಶೈಲಿಯಲ್ಲಿ ಬಳಸುವ ತಂತ್ರಗಳನ್ನು ಆತ / ಆಕೆ ಪಡೆದಿರುತ್ತಾರೆ.



ಅಧ್ಯಾಯ : ಏಳು

# ಶಿಕ್ಷಣದಲ್ಲಿ ದ್ವಿಭಾಷಿಕತೆಯ ಪರಿಣಾಮಗಳು

(ಕನ್ನಡ - ತೆಲುಗು - ಇಂಗ್ಲಿಶ್ ಮಾಧ್ಯಮಗಳಲ್ಲಿ ಓದುತ್ತಿರುವ ತೆಲುಗು - ಕನ್ನಡ ದ್ವಿಭಾಷಿಕ ಮಕ್ಕಳನ್ನು ಆಧರಿಸಿ)

೧. ಕನ್ನಡದ ಸಾಮಾಜಿಕ ಸಂದರ್ಭಗಳಿಗೆ ಒಳಗಾದ ತೆಲುಗು ಭಾಷಿಕ ಮಕ್ಕಳಲ್ಲಿ

೨. ತೆಲುಗಿನ ಸಾಮಾಜಿಕ ಸಂದರ್ಭಗಳಿಗೆ ಒಳಗಾದ ತೆಲುಗು ಭಾಷಿಕ ಮಕ್ಕಳಲ್ಲಿ

೩. ಕನ್ನಡ ಮತ್ತು ತೆಲುಗು ಎರಡೂ ಭಾಷಿಕ ಸಂದರ್ಭಗಳಿಗೆ ಒಳಗಾದ ಮಕ್ಕಳಲ್ಲಿ

## ಅಧ್ಯಾಯ : ಏಳು

# ಶಿಕ್ಷಣದಲ್ಲಿ ದ್ವಿಭಾಷಿಕತೆಯ ಪರಿಣಾಮಗಳು

ಭಾರತದಲ್ಲಿ ದ್ವಿಬಹುಭಾಷಿಕತೆಯು ಸಹಜವಾದ ಪ್ರಕ್ರಿಯೆ. ಭಾರತದ ದ್ವಿ-ಬಹುಭಾಷಾ ಸನ್ನಿವೇಶಗಳಲ್ಲಿ ಮುಖ್ಯವಾಗಿ ದ್ವಿಭಾಷಿಕತೆ ಎರಡು ವಿಧಗಳಲ್ಲಿ ಉಂಟಾಗುತ್ತದೆ. ಒಂದು ಸಾಮಾಜೀಕರಣದಿಂದ, ಮತ್ತೊಂದು ಶಿಕ್ಷಣದಿಂದ. ಇವೆರಡೂ ನೆಲೆಗಳಲ್ಲಿಉಂಟಾಗುವ ದ್ವಿಭಾಷಿಕತೆಯ ಸ್ವರೂಪ ಭಿನ್ನವಾದದ್ದು. ಶಿಕ್ಷಣದಿಂದುಂಟಾಗುವ ದ್ವಿಭಾಷಿಕತೆಯಲ್ಲಿ ಸಾಕ್ಷರತೆಯ ಕೌಶಲಗಳು ಹೆಚ್ಚು ಶಕ್ತಿಶಾಲಿಯಾಗಿರುತ್ತವೆ. ಸಾಮಾಜೀಕರಣದಿಂದ ಉಂಟಾಗುವ ದ್ವಿಭಾಷಿಕತೆಯಲ್ಲಿ ಮೌಖಿಕ ಕೌಶಲಗಳು ಹೆಚ್ಚಿನ ಪ್ರಮಾಣದಲ್ಲಿ ಇರುತ್ತವೆ. ಭಾರತದಲ್ಲಿ ಹೆಚ್ಚಾಗಿ ಸಾಮಾಜೀಕರಣದಿಂದಲೇ ದ್ವಿ-ಬಹುಭಾಷಿಕತೆಯ ಸಂದರ್ಭಗಳು ಉಂಟಾಗಿವೆ. ಹೀಗೆ ಉಂಟಾಗುವ ದ್ವಿಭಾಷಿಕತೆಯಲ್ಲಿ ವ್ಯಕ್ತಿಗತ ನೆಲೆಯಲ್ಲಿ ಮತ್ತು ಸಾಮುದಾಯಿಕ ನೆಲೆಯಲ್ಲಿನ ದ್ವಿಭಾಷಿಕತೆಯ ನೆಲೆಗಳ ಸ್ವರೂಪ ಮತ್ತು ಪರಿಣಾಮಗಳು ಭಿನ್ನವಾಗಿರುವಂತಿದೆ. ಕಳೆದ ಕೆಲವು ದಶಕಗಳಲ್ಲಿ ಭಾಷಾಶಾಸ್ತ್ರಜ್ಞರು , ಮನಶ್ಶಾಸ್ತ್ರಜ್ಞರು, ಸಮಾಜಶಾಸ್ತ್ರಜ್ಞರು ಮತ್ತು ಶಿಕ್ಷಣ ತಜ್ಞರಲ್ಲಿ ದ್ವಿಭಾಷಿಕತೆಯ ಪರಿಣಾಮಗಳನ್ನು ಕುರಿತಂತೆ ಇರುವ ಅಭಿಪ್ರಾಯಗಳು ಭಿನ್ನವಾಗಿವೆ.

ದ್ವಿಭಾಷಿಕತೆಯ ಅತ್ಯಂತ ಸಂವೇದನಾಶೀಲ ನೆಲೆ ಶಿಕ್ಷಣಕ್ಕೆ ಸಂಬಂಧಿಸಿದ್ದು. ಶೈಕ್ಷಣಿಕ ಸನ್ನಿವೇಶಗಳಲ್ಲಿ ಶೈಕ್ಷಣಿಕ ಸಾಧನೆ, ಪ್ರಗತಿಗಳಿಗೆ ದ್ವಿಭಾಷಿಕತೆಯಿಂದ ಅಡ್ಡಿಯಾಗುವುದೆಂಬ ಸಾಮಾನ್ಯ ತಿಳುವಳಿಕೆಯೊಂದಿದೆ. ಶೈಕ್ಷಣಿಕ ಸಾಧನೆಯಲ್ಲಿ ದ್ವಿಭಾಷಿಕ ಮಕ್ಕಳು ಏಕಭಾಷಿಕ ಮಕ್ಕಳಿಗಿಂತ ವಿಭಿನ್ನವಾಗಿರುತ್ತಾರೆಂದು ಕೆಲವು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಕೆಲವು ಅಧ್ಯಯನಗಳು ದ್ವಿಭಾಷಿಕತೆ ಶೈಕ್ಷಣಿಕ ಸಾಧನೆಯ ಮೇಲೆ ಬೀರುವ ಪರಿಣಾಮ ನಕಾರಾತ್ಮಕ ಎಂದರೆ ಇನ್ನು ಕೆಲವರು ಸಕಾರಾತ್ಮಕವಾಗಿದೆ ಎಂದಿದ್ದಾರೆ. ಭಾರತದಲ್ಲಿ ಈ ಕುರಿತಂತೆ ಕೆಲವೇ ಕೆಲವು ಅಧ್ಯಯನಗಳಾಗಿವೆ. ಮಾತೃಭಾಷಾ ಶಿಕ್ಷಣವೇ ಪ್ರತಿಯೊಂದು ಮಗುವಿನ ಶೈಕ್ಷಣಿಕ ಸಾಧನೆ - ಪ್ರಗತಿಯಲ್ಲಿ

ಉತ್ತಮವಾದದ್ದು ಎನ್ನುವುದನ್ನು ಗಾಂಧೀಜಿಯವರನ್ನು (1979) ಒಳಗೊಂಡಂತೆ ಅಸುಬೆಲ್ (1968), ಯುನೆಸ್ಕೋ ವರದಿ (1953), ಶಿಕ್ಷಣ ಆಯೋಗ (1964-66) ಇವರೆಲ್ಲರೂ ಸಹ ಸಮರ್ಥಿಸುತ್ತಾರೆ. ಇದರ ಸಲುವಾಗಿಯೇ ತ್ರಿಭಾಷಾ ಶಿಕ್ಷಣ ಯೋಜನೆಯನ್ನು ಶಿಕ್ಷಣ ಆಯೋಗವು ಜಾರಿಗೆ ತಂದದ್ದು. ಇಲ್ಲಿ ಮಾತೃಭಾಷೆ ಎನ್ನುವುದನ್ನು ಶಾಲೆಯಲ್ಲಿ ಕಲಿಸುವಾಗ ಬಹಳ ವಿಶಾಲವಾದ ಅರ್ಥದಲ್ಲಿ ಬಳಸಲಾಗಿದೆ. ಆದರೆ ಮಾತೃಭಾಷಾ ಶಿಕ್ಷಣ ಮಾಧ್ಯಮ ಮೇಲ್‌ನೋಟಕ್ಕೆ ಒಂದೇ ಎಂದು ತೋರಿದರೂ ಅದು ಒಂದೇ ಅಲ್ಲ. ಒಂದಕ್ಕಿಂತ ಹೆಚ್ಚು ಭಾಷೆಗಳನ್ನು ಕಲಿಯುವ ಅವಕಾಶಗಳು, ಒತ್ತಡಗಳು ಹೆಚ್ಚಾಗುತ್ತಿರುವ ಸಂದರ್ಭಗಳಲ್ಲಿ ದ್ವಿಭಾಷಿಕತೆಯ ಶಿಕ್ಷಣದ ಮೇಲೆ ಹೆಚ್ಚು ಒತ್ತು ಇರುವುದರಿಂದ ದ್ವಿಭಾಷಿಕತೆಯ ಶಿಕ್ಷಣವನ್ನು ಕುರಿತಂತೆ ಹಲವು ಅಧ್ಯಯನಗಳು ನಡೆಯಲಾರಂಭಿಸಿದವು. ಅದರಲ್ಲೂ ವಲಸಿಗ ಭಾಷಾ ಅಲ್ಪಸಂಖ್ಯಾತರ ಮಕ್ಕಳಲ್ಲಿ ದ್ವಿಭಾಷಿಕತೆಯಿಂದ ಶೈಕ್ಷಣಿಕ ಸಾಧನೆ, ಪ್ರಗತಿಯಲ್ಲಿ ಆಗುವ ಅಡೆ ತಡೆಗಳನ್ನು ಕುರಿತಂತೆ ಹಲವು ಅಧ್ಯಯನಗಳಾದವು. ಜೊತೆಗೆ ಬುಡಕಟ್ಟು ಜನಾಂಗಗಳಲ್ಲಿ ಆಗುತ್ತಿರುವ ಬದಲಾವಣೆಗಳನ್ನು ಶೈಕ್ಷಣಿಕ ಸನ್ನಿವೇಶಗಳಲ್ಲೂ ಕುರಿತಂತೆ ಅಧ್ಯಯನ ಮಾಡುವುದರ ಮೂಲಕ ಹಲವು ರೀತಿಯ ಪರಿಣಾಮಗಳನ್ನು ಗುರುತಿಸಲಾಗಿದೆ.

ಮನೆಭಾಷೆಯ ಶಿಕ್ಷಣದಿಂದಾಗಿ ಶೈಕ್ಷಣಿಕ ಸಾಧನೆಯಲ್ಲಿ ಮಕ್ಕಳು ಉತ್ತಮ ಪ್ರಗತಿಯನ್ನು ಸಾಧಿಸುತ್ತಾರೆನ್ನುವ ಅಧ್ಯಯನಗಳಲ್ಲಿ ಆನಂದ್ (1971) ರವರು "ಭಾಷೆಯಲ್ಲಿ ಕನ್ನಡ ಮಕ್ಕಳು ಮುಂದಿದ್ದರೆ, ಭಾಷೇತರ ವಿಷಯಗಳಲ್ಲಿ ಇಂಗ್ಲಿಶ್ ಮಾಧ್ಯಮದ ಮಕ್ಕಳು ಮುಂದಿದ್ದಾರೆ. ಒಟ್ಟಾರೆ ಶೈಕ್ಷಣಿಕ ಸಾಧನೆಯಲ್ಲಿಯೂ ಕನ್ನಡದ ಮಕ್ಕಳಿಗಿಂತ ಇಂಗ್ಲಿಶ್ ಮಾಧ್ಯಮದಲ್ಲಿನ ಮಕ್ಕಳ ಸಾಧನೆ ಉತ್ತಮವಾಗಿದೆ" ಎಂದಿದ್ದರೆ, ತೊವ್ ಸ್ಕೂಟನಬ್ ಕಾಂಗಸ್ (1976) ರವರು 'ಮಾತೃಭಾಷೆಯ ಶಿಕ್ಷಣ ಮಾಧ್ಯಮವಾಗಿದ್ದಾಗ ಮಾತ್ರ ದ್ವಿತೀಯ ಭಾಷೆಯನ್ನು ಚೆನ್ನಾಗಿ ಮಕ್ಕಳು ಕಲಿಯುತ್ತಾರೆ. ಎರಡನೇ ಭಾಷೆಯನ್ನು ಒತ್ತಾಯವಾಗಿ ಹೇರಲಾಗಿರುವ ಕಡೆಗಳಲ್ಲಿ ಅರೆ ದ್ವಿಭಾಷಿಕತೆ ಉಂಟಾಗಿದೆ' ಎಂದಿದ್ದಾರೆ. ಹೀಲೆ (1975) ಯವರು 'ಮಾತೃಭಾಷೆಯ ಮೂಲಕ ಕಲಿಯುವ ವಿದ್ಯಾರ್ಥಿಗಳು ನೇರವಾಗಿ ಕಲಿಯುವುದರಿಂದ ದ್ವಿಭಾಷಿಕ ಮಕ್ಕಳ ಸಾಧನೆಗಿಂತ ಉತ್ತಮವಾಗಿರುತ್ತದೆ' ಎಂಬ ಅಂಶಗಳನ್ನು ಮನೆಭಾಷೆಯ ಶಿಕ್ಷಣವನ್ನು ಕುರಿತಂತೆ ಇವರ ಅಧ್ಯಯನಗಳು ಸಮರ್ಥಿಸುತ್ತವೆ. ಇನ್ನು ದ್ವಿಭಾಷಿಕ ಮಕ್ಕಳಲ್ಲಿ ಶಿಕ್ಷಣದ ಸಾಧನೆಯನ್ನು ಕುರಿತಂತೆ ನಡೆದ ಅಧ್ಯಯನಗಳಲ್ಲಿ ಕುಮ್ಮಿನ್ಸ್ (1976), ಶ್ರೀವಾಸ್ತವ (1976) ಇವರುಗಳ ಅಧ್ಯಯನಗಳಲ್ಲಿ ಈ ದ್ವಿಭಾಷಿಕ ಶಿಕ್ಷಣದ ಕಾರ್ಯಕ್ರಮ ಎರಡು ರೀತಿಯಲ್ಲಿ ನಡೆದಿದೆ. ಸಂಪೂರ್ಣವಾದ ಮತ್ತು ಆಂಶಿಕವಾದ ಇಮ್ಮರ್‌ಶನ್ ಕಾರ್ಯಕ್ರಮಗಳು, ಸಂಪೂರ್ಣವಾದ ಇಮ್ಮರ್‌ಶನ್‌ನಲ್ಲಿ ಬಹಳ ಮುಂಚಿನಿಂದಲೇ ಎಲ್ಲಾ ವಿಷಯಗಳ ಕಲಿಕೆಯೂ ದ್ವಿತೀಯ ಭಾಷೆಯೇ ಆಗಿರುತ್ತದೆ. ಆಂಶಿಕ ಇಮ್ಮರ್‌ಶನ್‌ನಲ್ಲಿ ಶಿಕ್ಷಣ ಮಾಧ್ಯಮ ಪ್ರಥಮ ಮತ್ತು ದ್ವಿತೀಯ ಭಾಷೆಗಳಲ್ಲಿ ಸಮಾನವಾಗಿ ಹಂಚಲ್ಪಟ್ಟಿರುತ್ತದೆ. ಎರಡನೇ ವಿಧಾನ ಶಿಕ್ಷಣ ಮಾಧ್ಯಮವು ಮೊದಲಿಗೆ ಮಗುವಿನ

ಪ್ರಥಮ ಭಾಷೆಯಾಗಿದ್ದು ನಂತರ ದ್ವಿತೀಯ ಮತ್ತು ತೃತೀಯ ಭಾಷೆಗಳನ್ನು ಕಲಿಸಲಾಗುತ್ತದೆ. ಭಾರತದಲ್ಲಿ ಇಂಗ್ಲಿಶ್ ಮಾಧ್ಯಮದ ಶಾಲೆಗಳು ಮೊದಲನೇ ವಿಧಾನವನ್ನು ಅನುಸರಿಸಿದರೆ, ಪ್ರಥಮ ಭಾಷೆ ಮಾಧ್ಯಮದ ಶಾಲೆಗಳು ಎರಡನೇ ವಿಧಾನವನ್ನು ಅನುಸರಿಸುತ್ತಿವೆ. ಬೆನ್‌ಝುವ್ (1976) ರವರು "ದ್ವಿಭಾಷಿಕತೆಯು ಬಹಳ ಉನ್ನತ ಮಟ್ಟದ ಗ್ರಹಿಕಾ ಸಂಘರ್ಷವನ್ನು ಹೊಂದಿರುವುದರಿಂದ ಭಾಷಾ ಕಲಿಕೆಯು ಶೀಘ್ರಗತಿಯಲ್ಲಿ ಸಾಗುತ್ತದೆ. ದ್ವಿಭಾಷಿಕರು ಸಾಧನೆಯಲ್ಲಿ, ವಿಶ್ಲೇಷಣಾ ಸಾಮರ್ಥ್ಯದಲ್ಲಿ ವ್ಯವಸ್ಥೆಯಲ್ಲಿ ಮುಂದುವರೆದಿರುವುದನ್ನು" ತೋರಿಸಿದ್ದಾರೆ. ಶ್ರೀವಾಸ್ತವ (1976) ಅವರು ದ್ವಿಭಾಷಿಕ ಮತ್ತು ಏಕಭಾಷಿಕ ಮಕ್ಕಳನ್ನು ಹೋಲಿಸಿ ಅಧ್ಯಯನ ಮಾಡಿದ್ದಾರೆ. ಮತ್ತು ಬ್ರಿಕ್ ಮತ್ತು ಸ್ವೀನ್ (1975, 1976 a.b.) ಮತ್ತು ಲ್ಯಾಂಬರ್ ಮತ್ತು ಟಕ್ಕರ್ (1972) ಇವರುಗಳ ಅಧ್ಯಯನಗಳಲ್ಲಿ ಸಂಪೂರ್ಣ ಮತ್ತು ಆಂಶಿಕ ಇಮ್ಮರ್‌ಶನ್ ಕಾರ್ಯಕ್ರಮಗಳಿಂದಾಗಿ ಗ್ರಹಿಕೆಯ ಕೌಶಲಗಳು, ಶೈಕ್ಷಣಿಕ ಸಾಧನೆಗಳು ದ್ವಿಭಾಷಿಕತೆಯಿಂದಾಗಿ ಸೃಜನಾತ್ಮಕ ಮತ್ತು ವಿಭಿನ್ನ ಯೋಚನಾ ಸಾಮರ್ಥ್ಯ ಬೆಳೆಯುತ್ತದೆ. ಏಕಭಾಷಿಕ ಮಕ್ಕಳು ದ್ವಿಭಾಷಿಕ ಮಕ್ಕಳಿಗಿಂತ ಬೌದ್ಧಿಕ ಅಭಿವೃದ್ಧಿ ಹೊಂದಿದ್ದಾರೆ ಎಂಬುದನ್ನು ಗುರುತಿಸಿದ್ದಾರೆ. ಇನ್ನು ಕೆಲವು ಅಧ್ಯಯನಗಳಲ್ಲಿ ಕೆಲವು ಸಮಸ್ಯೆಯನ್ನು ಕುರಿತಂತೆ ಡೇವ್ (1971), ಮಕೊನ್‌ಮಾರ (1966), ಮತ್ತು ರೆಡ್ಡಿ (1977) ಇವರುಗಳು ಮಕ್ಕಳಿಗೆ ಅವರ ಭಾಷೆಯಲ್ಲದ ಭಾಷೆಯನ್ನು ಶಿಕ್ಷಣ ಮಾಧ್ಯಮವಾಗಿ ಬಳಸಿದಾಗ ಮಗುವಿನ ಸಾಮರ್ಥ್ಯ ಮತ್ತು ಗ್ರಹಿಕೆಯ ಮೇಲೆ ಪರಿಣಾಮ ಬೀರಿದೆ. ಅಥವಾ ಯಾವುದೇ ಕೆಟ್ಟ ಪರಿಣಾಮ ಬೀರಿಲ್ಲ ಎಂದು ಕಂಡುಬರುತ್ತದೆ. ಎ.ಕೆ.ಶ್ರೀವಾಸ್ತವ ಮತ್ತು ರಜಿಯಾ ಖಾತೂನ್ ಅವರು ಮಾಡಿರುವ (1980) ಅಧ್ಯಯನದಲ್ಲಿ ವಿಭಿನ್ನವಾದ ಅಧ್ಯಯನದ ವಿಧಿವಿಧಾನಗಳ ಮೂಲಕ "8 ನೇ ತರಗತಿಯ ಮಕ್ಕಳಲ್ಲಿ ಸೃಜನಶೀಲತೆ ಮತ್ತು ಮಾನಸಿಕ ಸಾಮರ್ಥ್ಯದ ಮೇಲೆ ಮಾತೃಭಾಷೆ ಮತ್ತು ಮತ್ತೊಂದು ಭಾಷೆಯನ್ನು ಭಾಷಾ ಮಾಧ್ಯಮವಾಗಿ ಬಳಸುವುದರ ನಡುವಿನ ವ್ಯತ್ಯಾಸದ ಪರಿಣಾಮ"ಗಳನ್ನು ಹಲವು ನೆಲೆಗಳಲ್ಲಿ ಗುರುತಿಸಲಾಗಿದೆ. ಇದಕ್ಕೆ ಪೂರಕವಾಗಿರುವ ಹಲವಾರು ಅಂಶಗಳನ್ನು ಅಧ್ಯಯನದಲ್ಲಿ ಕಾಣಲಾಗಿದೆ. ಇದು ತುಂಬಾ ಆಳವಾದ ಅಧ್ಯಯನವಾಗಿದ್ದು ಹಲವಾರು ಅಂಶಗಳು ದ್ವಿಭಾಷಿಕತೆಯ ಶಿಕ್ಷಣದಲ್ಲಿ ಕಾರಣವಾಗುವುದನ್ನು ಪ್ರಸ್ತುತಪಡಿಸಿದ್ದಾರೆ. ಭಾಷಾ ಅಲ್ಪಸಂಖ್ಯಾತರ ಮಕ್ಕಳಲ್ಲಿ ದ್ವಿಭಾಷಿಕತೆಯೊಂದೆ ಶೈಕ್ಷಣಿಕ ಪ್ರಗತಿಗೆ ಸಾಧನೆಗೆ ಅಡ್ಡಿಯುಂಟು ಮಾಡುವುದಿಲ್ಲವೆಂದು ಇನ್ನು ಹಲವಾರು ಅಂಶಗಳು ಇದಕ್ಕೆ ಕಾರಣವಾಗಿರುವುದನ್ನು ಅಲ್ಪಸಂಖ್ಯಾತ ವಲಸಿಗರ ಬಗೆಗೆ ನಡೆದ ಹಲವು ಅಧ್ಯಯಗಳೂ ಸಹ ವಿಭಿನ್ನ ರೀತಿಯ ಕಾರಣಗಳನ್ನು ಹೊರಗೆಳೆದಿವೆ. ಚಿಕ್ಕರಮನೆ (1971) ಅವರು ಮಹಾರಾಷ್ಟ್ರ - ಮೈಸೂರು ಗಡಿಯಲ್ಲಿರುವ ದ್ವಿಭಾಷಿಕ ಪ್ರದೇಶದ ವಿದ್ಯಾರ್ಥಿಗಳು ತಮ್ಮ ಮನೆಮಾತಾದ ಭಾಷೆಯಲ್ಲಿ ಶಿಕ್ಷಣವನ್ನು ಪಡೆಯುತ್ತಿರುವ ಸಮಸ್ಯೆಗಳ ಬಗೆಗಿನ ಅಧ್ಯಯನದಲ್ಲಿ ಕನ್ನಡ - ಕೊಂಕಣಿ - ಮರಾಠಿ ಮಕ್ಕಳಲ್ಲಿ ದ್ವಿಭಾಷಿಕತೆಯನ್ನು 3 ವಿಧದಲ್ಲಿ ವಿಂಗಡಿಸಿಕೊಂಡಿದ್ದಾರೆ.

ಅ. ಮಗು ಮನೆಯಲ್ಲಿ ಶಾಲೆಯಲ್ಲಿ ಮತ್ತು ಸಾಮಾಜಿಕ ಪರಿಸರದಲ್ಲಿ ಎರಡೂ ಭಾಷೆಯನ್ನು ಬಳಸುವುದು

ಬ. ಮನೆಯಲ್ಲಿ ಒಂದು ಭಾಷೆ, ಸಾಮಾಜಿಕ ಪರಿಸರದಲ್ಲಿ ಮತ್ತು ಶಾಲೆಯಲ್ಲಿ ಬೇರೆ ಭಾಷೆ

ಕ. ಮನೆ ಭಾಷೆ ಮತ್ತು ಸಾಮಾಜಿಕ ಪರಿಸರದ ಭಾಷೆ ಒಂದು, ಶಾಲೆಯಲ್ಲಿ ಬೇರೆ ಭಾಷೆ

ಅ. ಈ ಮಾದರಿಯ ದ್ವಿಭಾಷಿಕತೆಯಲ್ಲಿ ಭಾಷೆಯ ಆಧಾರದ ಮೇಲೆ ವಿಂಗಡಿಸಿದರೆ ಮಕ್ಕಳ ಸಾಧನೆಯಲ್ಲಿ ಯಾವುದೇ ಮಹತ್ವದ ವ್ಯತ್ಯಾಸ ಇಲ್ಲ. ಆದ್ದರಿಂದ ಈ ಮಕ್ಕಳಿಗೆ ದ್ವಿಭಾಷಿಕತೆಯು ಒಂದು ವಿಕಲತೆಯಲ್ಲ.

ಬ. ಶೈಕ್ಷಣಿಕವಾಗಿ ಕೆಟ್ಟ ಪರಿಣಾಮವನ್ನುಂಟುಮಾಡಲ್ಲ.

ಕ. ಶೈಕ್ಷಣಿಕ ಸಾಧನೆಯ ಮೇಲೆ ಪರಿಣಾಮ ಬೀರುತ್ತೆ. ಕೊಂಕಣಿ - ಮರಾಠಿ, ಕನ್ನಡ - ಮರಾಠಿ ಗುಂಪುಗಳನ್ನು ಗಮನಿಸಿದರೆ ಪ್ರಾಥಮಿಕ ಹಂತದಲ್ಲಿರುವ ಕೆಲವು ವ್ಯತ್ಯಾಸಗಳು ಹೈಸ್ಕೂಲ್ ಹಂತದಲ್ಲಿ ಇಲ್ಲ. ಶಾಲೆಯ ಭಾಷೆ ಪರಿಸರದ ಭಾಷೆ ಆಗಿಲ್ಲದಿರುವುದರಿಂದ ಶಾಲೆಯ ಭಾಷೆ ಹೆಚ್ಚು ಬಳಕೆಗೆ ಬರಲ್ಲ. ಕೊಂಕಣಿ ಪ್ರದೇಶಗಳಲ್ಲಿ ಕನ್ನಡ ಪಾಠಮಾಡುವಾಗಲೂ ಇದು ನಿಜ. ಗೋವಾ ಮಕ್ಕಳಿಗೂ ನಾಲ್ಕನೇ ತರಗತಿಯಿಂದ ಇಂಗ್ಲಿಶ್ ಬೋಧಿಸುವಾಗಲೂ ಈ ಸಮಸ್ಯೆಯಿದೆ. ಆದ್ದರಿಂದ ಈ ಪ್ರದೇಶಗಳಲ್ಲಿ ದ್ವಿಭಾಷಿಕ ಶಿಕ್ಷಕರನ್ನು ನೇಮಕ ಮಾಡಬೇಕು. ಎರಡೂ ಭಾಷೆಗಳ ಮೂಲಕ ಬೋಧಿಸುವ ಹಾಗಿರಬೇಕೆಂದು ಶಿಫಾರಸ್ಸು ಮಾಡಿದ್ದಾರೆ.

ಬಳ್ಳಾರಿ ಪರಿಸರದಲ್ಲಿ ಕನ್ನಡ ತೆಲುಗು ದ್ವಿಭಾಷಾ ಸಂದರ್ಭಗಳು ಅನೇಕ ದಶಕಗಳಿಂದಲೂ ನೆಲೆಗೊಂಡಿರುವುದರಿಂದಲೂ ಬ್ರಿಟಿಷ್ ಅಧಿಕಾರಿಗಳು ನೂರು ವರ್ಷಕ್ಕೂ ಮೇಲ್ಪಟ್ಟು ಬಳ್ಳಾರಿಯನ್ನು ಆಳಿದ್ದರಿಂದಲೂ, ಇಲ್ಲಿ ಕನ್ನಡ ಮಾಧ್ಯಮದ ಜೊತೆಗೆ ತೆಲುಗು ಮಾಧ್ಯಮದಲ್ಲಿ ಭಾಷಿಕರು ಶಿಕ್ಷಣವನ್ನು ಪಡೆಯುವ ಸನ್ನಿವೇಶಗಳು ಉಂಟಾಗಿವೆ. ಜೊತೆಗೆ ದೇಶೀ ಭಾಷೆಗಳಿಗೆ ಪ್ರೋತ್ಸಾಹ ಕೊಟ್ಟಿದ್ದರಿಂದ ತೆಲುಗು ಮಾಧ್ಯಮದ ಶಾಲೆಗಳು ತೆರೆಯಲ್ಪಟ್ಟಿವೆ. ಬಳ್ಳಾರಿ ವಿಘಟನೆಗೆ ಮುಂಚೆ ಕನ್ನಡಿಗರೂ ಸಹ ತೆಲುಗು ಮಾಧ್ಯಮಗಳಲ್ಲಿ ಓದುವುದರ ಅನಿವಾರ್ಯಗಳಿತ್ತು. ಆದರೆ ಏಕೀಕರಣೋತ್ತರದಲ್ಲಿ ತೆಲುಗು ಮಾಧ್ಯಮಗಳಲ್ಲಿ ಓದುವವರ ಸಂಖ್ಯೆ ಕ್ರಮೇಣ ವರ್ಷದಿಂದ ವರ್ಷಕ್ಕೆ ಇಳಿಮುಖವಾಗುತ್ತಿದೆ. ಇದಕ್ಕೆ ಕರ್ನಾಟಕ ಸರ್ಕಾರದ ಆಡಳಿತ ನಿರ್ಧಾರಗಳಿಂದಾಗಿ ಭಾಷಿಕರಲ್ಲಿ ಆಗುತ್ತಿರುವ ಪಲ್ಲಟಗಳು ಒಂದೆಡೆ ಕಾರಣವಿರಬಹುದಾದರೆ, ಈ ಪರಿಸರದಲ್ಲಿ ತೆಲುಗು ಭಾಷೆಗಿರುವ ಮಿತವಾದ ಸಮಾಜೋಭಾಷಿಕ ಕಾರ್ಯಗಳಿಂದಾಗಿ ಕನ್ನಡ ಮಾಧ್ಯಮದ ಶಾಲೆಗಳಿಗೆ ಪಲ್ಲಟಗಳು ಉಂಟಾಗುತ್ತಿವೆ. ಇಂತಹ

ಸಂದರ್ಭದಲ್ಲಿ ತೆಲುಗು ಭಾಷಿಕರು ಕನ್ನಡ ಮಾಧ್ಯಮದಲ್ಲಿ ಶಿಕ್ಷಣವನ್ನು ಪಡೆದುಕೊಳ್ಳುತ್ತಿರುವೆಡೆಗಳಲ್ಲಿ ತೆಲುಗು - ಕನ್ನಡ ದ್ವಿಭಾಷಿಕ ಮಕ್ಕಳ ಶೈಕ್ಷಣಿಕ ಸಾಧನೆಯನ್ನು ಕುರಿತಂತೆ ಕೆಲವು ಶಾಲೆಗಳಲ್ಲಿನ ಮಾಹಿತಿಯನ್ನು ಆಧರಿಸಿ ನೋಡಲಾಗಿದೆ. ಹೆಚ್ಚಿನ ಮಾಹಿತಿಯನ್ನು ತೆಲುಗು ಭಾಷಿಕ ವಲಸಿಗ ಅಲ್ಪಸಂಖ್ಯಾತವರ್ಗದವರು ಹೋಗುತ್ತಿರುವ (ತೋರಣಗಲ್ಲು ಸರ್ಕಾರಿ ಕನ್ನಡ ಪ್ರಾಥಮಿಕ ಮಾಧ್ಯಮಿಕ ಶಾಲೆ)ಯಲ್ಲಿ ಪಡೆಯಲಾಗಿದೆ. ಪಡೆದ ಮಾಹಿತಿಯನ್ನು ವಿಶ್ಲೇಷಿಸುವಾಗ ಮೂರು ರೀತಿಯಲ್ಲಿ ವಿಭಾಗಿಸಿಕೊಂಡು ಅವುಗಳಲ್ಲಿ ದ್ವಿಭಾಷಿಕ ಮಕ್ಕಳ ಶೈಕ್ಷಣಿಕ ಸಾಧನೆಯನ್ನು ಗುರುತಿಸಲಾಗಿದೆ. ಇದನ್ನು ಹೆಚ್ಚಿನ ಅಂಕಿ-ಅಂಶಗಳನ್ನು ಆಧರಿಸಿದ ಸೂಕ್ಷ್ಮ ಅಧ್ಯಯನಕ್ಕೆ ಒಳಪಡಿಸಿರದೆ ಕ್ಷೇತ್ರಕಾರ್ಯದಲ್ಲಿ ಶೈಕ್ಷಣಿಕ ಸಂದರ್ಭಗಳಲ್ಲಿ ಆಗುತ್ತಿರುವ ಭಾಷಾ ಪಲ್ಲಟವನ್ನು ನೋಡುವ ಸಂದರ್ಭದಲ್ಲಿ ಕಂಡುಬಂದಂತಹ ಸಂಗತಿಗಳಿಂದ ವಿಶ್ಲೇಷಿಸಲಾಗಿದೆ. ಆದ್ದರಿಂದ ಇದಕ್ಕೊಂದು ಮಿತಿ ಇದೆ.

## ಕನ್ನಡದ ಸಾಮಾಜಿಕ ಸಂದರ್ಭಗಳಿಗೆ ಒಳಗಾದ ತೆಲುಗು ಭಾಷಿಕ ಮಕ್ಕಳಲ್ಲಿ

ತೆಲುಗು ಭಾಷಿಕರನೇಕರು ಬಹುಸಂಖ್ಯಾತ ಕನ್ನಡ ಭಾಷಿಕರ ಜೊತೆಗೆ ಬದುಕು ಮಾಡುತ್ತಿರುವುದರಿಂದ ಸಾಮಾನ್ಯವಾಗಿ ದಿನನಿತ್ಯದ ಹಲವು ಅವಶ್ಯಕತೆಗಳಿಗಾಗಿ, ವ್ಯವಹಾರಗಳಿಗಾಗಿ ಕನ್ನಡದ ಸಾಮಾಜಿಕ ಸಂದರ್ಭಗಳಿಗೆ ತೆರೆದುಕೊಳ್ಳುವ ಅನಿವಾರ್ಯಗಳಿವೆ. ಇಂತಹ ಸಂದರ್ಭಗಳಲ್ಲಿ ಬೆಳೆಯುತ್ತಿರುವ ತೆಲುಗು ಭಾಷಿಕ ಮಕ್ಕಳಿಗೆ ತೆಲುಗು ಮತ್ತು ಕನ್ನಡ ಭಾಷೆಗಳು ಸಹಜವಾಗಿ ಲಭಿಸಿರುತ್ತವೆ. ಜೊತೆಗೆ ತೆಲುಗು ಮನೆ ಆವರಣದಲ್ಲೆ ಹೆಚ್ಚು ಬಳಕೆಯಾಗುತ್ತಿದ್ದು ಇತರೆ ಆವರಣಗಳಲ್ಲಿ ಕನ್ನಡವನ್ನು ಬಳಸುವ ಸಂದರ್ಭಗಳೇ ಹೆಚ್ಚಿರುತ್ತವೆ. ಇಂತಹ ಮಕ್ಕಳು ಶೈಕ್ಷಣಿಕ ಸಂದರ್ಭಗಳಲ್ಲಿ ಕನ್ನಡವನ್ನು ಒಂದು ಮಾಧ್ಯಮವಾಗಿ ತೆಗೆದುಕೊಂಡು ಓದುವಾಗ ಸಾಕ್ಷರತೆಯ ಕೌಶಲಗಳಿಗೆ ಮೊದಲು ಒಳಗಾಗುವುದು ಕನ್ನಡದ ಲಿಪಿ ಸಂದರ್ಭಗಳಿಗೇ ಆಗಿದೆ. ಜೊತೆಗೆ ತೆಲುಗು ಕೇವಲ ಮೌಖಿಕ ನೆಲೆಯಷ್ಟೆ ಬಳಸುವುದರಿಂದ ತೆಲುಗಿನ ಲಿಪಿ ಸಂದರ್ಭಗಳಿಗೆ ಒಳಗಾಗುವ ಪರಿಸ್ಥಿತಿಯಿಲ್ಲ. ಆದ್ದರಿಂದ ಇವರ ಶೈಕ್ಷಣಿಕ ಸಾಧನೆಯ ಮೇಲೆ ತೆಲುಗು ಭಾಷೆಯು ಪ್ರಭಾವವನ್ನು ಬೀರುತ್ತಿಲ್ಲ. ಕೆಲವೆಡೆಗಳಲ್ಲಿ ಮಾತ್ರ ಕೆಲವು ಮಕ್ಕಳಲ್ಲಿ ಪ್ರಾಥಮಿಕ ಹಂತದಲ್ಲಿ ಉಚ್ಚಾರಣಾ ದೋಷಗಳು ಕನ್ನಡವನ್ನು ಕಲಿಯುವ ಸಂದರ್ಭಗಳಲ್ಲಿ ಇರುವುದು ಕಾಣುತ್ತಿದೆ. ಅದು ಸಾಮಾನ್ಯ ಏಕಭಾಷಿಕ ಮಕ್ಕಳಿಗಿಂತ ಭಿನ್ನವಾಗಿಲ್ಲ. ಭಾಷಾ ಕೌಶಲಗಳು ಶಿಕ್ಷಣದ ಮೂಲಕ ಗಟ್ಟಿಗೊಳ್ಳುತ್ತಾ ಹೋದಂತೆ ಪ್ರಾಥಮಿಕ ಕಲಿಕೆಯ ಕೆಲವು ದೋಷಗಳು ಮರೆಯಾಗುತ್ತಿರುವಂತೆ ಕಾಣುತ್ತದೆ. ಆದ್ದರಿಂದ ಈ ಹಂತದಲ್ಲಿ ದ್ವಿಭಾಷಿಕ ಮಕ್ಕಳು ಶೈಕ್ಷಣಿಕ ಪ್ರಗತಿಯಲ್ಲಿ ಯಾವುದೇ ರೀತಿಯ ಅಡ್ಡಿ - ಆತಂಕವನ್ನು ಎದುರಿಸುತ್ತಿಲ್ಲ. ಆದ್ದರಿಂದ ತೆಲುಗು - ಕನ್ನಡ ದ್ವಿಭಾಷಿಕತೆಯಿಂದ ಯಾವುದೇ ರೀತಿಯ ವಿಕಲತೆಯು ಈ ಹಂತದಲ್ಲಿ ಉಂಟಾಗಿಲ್ಲವೆಂದು ಕಾಣುತ್ತದೆ.

ಆದರೂ ಕನ್ನಡದ ಮಕ್ಕಳು ಕಲಿತಷ್ಟು ಬೇಗ ಈ ಮಕ್ಕಳು ಕಲಿಯಲು ಆಗುತ್ತಿಲ್ಲ. ಕಾರಣ ಕನ್ನಡವನ್ನು ಮಾಧ್ಯಮವಾಗಿ ಓದುತ್ತಿರುವುದರಿಂದಷ್ಟೆ, ಈ ಮಕ್ಕಳು ಕನ್ನಡ ಭಾಷೆಯನ್ನು ಕಲಿಯುತ್ತಿರುತ್ತಾರೆ. ಮಿಕ್ಕಂತೆ ಅವರ ಸಂವಹನವೆಲ್ಲಾ ತೆಲುಗು ಭಾಷೆಯೇ ಆಗಿರುತ್ತದೆ.

ಕ್ರಮೇಣ ಅಕ್ಷರ ಹಂತದ ಕಲಿಕೆಯು ದಾಟುತ್ತಾ ಮೂರು ನಾಲ್ಕನೇ ತರಗತಿಗಳಿಗೆ ಬರುವ ಹೊತ್ತಿಗೆ ಗ್ರಹಿಕೆಯ ನೆಲೆಗಳಲ್ಲಿ ಬದಲಾವಣೆಗಳು ಉಂಟಾಗಿರುತ್ತವೆ. ಆದರೆ ಸಮರ್ಥವಾದ ಉತ್ತರಗಳನ್ನು ಕನ್ನಡದಲ್ಲಿ ಕೊಡಲು ಆಗುವುದಿಲ್ಲ. ಉದಾಹರಣೆಗೆ ವಿಜ್ಞಾನ ಪಾಠಗಳನ್ನು ಗ್ರಹಿಸುವಾಗ ತಾಯಿಬೇರು - ತಂತುಬೇರು ಎಂದು ಕನ್ನಡದಲ್ಲಿ ಗ್ರಹಿಸಿರುತ್ತಾರೆ. ಅದನ್ನು ಮತ್ತೆ ಶಿಕ್ಷಕರು ಕೇಳಿದಾಗ ತಲ್ಲಿವೇರು - ಪಿಲ್ಲವೇರು ಎಂದು ತೆಲುಗಿನಲ್ಲಿ ಉತ್ತರವನ್ನು ಅಭಿವ್ಯಕ್ತಪಡಿಸುತ್ತಾರೆ. ಇನ್ನು ಕೆಲವು ಸಂದರ್ಭಗಳಲ್ಲಿ ಪಕ್ಕದ ಸ್ನೇಹಿತರೊಬ್ಬರಿಂದ ತಿಳಿದುಕೊಂಡು ಉತ್ತರಿಸುತ್ತಾರೆ. ಇಂಗ್ಲಿಶ್ ಭಾಷೆಯನ್ನು ಗ್ರಹಿಸುವಾಗ ಇನ್ನು ಸಮಸ್ಯೆ ಇದ್ದಂತೆ ಕಾಣುತ್ತದೆ. ನಾಲ್ಕರಿಂದ ಐದನೆಯ ತರಗತಿಗೆ ಬರುವ ಹೊತ್ತಿಗೆ ಗ್ರಹಿಕೆಯ ಹಂತದಲ್ಲಿ ಇನ್ನಷ್ಟು ಬದಲಾವಣೆಗಳಿರುವುದು ಕಾಣುತ್ತದೆ. ಜೊತೆಗೆ ಈ ಹಂತದಲ್ಲಿ ಕನ್ನಡ - ತೆಲುಗು ಭಾಷೆಗಳ ಪ್ರತ್ಯೇಕ ಬಳಕೆಯ ಬಗೆಗೆ ಅರಿವು ಉಂಟಾಗಿರುವಂತಿದೆ. ಇದನ್ನು ಅವರ ಭಾಷಾ ಆಯ್ಕೆಗಳಲ್ಲಿ ಇನ್ನಿತರ ಆವರಣಗಳಲ್ಲಿ ಭಾಷೆಯನ್ನು ಬಳಸುವಾಗಲೂ ಕಾಣಬಹುದಾಗಿದೆ. ಈ ಮಕ್ಕಳಿಗೆ ತರಗತಿಯಲ್ಲಿ ಹಲವು ರೀತಿಯ ಹಿಂಜರಿಕೆಗಳಿರುವುದು ಕಾಣುತ್ತಿದೆ. ಆದ್ದರಿಂದ ಈ ಮಕ್ಕಳು ತರಗತಿಗಳಲ್ಲಿ ಶಿಕ್ಷಕರು ಕೇಳಿದ ಪ್ರಶ್ನೆಗಳಿಗೆ ಸಮರ್ಥವಾಗಿ ಉತ್ತರಿಸಲು, ಪಠ್ಯವನ್ನು ಓದಲು, ತರಗತಿಯ ಪಠ್ಯದ ಚರ್ಚೆಗಳಲ್ಲಿ ಭಾಗವಹಿಸುವಲ್ಲಿ ಹಿಂಜರಿಯುತ್ತಾರಲ್ಲದೆ ಹಿಂಜರಿಕೆಗಳಿಂದಾಗಿ ಹಿಂದಿನ ಸಾಲುಗಳಲ್ಲಿ ಕುಳಿತು ಪಾಠ ಕೇಳುತ್ತಾರೆ. ಜೊತೆಗೆ ಕನ್ನಡದ ವ್ಯಾಕರಣವನ್ನು ಗ್ರಹಿಸಲು ಸಹ ಇಂತಹ ಮಕ್ಕಳಿಗೆ ತೊಡಕಿದೆ. ತರಗತಿಗಳಲ್ಲಿ ಪಠ್ಯವನ್ನು ಗ್ರಹಿಸಲಾರದ ಸಂದರ್ಭಗಳಲ್ಲಿ ಕೆಲವು ಕನ್ನಡ ತೆಲುಗು ಭಾಷೆಗಳು ಚೆನ್ನಾಗಿ ಬಲ್ಲ ಮಕ್ಕಳಿಂದ ತಿಳಿದುಕೊಂಡು ತೆಲುಗು ಭಾಷೆಯ ಮೂಲಕ ಕನ್ನಡದ ಪಠ್ಯವನ್ನು ಗ್ರಹಿಸುತ್ತಾರೆ. ಇನ್ನು ಕೆಲವು ಮಕ್ಕಳಲ್ಲಿ ಉಚ್ಚಾರಣಾ ದೋಷಗಳಿರುವುದು ಕಾಣುತ್ತೇವೆ. ಪ್ರತಿ ತರಗತಿಗಳಲ್ಲಿಯೂ ಶಿಕ್ಷಕರು ಉಚ್ಚಾರಣಾ ದೋಷಗಳ ಬಗೆಗೆ ಎಚ್ಚರಿಕೆ ನೀಡುತ್ತಿರುತ್ತರಾದರೂ ಪಠ್ಯ ಓದುವ ಆರಂಭದಲ್ಲಿ ಅಕ್ಷರಗಳ ಬಗೆಗಿರುವ ಎಚ್ಚರ ದೀರ್ಘವಾಗಿ ಓದಲು ಹೇಳಿದಾಗ ಓದುತ್ತಾ ಮುಂದೆ ಹೋದಂತೆ ತೆಲುಗು ಭಾಷೆಯ ಅಕ್ಷರಗಳನ್ನು ಸ್ಥಾನಪಲ್ಲಟಗೊಳಿಸುತ್ತಾರೆ.

ಆರು ಮತ್ತು ಏಳನೆಯ ತರಗತಿಗಳಿಗೆ ಬರುವ ಹೊತ್ತಿಗೆ ಈ ಮಕ್ಕಳಲ್ಲಿರುವ ಕಲಿಕೆ ಮತ್ತು ಅಭಿವ್ಯಕ್ತಿಯ ಸಮಸ್ಯೆಗಳು ಹಳಷ್ಟು ಪರಿಹಾರವಾಗಿರುವಂತೆ ಕಾಣುತ್ತದೆ. ಇದಕ್ಕೆ ಏಳನೇ ತರಗತಿಗಳಲ್ಲಿ ಬುದ್ಧಿಮಟ್ಟವನ್ನು ಮಾಪನ ಮಾಡುವ ಪರೀಕ್ಷೆಗಳಲ್ಲಿ ಕನ್ನಡ ಭಾಷಿಕ ಮಕ್ಕಳಷ್ಟೆ ಅಥವಾ ಅದಕ್ಕಿಂತಲೂ ಹೆಚ್ಚಿನ ಪ್ರಗತಿಯನ್ನು ಸಾಧಿಸಿರುವ ಸಂದರ್ಭಗಳು

ತಿಳಿದುಬಂದಿದೆ. ಇದನ್ನು ಸಮರ್ಥಿಸುವಂತೆ ತೆಲುಗು ಭಾಷಿಕ ವಿದ್ಯಾರ್ಥಿಯೊಬ್ಬ 1999 ನೇ ಸಾಲಿನಲ್ಲಿ 10 ನೇ ತರಗತಿಯಲ್ಲಿ ಇಡೀ ಕೇಂದ್ರಕ್ಕೆ ಮೊದಲ ಸ್ಥಾನ ಬಂದಿರುವ ಮಾಹಿತಿ ತೋರಣಗಲ್ಲಿನ ಶಾಲಾ ಶಿಕ್ಷಕರಿಂದ ತಿಳಿದುಬಂದಿದೆ. ಇದರಿಂದ ತಿಳಿದು ಬರುತ್ತಿರುವುದೇನೆಂದರೆ ತೆಲುಗು ಭಾಷಿಕ ಮಕ್ಕಳಿಗೆ ಕನ್ನಡವನ್ನು ಮಾಧ್ಯಮವಾಗಿ ಓದುವಾಗ ಪ್ರಾಥಮಿಕ ಹಂತದಲ್ಲಿರುವ ಕಲಿಕೆ ಮತ್ತು ಗ್ರಹಿಕೆಯ ಸಮಸ್ಯೆಗಳು ಹೈಸ್ಕೂಲ್ ಹಂತಕ್ಕೆ ಬರುವ ಹೊತ್ತಿಗೆ ಇರುವುದಿಲ್ಲ. ನಗರ ಸಂದರ್ಭಗಳಲ್ಲಿ ಕನ್ನಡದ ಸಾಮಾಜಿಕ ಸಂದರ್ಭಗಳಿಗೆ ಒಳಗಾಗುವ ತೆಲುಗು ಭಾಷಿಕ ಮಕ್ಕಳಲ್ಲಿ ಈ ಸಮಸ್ಯೆಗಳು ಬೇಗ ಮರೆಯಾಗಿರುವಂತೆ ಕಾಣುತ್ತಿದ್ದರೆ, ಗ್ರಾಮೀಣ ಪ್ರದೇಶಗಳಲ್ಲಿ ಅದರಲ್ಲೂ ಭಾಷಾ ದ್ವೀಪಗಳಲ್ಲಿ ನೆಲೆಸಿರುವ ತೆಲುಗು ಭಾಷಿಕ ಮಕ್ಕಳಲ್ಲಿನ ಶೈಕ್ಷಣಿಕ ಸಮಸ್ಯೆಗಳು ಹೈಸ್ಕೂಲ್ ಹಂತಕ್ಕೆ ಬರುವ ಹೊತ್ತಿಗೆ ಮರೆಯಾಗುತ್ತವೆ. ಈ ಸಂಗತಿಗಳು ಸಾಕಷ್ಟು ಸೂಕ್ಷ್ಮವಾದ, ಆಳವಾದ ಅಧ್ಯಯನವನ್ನು ಹೆಚ್ಚಿನ ಸಂಶೋಧನೆಯ ಅವಧಿಯಲ್ಲಿ ಬಯಸುತ್ತವೆ. ಆದ್ದರಿಂದ ಇಲ್ಲಿ ಆಳವಾದ, ಸೂಕ್ಷ್ಮವಾದ ಅಧ್ಯಯನಕ್ಕೆ ಒಳಪಡಿಸದೆ ಫಲಿತಗಳನ್ನೂ ಒಪ್ಪಲು ಬರುವುದಿಲ್ಲ. ಆದ್ದರಿಂದ ಇನ್ನಷ್ಟು ಒರೆಗೆ ಹಚ್ಚಿ ನೋಡಬೇಕಿದೆ. ಆದರೆ ಈ ಮಕ್ಕಳ ಶೈಕ್ಷಣಿಕ ಸಾಧನೆ ಮತ್ತು ಪ್ರಗತಿಯಲ್ಲಿ ಅಡ್ಡಿಯುಂಟಾಗಲು ದ್ವಿಭಾಷಿಕರಾಗಿರುವುದೊಂದೆ ಮುಖ್ಯವಾದ ಕಾರಣವಾಗಿರದೆ ಇದಕ್ಕೆ ಪೂರಕವಾಗಿ ಈ ಮಕ್ಕಳು ಹುಟ್ಟಿ ಬೆಳೆಯುತ್ತಿರುವ ಪರಿಸರಗಳು, ಅವರ ಕುಟುಂಬಗಳ ಸಮಾಜೋಆರ್ಥಿಕ ಅಂತಸ್ತಿಗೆ ಸಂಬಂಧಿಸಿದ ಅಂಶಗಳು, ಅತಿಯಾದ ಬಡತನ, ಘೋರವಾದ ಜಾತಿಪದ್ಧತಿ, ಕಳಪೆ ದರ್ಜೆಯ ಶಿಕ್ಷಣವನ್ನು ಪಡೆಯುವುದು, ಇವೆಲ್ಲವೂ ಒಂದಿಲ್ಲೊಂದು ರೀತಿಯಲ್ಲಿ ಕಾರಣವಾಗಿ ಶೈಕ್ಷಣಿಕ ಮಟ್ಟವನ್ನು ನಿಯಂತ್ರಿಸುತ್ತಿರುತ್ತದೆಯಷ್ಟೆ.

ತೆಲುಗು ಭಾಷಿಕ ಮಕ್ಕಳು ಕನ್ನಡ ಮಾಧ್ಯಮವನ್ನು ಓದುವಾಗಷ್ಟೆ ಗ್ರಹಿಕೆಯ ನೆಲೆಯಲ್ಲಿ ಸಮಸ್ಯೆಗಳಿರುವುದಲ್ಲದೆ ತೆಲುಗು ಭಾಷಿಕ ಮಕ್ಕಳು ತೆಲುಗು ಮಾಧ್ಯಮದಲ್ಲಿ ಕನ್ನಡವನ್ನು ಒಂದು ವಿಷಯವಾಗಿ ಓದುವಾಗಲೂ ಸಮಸ್ಯೆಗಳಿವೆ. ಅವೂ ಸಹ ಪ್ರಾಥಮಿಕ ಹಂತದಲ್ಲಿ ಇರುವಂತೆ ಮುಂದಿನ ತರಗತಿಗಳಿಗೆ ಹೋಗುವ ಹಂತದಲ್ಲಿ ಬದಲಾವಣೆಗಳಾಗುತ್ತ ಕನ್ನಡ ಭಾಷೆಯ ಸಾಕ್ಷರತೆಯ ಕೌಶಲಗಳು ಗಟ್ಟಿಗೊಳ್ಳುತ್ತಾ ಹೋಗುತ್ತವೆ. ಅಲ್ಲದೆ ತೆಲುಗು ಮಾಧ್ಯಮಗಳಲ್ಲಿ ಓದುತ್ತಿರುವ ಮಕ್ಕಳ ಶೈಕ್ಷಣಿಕ ಸಾಧನೆಗಳಲ್ಲಿ ಭಾಷೆಯೊಂದು ಯಾವುದೇ ರೀತಿಯ ಅಡ್ಡಿಯಾದಂತೆ ಕಾಣುತ್ತಿಲ್ಲ. ಆದರೆ ಈ ಮಾಧ್ಯಮಗಳಲ್ಲಿ ಓದುತ್ತಿರುವ ಮಕ್ಕಳ ಸಮಾಜೋಆರ್ಥಿಕ ಪರಿಸ್ಥಿತಿಗಳಿಂದಾಗಿ, ಪೋಷಕರ ಅನಕ್ಷರತೆ ಇತ್ಯಾದಿ ಹಲವು ಕಾರಣಗಳಿಂದಾಗಿ ಆ ಮಕ್ಕಳ ಶೈಕ್ಷಣಿಕ ಸಾಧನೆ ಕುಂಠಿತವಾಗಿದೆ.

ಬರವಣಿಗೆಯ ನೆಲೆಗಳಲ್ಲಿ

ತೆಲುಗು ಭಾಷಿಕ ಮಕ್ಕಳು ಕನ್ನಡ ಮಾಧ್ಯಮಗಳಲ್ಲಿ ಶಿಕ್ಷಣವನ್ನು ಪಡೆಯುವ ಸಂದರ್ಭದಲ್ಲಿ ಮೊದಲು ಒಳಗಾಗುವುದು ಕನ್ನಡದ ಲಿಪಿ ಸಂದರ್ಭಗಳಿಗೆ. ತೆಲುಗು ಭಾಷೆಯನ್ನು ಮೌಖಿಕ ನೆಲೆಯಲ್ಲಷ್ಟೆ ಕಲಿತಿರುತ್ತಾರೆ. ಜೊತೆಗೆ ಹೆಚ್ಚಿನ ಭಾಷೆಯ ಬಳಕೆಯ ಆವರಣಗಳಲ್ಲಿ ತೆಲುಗು ಭಾಷೆಯ ಬಳಕೆಯಾಗುತ್ತಿರುತ್ತದೆ. ಆದ್ದರಿಂದ ಕನ್ನಡ ಭಾಷೆಯನ್ನು ಕಲಿತು ಬಳಸುವ ನೆಲೆಯಲ್ಲಿ ಸಣ್ಣಪುಟ್ಟ ತಪ್ಪುಗಳು ಕಾಣಿಸಿಕೊಳ್ಳುತ್ತದೆ. ಮೌಖಿಕ ನೆಲೆಯಲ್ಲಿ ತೆಲುಗು ಭಾಷೆಯನ್ನು ಹೆಚ್ಚು ಹೆಚ್ಚು ಬಳಸುವುದರಿಂದ ಕನ್ನಡವನ್ನು ಬರೆಯುವಾಗ ತೆಲುಗು ಭಾಷೆಯಲ್ಲಿನ ಕೆಲವು ಅಕ್ಷರಗಳು ಅಕ್ಷರ ಪಲ್ಲಟವಾಗಿರುತ್ತವೆ. ಉದಾಹರಣೆಗೆ ಹೆಚ್ಚು ಅಕ್ಷರ ಪಲ್ಲಟಗೊಳಿಸುವ ಅಕ್ಷರಗಳಲ್ಲಿ

'ಳ' ಕಾರ ಇರುವ ಕಡೆಗಳಲ್ಲಿ 'ಲ' ಕಾರ (ಬಹಳ - ಬಾಲ, ನಾಳೆ - ನಾಲೆ)

'ಣ' ಕಾರ ಇರುವ ಕಡೆಗಳಲ್ಲಿ 'ನ' ಕಾರ (ಕಣ್ಣು - ಕನ್ನು, ಅಣ್ಣ - ಅನ್ನ)

'ಚ' ಕಾರ ಇರುವ ಕಡೆಗಳಲ್ಲಿ 'ಸ' ಕಾರ (ಚೀಟಿ - ಸೀಟಿ, ಚಪಾತಿ - ಸಪಾತಿ)

'ಎ' ಕಾರ ಇರುವ ಕಡೆಗಳಲ್ಲಿ 'ಆ' ಕಾರ (ಭಾಷೆ - ಭಾಷಾ, ಮಹಿಮೆ - ಮಹಿಮಾ)

ಹೀಗೆ ಇನ್ನು ಕೆಲವು ಅಕ್ಷರಗಳನ್ನು ಬರವಣಿಗೆಯಲ್ಲಿ ಪಲ್ಲಟಗೊಳಿಸುತ್ತಾರೆ. ಇಂತಹ ಅಕ್ಷರ ಪಲ್ಲಟಗಳು ಈ ಮಕ್ಕಳು ಬರೆಯುವ ಬರವಣಿಗೆಯಲ್ಲಿ ಹೆಚ್ಚು ಹಾಗೆ ಉಳಿದುಕೊಂಡಿರುತ್ತದೆಯಲ್ಲದೆ ಮಂದಗತಿಯಲ್ಲಿ ಬದಲಾವಣೆಗೆ ಒಳಗಾಗುತ್ತದೆ. ಜೊತೆಗೆ ಈ ಮಕ್ಕಳಿಗೆ ಸ್ವಂತವಾಕ್ಯರಚನೆ ಮಾಡಲು ತೊಡಕಿದ್ದಂತೆ ಕಾಣುತ್ತಿದೆ. ತರಗತಿಗಳಲ್ಲಿ ಸ್ವಂತವಾಕ್ಯ ರಚನೆ ಮಾಡಲು ಕೆಲವು ಪದಗಳನ್ನು ಹೇಳಿದಾಗ ಅನೇಕ ಮಕ್ಕಳು ಬರೆಯದೆ ಹಿಂಜರಿದರಲ್ಲದೆ ಮೌಖಿಕವಾಗಿ ಕೇಳಿದಾಗ ಸಮರ್ಥವಾಗಿ ವಾಕ್ಯರಚನೆಯನ್ನು ಕನ್ನಡದಲ್ಲಿ ಮಾಡಲು ಸಾಧ್ಯವಾಗಲಿಲ್ಲ. ಜೊತೆಗೆ ಏಕವಚನ, ಬಹುವಚನ ರೂಪಗಳನ್ನು ವಾಕ್ಯರಚನೆಯಲ್ಲಿ ಬಳಸುವುದರ ಬಗೆಗೂ ಸಮಸ್ಯೆ ಇರಬಹುದು. ಕೆಲವು ಮಕ್ಕಳು ಮಾತನಾಡುವಾಗ ಕೊಡು ಸಾರ್, ಬಾ ಸಾರ್, ನೀನು ನಡಿ ಸಾರ್, ಇತ್ಯಾದಿ ರೂಪಗಳು ಬಳಕೆಯಲ್ಲಿರುವುದು ಕಾಣುತ್ತದೆ. ಕುಟುಂಬದಲ್ಲಿನ ಕೆಳಮಟ್ಟದ ಆರ್ಥಿಕ ಪರಿಸ್ಥಿತಿಗಳಿಂದಾಗಿ ಹೆಚ್ಚು ಮಕ್ಕಳು ಏಳನೆಯ ತರಗತಿಯ ನಂತರದ ಶಿಕ್ಷಣವನ್ನು ತೊರೆದು ಕೂಲಿ ಕೆಲಸಗಳಿಗೆ ಹೋಗುವುದರಿಂದ ಶಾಲಾ ಅವಧಿಯಲ್ಲಿ ಸರಿಯಾದ ಶಿಕ್ಷಣ ಪಡೆಯಲಾಗದವರಲ್ಲಿ ಅರೆ-ಬರೆಯ ಗ್ರಹಿಕೆಯಿಂದಾಗಿ ಕೆಲವು ಮಿಶ್ರಿತ ಭಾಷಿಕ ರೂಪಗಳು ಭಾಷಿಕರ ಬಳಕೆಯಲ್ಲಿ ಉಳಿದುಕೊಂಡಿವೆ.

## ಕನ್ನಡ - ತೆಲುಗು ಎರಡೂ ಸಂದರ್ಭಗಳಿಗೆ ಒಳಗಾದ ಮಕ್ಕಳಲ್ಲಿ

ಕನ್ನಡ - ತೆಲುಗು ಎರಡೂ ಭಾಷೆಗಳು ಕೆಲವೊಮ್ಮೆ ಮಕ್ಕಳಿಗೆ ಮನೆಭಾಷೆಗಳೇ ಆಗಿರುವ ಸಂದರ್ಭಗಳು ಬಳ್ಳಾರಿ ಪರಿಸರದ ಅನೇಕ ಕುಟುಂಬಗಳಲ್ಲಿ ಕಾಣುತ್ತಿದೆ. ಮನೆವಾತಾವರಣದಲ್ಲಿ ಮಗುವೊಂದು ತಾಯಿ ಮತ್ತು ಅವರ ಸಂಬಂಧಿಕರಿಂದ ಒಂದು ಭಾಷೆಯನ್ನು ತಂದೆ ಮತ್ತು ಅವರ ಸಂಬಂಧಿಕರಿಂದ ಮತ್ತೊಂದು ಭಾಷೆಯನ್ನು ಕಲಿಯಬೇಕಾಗಿ ಬರಬಹುದು. ಇದು ಹೆಚ್ಚಾಗಿ ಭಿನ್ನಭಾಷೆಗಳುಳ್ಳ ಭಾಷಿಕರ ನಡುವೆ ವೈವಾಹಿಕ ಸಂಬಂಧವೇರ್ಪಟ್ಟಾಗ ಉಂಟಾಗುತ್ತದೆ. ಇಂತಹ ಸಂದರ್ಭಗಳಲ್ಲಿ ಈ ಮಕ್ಕಳ ಪ್ರಥಮ ಭಾಷೆಗಳು ಕನ್ನಡ - ತೆಲುಗು ಎರಡೂ ಆಗಿರುತ್ತವೆ. ಇಂತಹ ಮಕ್ಕಳು ಇಂಗ್ಲಿಶ್ ಮಾಧ್ಯಮಗಳಲ್ಲಿ ಕಲಿಯುವಾಗ ಶೈಕ್ಷಣಿಕ ಸಾಧನೆ ಪ್ರಗತಿಗೆ ಈ ಎರಡೂ ಮನೆಭಾಷೆಗಳು ಅಡ್ಡಿಯನ್ನುಂಟು ಮಾಡಿವೆಯೆ ಎಂಬುದನ್ನು ಇಂಗ್ಲಿಶ್ ಮಾಧ್ಯಮಗಳಲ್ಲಿ ಓದುತ್ತಿರುವ ಮಕ್ಕಳ ಬಗೆಗೆ ಕೆಲವು ಶಿಕ್ಷಕರಿಂದ ಮಾಹಿತಿಯನ್ನು ಪಡೆದಾಗ ಯಾವುದೇ ರೀತಿಯ ಅಡೆ ತಡೆಗಳಿರುವುದು ತಿಳಿದುಬಂದಿಲ್ಲ. ಆದರೆ ಕನ್ನಡವನ್ನು ಒಂದು ವಿಷಯವಾಗಿ ಓದುವಾಗ ಕಾಗುಣಿತ ದೋಷಗಳು ಸ್ವಲ್ಪಮಟ್ಟಿಗೆ ಇದ್ದು ಅದು ಉಚ್ಚಾರಣೆ ಮತ್ತು ಬರವಣಿಗೆಯ ನೆಲೆಯಲ್ಲಿ ಕಾಣಿಸಿಕೊಳ್ಳುತ್ತದೆ. ಕ್ರಮೇಣ ಇದು ಮರೆಯಾಗುತ್ತದೆ. ಇಂತಹ ಮಕ್ಕಳಲ್ಲಿ ತೆಲುಗು ಕೇವಲ ಮೌಖಿಕ ನೆಲೆಯಲ್ಲಷ್ಟೆ ಉಳಿಯುತ್ತದೆ. ಹಾಗೆಯೇ ಈ ಮಕ್ಕಳು ಕನ್ನಡವನ್ನು ಮಾಧ್ಯಮವಾಗಿ ತೆಗೆದುಕೊಂಡು ಓದುವಾಗಲೂ ಯಾವುದೇ ರೀತಿಯ ಸಮಸ್ಯೆಗಳು ಶೈಕ್ಷಣಿಕ ಸಾಧನೆಯಲ್ಲಿ ಉಂಟಾಗಿಲ್ಲ.

ಈ ಮೇಲಿನ ಎಲ್ಲಾ ಅಂಶಗಳು ಮಕ್ಕಳ ಶೈಕ್ಷಣಿಕ ಸಾಧನೆ ಪ್ರಗತಿಯಲ್ಲಿ ದ್ವಿಭಾಷಿಕತೆಯೂ ಯಾವುದೇ ರೀತಿಯ ಅಡ್ಡಿಯನ್ನು ಉಂಟುಮಾಡಿಲ್ಲ. ಆದರೆ ಮಕ್ಕಳ ಕುಟುಂಬದ ಸಮಾಜೋಆರ್ಥಿಕ ಅಂಶಗಳು, ಮಕ್ಕಳು ಬೆಳೆಯುತ್ತಿರುವ ಪರಿಸರದಲ್ಲಿನ ಭಾಷಾ ಸಂದರ್ಭಗಳು, ಎಲ್ಲವೂ ಒಂದಿಲ್ಲೊಂದು ರೀತಿಯಲ್ಲಿ ಶಿಕ್ಷಣದ ಪ್ರಗತಿಯಲ್ಲಿ ಅಡೆ ತಡೆಯನ್ನು ಉಂಟುಮಾಡಬಹುದು. ಜೊತೆಗೆ ಇಂತಹ ದ್ವಿಭಾಷಿಕ ಸನ್ನಿವೇಶಗಳಲ್ಲಿ ದ್ವಿಭಾಷಾ ಶಿಕ್ಷಕರನ್ನು ನೇಮಿಸುವುದರಿಂದ ಮಕ್ಕಳ ಭಾಷಿಕ ಸ್ಥಿತಿಯನ್ನು ಅರ್ಥಮಾಡಿಕೊಂಡು ಎರಡೂ ಭಾಷೆಗಳ ಮೂಲಕ ಅರ್ಥೈಸಲು ಪ್ರಯತ್ನಿಸುವಾಗ ಆ ಮಕ್ಕಳ ಶಿಕ್ಷಣದ ಮಟ್ಟ ಇನ್ನಷ್ಟು ಉತ್ತಮವಾಗಬಹುದು. ಜೊತೆಗೆ ಶಿಕ್ಷಕರು ಮಕ್ಕಳ ಕೌಟುಂಬಿಕ ಪರಿಸ್ಥಿತಿಗಳ ಹಿನ್ನೆಲೆಯನ್ನು ಅರ್ಥಮಾಡಿಕೊಂಡು ಅವರಿಗೆ ಶಿಕ್ಷಣದಲ್ಲಿ ಉತ್ತಮ ಮಾರ್ಗದರ್ಶನ ತೋರಿಸುವುದರ ಮೂಲಕವೂ ದ್ವಿಭಾಷಿಕ ಮಕ್ಕಳ ಶಿಕ್ಷಣದ ಮಟ್ಟ ಅಭಿವೃದ್ಧಿಗೊಳಿಸುವಲ್ಲಿ ಉಪಯೋಗವಾಗಬಹುದು.



# ಅಧ್ಯಾಯ : ಎಂಟು

# ಭಾಷಾ ಸಂಪರ್ಕ

೧. ಭಾಷಾ ಸಂಗೋಪನೆ ಮತ್ತು ಭಾಷಾ ಪಲ್ಲಟ

೨. ನುಡಿಜಗಿತ ಮತ್ತು ನುಡಿಮಿಶ್ರಣ

೩. ಭಾಷಾ ಮನೋಭಾವ ಮತ್ತು ಭಾಷಾ ನಡವಳಿಕೆ

ಅಧ್ಯಾಯ : ಎಂಟು

# ಭಾಷಾ ಸಂಪರ್ಕ

ಬೇರೆ ಬೇರೆ ಭಾಷೆಗಳನ್ನು ಮನೆಭಾಷೆಯಾಗುಳ್ಳ ಎರಡು ಭಾಷಾ ಸಮಾಜಗಳ ಮಧ್ಯೆ ಸಂಪರ್ಕವೇರ್ಪಟ್ಟಾಗ ಆ ಎರಡೂ ಸಮಾಜಗಳು ಪರಸ್ಪರ ಭಾಷೆಯನ್ನು ಕಲಿಯಬೇಕಾಗಿ ಬರಬಹುದು ಅಥವಾ ಅವುಗಳಲ್ಲಿ ಒಂದು ಸಮಾಜದವರು ಮಾತ್ರ ಇನ್ನೊಂದರ ಭಾಷೆಯನ್ನು ಕಲಿಯಬಹುದು. ಇಂತಹ ಸಂಪರ್ಕ ಸಂದರ್ಭದಲ್ಲಿ ಇಡೀ ಸಮಾಜವೇ ಇನ್ನೊಂದು ಭಾಷೆಯನ್ನು ಕಲಿಯಬೇಕಾಗಿ ಬರಬಹುದು ಅಥವಾ ಸಮಾಜದ ಕೆಲವೇ ವ್ಯಕ್ತಿಗಳು ಇನ್ನೊಂದು ಭಾಷೆಯನ್ನು ಕಲಿತು ಮಧ್ಯವರ್ತಿಯಾಗಿರಬಹುದು. ಹಾಗೂ ಇಂತಹ ವ್ಯಕ್ತಿಗಳ ಸಂಖ್ಯೆ ಕ್ರಮೇಣ ಹೆಚ್ಚುತ್ತಾ ಇಡೀ ಸಮಾಜವೇ ಕಾಲಾನಂತರದಲ್ಲಿ ಇನ್ನೊಂದು ಭಾಷೆಯನ್ನು ಕಲಿಯುವ ಸ್ಥಿತಿಯನ್ನು ತಲುಪಬಹುದು. ಇವೆಲ್ಲ ಸಾಮಾಜಿಕ ಆರ್ಥಿಕ ಸ್ಥಾನಮಾನಗಳು, ಜನಸಂಖ್ಯೆ ಸಾಮಾಜಿಕ ಧೋರಣೆ ಇತ್ಯಾದಿ ಹಲವಾರು ಸಾಮಾಜಿಕ ಸಂಗತಿಗಳಿಗೆ ಸಂಬಂಧಿಸಿದಂತೆ ಆಯಾ ಸಮಾಜಗಳ ನಡುವಿನ ಸಾಪೇಕ್ಷ ಸಂಬಂಧವನ್ನವಲಂಬಿಸಿವೆ. ಹೀಗಲ್ಲದೆ ಸಾಮಾಜಿಕ ಸಂಪರ್ಕದ ನೇರ ಅವಶ್ಯಕತೆಯಿಲ್ಲದೆಯೂ ಶಿಕ್ಷಣ, ಆಡಳಿತ ಇತ್ಯಾದಿ ಕಾರಣಗಳಿಂದಾಗಿ ಇನ್ನೊಂದು ಭಾಷೆಯನ್ನು ಕಲೆಯಬೇಕಾಗಬಹುದು. ಅಥವಾ ಅನ್ಯಭಾಷಿಕರ ಮಧ್ಯೆ ವಿವಾಹ ಸಂಬಂಧಗಳು ಏರ್ಪಟ್ಟಾಗ ಉಂಟಾಗುವ ಅವಶ್ಯಕತೆಯಿಂದಲೂ ಇನ್ನೊಂದು ಭಾಷೆಯನ್ನು ವೈಯಕ್ತಿಕ ಕಾರಣಗಳಿಗಾಗಿ ಕಲಿಯಬೇಕಾಗಿ ಬರಬಹುದು (ಕೃಷ್ಣ ಪರಮೇಶ್ವರ ಭಟ್ಟ 1995). ಹೀಗೆ ಹಲವಾರು ಕಾರಣಗಳಿಂದಾಗಿ ಉಂಟಾಗುವ ದ್ವಿಭಾಷಿಕತೆಯಿಂದ ಹಲವು ರೀತಿಯ ಪರಿಣಾಮಗಳು ವ್ಯಕ್ತಿಗತ ನೆಲೆಯಲ್ಲಿ ಮತ್ತು ಸಾಮುದಾಯಿಕ ನೆಲೆಯಲ್ಲಿ ಉಂಟಾಗಬಹುದು. ವ್ಯಕ್ತಿಗತ ನೆಲೆಯಲ್ಲಿ ಮತ್ತು ಸಾಮುದಾಯಿಕ ನೆಲೆಯಲ್ಲಿ ಉಂಟಾಗಬಹುದಾದ ಹಲವು ರೀತಿಯ ಭಾಷಿಕ ಬದಲಾವಣೆಗಳನ್ನು ಮತ್ತು ದ್ವಿಭಾಷಿಕತೆಯ ಪರಿಣಾಮಗಳನ್ನು ದ್ವಿಭಾಷಿಕತೆಯ ಬಗೆಗಿನ ಅಧ್ಯಯನಗಳು ಭಿನ್ನವಾದ ನೆಲೆಗಳಲ್ಲಿ ಗುರ್ತಿಸಿವೆ.

ಎರಡು ಭಿನ್ನ ಭಾಷೆಗಳು ಸಂಪರ್ಕಕ್ಕೆ ಒಳಗಾದಾಗ ಒಂದು ಭಾಷೆಯ ಮೇಲೆ ಮತ್ತೊಂದು ಭಾಷೆಯ ಪ್ರಭಾವ ದ್ವಿಭಾಷಿಕರ ಬಳಕೆಯ ನೆಲೆಗಳಲ್ಲಿ ಉಂಟಾಗಬಹುದು. ಇಲ್ಲವೆ ಭಾಷೆಯ ರಚನೆಯ ನೆಲೆಯಲ್ಲಿ ಹಲವು ರೀತಿಯ ಬದಲಾವಣೆಗಳುಂಟಾಗಬಹುದು. ಪ್ರಭಾವಿಸುವ ಭಾಷೆ ಮತ್ತು ಪ್ರಭಾವಕ್ಕೊಳಗಾಗುವ ಭಾಷೆಗಳ ನಡುವೆ ಕಾರ್ಯಕಾರಣ ಸಂಬಂಧಗಳು ಭಿನ್ನವಾಗಿರಬಹುದು. ಆಡಳಿತ ಭಾಷೆ ಅಥವಾ ಬಹುಸಂಖ್ಯಾತರ ಭಾಷೆಯೊಂದರಿಂದ ಅಲ್ಪಸಂಖ್ಯಾತರ ಭಾಷೆಯ ಮೇಲೆ ಆಗುವ ಪ್ರಭಾವವಿರಬಹುದು. ವಿದೇಶಿ ಭಾಷೆಯೊಂದು ದೇಶಿ ಭಾಷೆಗಳ ಸಂದರ್ಭಗಳಲ್ಲಿ ಬೀರುವ ಪ್ರಭಾವವಿರಬಹುದು. ಗಡಿ ಪ್ರದೇಶಗಳಲ್ಲಿ ಒಂದು ಭಾಷೆ ಇನ್ನೊಂದು ಭಾಷೆಯ ಮೆಲೆ ಬೀರುವ ಪ್ರಭಾವವಿರಬಹುದು. ಇದು ಎಲ್ಲೆಡೆಗಳಲ್ಲಿಯೂ ಒಂದೇ ರೀತಿ ಇರದೆ ಭಾಷೆಯ ಬಳಕೆ ಮತ್ತು ಭಾಷೆಯ ರಚನೆಯ ನೆಲೆಗಳನ್ನು ಪ್ರಭಾವಿಸಿರುತ್ತದೆ. ಕೆಲವೊಮ್ಮೆ ಎರಡು ಭಾಷೆಗಳ ಸಂಪರ್ಕದಿಂದಾಗಿ ಬೇರೊಂದು ಭಾಷೆಯೇ ಸೃಷ್ಟಿಯಾಗಬಹುದು. ಅವು ಪಿಜಿನ್ - ಕ್ರಿಯೋಲ್ ಭಾಷೆಗಳಾಗಬಹುದು. ಇಂತಹ ಕೆಲವು ಸನ್ನಿವೇಶಗಳನ್ನು ದಕ್ಷಿಣ ಆಫ್ರಿಕಾ, ನ್ಯೂಗಿನ ಬಗೆಗಿನ ಭಾಷಾ ಸಂಪರ್ಕದ ಬಗೆಗಿನ ಅಧ್ಯಯನಗಳು ತಿಳಿಸುತ್ತವೆ. ಇನ್ನು ಕೆಲವೆಡೆಗಳಲ್ಲಿ ಮಿಶ್ರಿತ ಭಾಷೆಗಳು ಉಂಟಾಗಬಹುದು. ಈ ರೀತಿಯ ಪರಿಣಾಮಗಳು ಒಂದೇ ಬಾರಿಗೆ ಸಂಭವಿಸುವುದಿಲ್ಲ. ತಲೆಮಾರಿನಿಂದ ತಲೆಮಾರಿಗೆ ಬದಲಾಗುತ್ತಿರುತ್ತವೆ. ಚಲನಶೀಲವಾದ ಭಾಷಾ ಸಂಪರ್ಕ ಸದಾ ಬದಲಾಗುತ್ತಿರುತ್ತದೆ. ಹಾಗೆಯೇ ದ್ವಿಭಾಷಾ ಪರಿಸರಗಳಲ್ಲಿ ಭಾಷೆಗಳ ಸಂಪರ್ಕದಿಂದಾಗಿ ಉಂಟಾಗುವ ಭಾಷಿಕ ಸನ್ನಿವೇಶಗಳು (ಪಿಜಿನ್, ಕ್ರಿಯೋಲ್, ಡೈಗ್ಲಾಸಿಯೊ, ನುಡಿಮಿಶ್ರಣ, ನುಡಿಪಲ್ಲಟ, ಭಾಷಾ ಸಂಗೋಪನೆ ಮತ್ತು ಭಾಷಾಪಲ್ಲಟ) ಪ್ರತಿಯೊಂದು ದ್ವಿಭಾಷಾ ಪರಿಸರಗಳಲ್ಲಿಯೂ ಭಿನ್ನ ನೆಲೆಗಳಲ್ಲಿ ಕಾಣಿಸಿಕೊಳ್ಳುತ್ತಿರುತ್ತದೆ. ಎರಡು ಭಿನ್ನ ಭಾಷೆಗಳ ಸಂಪರ್ಕದಿಂದ ಉಂಟಾದ ದ್ವಿಭಾಷಾ ಪರಿಸರಗಳಲ್ಲಿನ ಭಾಷಿಕರ ಭಾಷಾ ಧೋರಣೆಗಳು, ಭಾಷೆಗಳ ಬಗೆಗಿನ ಮನೋಭಾವ ಭಾಷಿಕರ ನಡುವಳಿಕೆಗಳು ಇವೂ ಸಹ ಭಿನ್ನ ನೆಲೆಗಳಲ್ಲಿ ಕಾಣುತ್ತಿರಬಹುದು. ಇವೆಲ್ಲಾ ಭಾಷಾಶಾಸ್ತ್ರಜ್ಞರಿಗಷ್ಟೆ ಅಲ್ಲದೆ ಮನಶಾಸ್ತ್ರಜ್ಞರಿಗೆ, ಸಮಾಜಶಾಸ್ತ್ರಜ್ಞರಿಗೆ ಮತ್ತು ಶಿಕ್ಷಣ ತಜ್ಞರಿಗೆ ಆಸಕ್ತಿದಾಯಕ ವಿಷಯಗಳಾಗಿರುತ್ತವೆ.

ಬಳ್ಳಾರಿ ಪರಿಸರದ ಕನ್ನಡ - ತೆಲುಗು ದ್ವಿಭಾಷಾ ಸಂದರ್ಭದಲ್ಲಿ ಉಂಟಾಗಿರುವ ಭಾಷಿಕ ಸನ್ನಿವೇಶಗಳಾಗಲಿ, ಭಾಷಿಕ ಪ್ರಕ್ರಿಯೆಗಳಾಗಲಿ, ಭಾಷಾ ಪಲ್ಲಟ, ಭಾಷಾ ಸಂಗೋಪನೆಗಳಾಗಲಿ, ಭಾಷಿಕರ ಮನೋಭಾವ ನಡವಳಿಕೆಗಳಾಗಲಿ ಕ್ಷೇತ್ರಕಾರ್ಯ ಸಂದರ್ಭದಲ್ಲಿ ಹಲವು ರೀತಿಯ ಕುತೂಹಲಗಳಿಗೆ ಎಡೆಮಾಡಿಕೊಟ್ಟಿದ್ದರಿಂದ ಇಂತಹ ಭಾಷಿಕ ಸನ್ನಿವೇಶಗಳನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿದಾಗ ಕೆಲವು ಆಸಕ್ತಿದಾಯಕ ಮಾಹಿತಿಗಳು ದೊರೆತವು. ಇವು ದ್ವಿಭಾಷಾ ಸಂದರ್ಭದ ಪರಿಣಾಮಗಳನ್ನು ಕುರಿತಂತೆ ಚರ್ಚಿಸಲು ಮತ್ತು ಪ್ರಸ್ತುತವಾಗಿ ಈ ದ್ವಿಭಾಷಾ ಸಂದರ್ಭದಲ್ಲಿ ಆಗುತ್ತಿರುವ ಬದಲಾವಣೆಗಳಿಗೆ ಹಲವು ರೀತಿಯ ಕಾರಣಗಳನ್ನು ಹುಡುಕುವ ಪ್ರಯತ್ನದಲ್ಲಿ ಸಹಾಯಕವಾಗಿವೆ.

## ಭಾಷಾ ಪಲ್ಲಟ ಮತ್ತು ಭಾಷಾ ಸಂಗೋಪನೆ

ಸಾಮಾಜಿಕ ಭಾಷಾಶಾಸ್ತ್ರದ ನೆಲೆಯಲ್ಲಿ ದ್ವಿಭಾಷಿಕತೆ ಮತ್ತು ಬಹುಭಾಷಿಕತೆಯ ಬಗೆಗೆ ಅಧ್ಯಯನಗಳನ್ನು ಮಾಡುವ ಸಂದರ್ಭದಲ್ಲಿ ಗುರ್ತಿಸಲಾದ ಪರಿಕಲ್ಪನೆಗಳಲ್ಲಿ ಭಾಷಾ ಪಲ್ಲಟ ಮತ್ತು ಭಾಷಾ ಸಂಗೋಪನೆಗಳು ಪ್ರಮುಖವಾಗಿವೆ. ಪಶ್ಚಿಮದ ರಾಷ್ಟ್ರಗಳಲ್ಲಿ 1960-70 ರ ದಶಕಗಳಿಂದ ಈಚೆಗೆ ಈ ಪರಿಕಲ್ಪನೆಯ ಬಗೆಗೆ ಹೆಚ್ಚಿನ ಅಧ್ಯಯನಗಳಾಗಿವೆ. ಭಾರತದ ಸಂದರ್ಭದಲ್ಲಿ 1970-80 ರ ದಶಕದಿಂದೀಚೆಗೆ ಸಾಮಾಜಿಕ ಭಾಷಾಶಾಸ್ತ್ರದ ನೆಲೆಯಲ್ಲಿ ಅಧ್ಯಯನ ಮಾಡುತ್ತಿರುವವರಲ್ಲಿ ಕೆಲವರು ಈ ಪರಿಕಲ್ಪನೆಗಳನ್ನೇ ಮುಖ್ಯವಾಗಿಟ್ಟುಕೊಂಡು ಅಧ್ಯಯನಗಳನ್ನು ಮಾಡಿದ್ದಾರೆ. ಇಂಗ್ಲಿಶ್‌ನ Language Maintenance ಎನ್ನುವುದರ ಸಂವಾದಿಯಾಗಿ ಕನ್ನಡದಲ್ಲಿ ಭಾಷಾ ಸಂಗೋಪನೆ ಎಂದೂ Language Shift ಗೆ ಸಂವಾದಿಯಾಗಿ ಭಾಷಾ ಪಲ್ಲಟ ಎಂದೂ ಸದ್ಯದ ಸಾಮಾಜಿಕ ಭಾಷಾಶಾಸ್ತ್ರದ ಬರಹಗಳಲ್ಲಿ ಬಳಸಲಾಗುತ್ತಿದೆ. ಭಾಷಾ ಪಲ್ಲಟವೆಂಬ ಮಾತನ್ನು ಎರಡು ಅಥವಾ ಅದಕ್ಕೂ ಹೆಚ್ಚು ಭಾಷೆ ಅಥವಾ ಭಾಷಾ ಪ್ರಭೇದಗಳನ್ನು ಪರ್ಯಾಯವಾಗಿ ಕೆಲವು ನಿರ್ದಿಷ್ಟ ಸಾಮಾಜಿಕ ಸಂದರ್ಭಗಳಲ್ಲಿ ನಿರ್ದಿಷ್ಟ ನಿಯೋಗಗಳಿಗಾಗಿ ಬಳಸುವುದು ಎಂಬ ಅರ್ಥದಲ್ಲಿ ಉಪಯೋಗಿಸಲಾಗಿದೆ (ಉದಾ. ಬ್ಲೂಮ್ ಮತ್ತು ಗುಂಪರ್ಜ್ 1971). ಭಾಷಾ ಪಲ್ಲಟದ ಅತ್ಯಂತ ಮುಖ್ಯ ಲಕ್ಷಣವೆಂದರೆ ಒಂದು ಸಮುದಾಯದಲ್ಲಿನ ಭಾಷಿಕರು ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಪಲ್ಲಟಗೊಂಡಾಗ ಒಂದು ಸಾಮಾಜಿಕ ಸಂದರ್ಭದಿಂದ ಇನ್ನೊಂದು ಸಾಮಾಜಿಕ ಸಂದರ್ಭಕ್ಕೆ ಪಲ್ಲಟಗೊಂಡಿರುತ್ತಾರೆ. ಭಾಷಾ ಸಂಗೋಪನೆ ಎಂದರೆ ಭಾಷಾ ರಕ್ಷಣೆ, ಭಾಷಾ ಉಳಿಸಿಕೊಳ್ಳುವಿಕೆ ಎಂದರ್ಥ.

ಭಾಷಾ ಸಂಗೋಪನೆ ಮತ್ತು ಭಾಷಾ ಪಲ್ಲಟ ಈ ಎರಡೂ ಪ್ರಕ್ರಿಯೆಗಳು ಯಾವುದೇ ದ್ವಿ-ಬಹುಭಾಷಿಕ ಸಮುದಾಯದಲ್ಲಿ ವಿವಿಧ ಗುಂಪುಗಳ ನಡುವೆ ಕೆಲವು ಸಂದರ್ಭದಲ್ಲಿ ಏಕಕಾಲದಲ್ಲಿ ನಡೆಯಬಹುದು. ಇನ್ನು ಕೆಲವು ಸಂದರ್ಭಗಳಲ್ಲಿ ಭಿನ್ನವಾಗಿರಬಹುದು. ಪ್ರತಿಯೊಂದು ದ್ವಿಭಾಷಾ ಸಮುದಾಯದಲ್ಲೂ ಇದು ಚಾಲನೆಯಾಗುವ ರೀತಿ ಭಿನ್ನವಾಗಿರುತ್ತದೆ ಮತ್ತು ವ್ಯಕ್ತಿಯಿಂದ-ವ್ಯಕ್ತಿಗೆ, ವರ್ಗದಿಂದ-ವರ್ಗಕ್ಕೆ, ಜಾತಿಯಿಂದ-ಜಾತಿಗೆ, ತಲೆಮಾರಿನಿಂದ ತಲೆಮಾರಿಗೆ, ಸ್ತ್ರೀಯಿಂದ-ಪುರುಷರಿಗೆ, ವಿದ್ಯಾವಂತರಿಗಿಂತ-ಅವಿದ್ಯಾವಂತರಲ್ಲಿ ಭಿನ್ನವಾಗಿರುತ್ತದೆ, ಆದ್ದರಿಂದ ಭಾಷಾ ಪಲ್ಲಟ ಮತ್ತು ಭಾಷಾ ಸಂಗೋಪನೆಗಳು ಏಕಘನಾಕೃತಿಯವಲ್ಲ, ಬಹುಮುಖವುಳ್ಳದ್ದಾಗಿವೆ. ಈ ಬಹುಮುಖತೆಗೆ ಅನೇಕ ಸಮಾಜೋಭಾಷಿಕ ಅಂಶಗಳು ಒಂದೆಡೆ ಕಾರಣವಾದರೆ, ಮತ್ತೊಂದೆಡೆ ಹೊಸ ಶತಮಾನದಲ್ಲುಂಟಾಗುತ್ತಿರುವ ಅನೇಕ ಸಮಾಜೋಭಾಷಿಕ... ಪ್ರಸ್ತುತ ವಿದ್ಯಮಾನಗಳು, ಜಾಗತೀಕರಣ, ಉದಾರೀಕರಣ, ಕಂಪ್ಯೂಟರೀಕರಣದಿಂದ ಉಂಟಾಗಿರುವ ಆಧುನಿಕ ಜೀವನದಲ್ಲಿ, ಅದಕ್ಕೆ ತಕ್ಕಂತಹ ಜೀವನ ವಿಧಾನಗಳನ್ನು ರೂಪಿಸಿಕೊಳ್ಳುವಲ್ಲಿ ಭಾಷಿಕರಲ್ಲಾಗುತ್ತಿರುವ ಪಲ್ಲಟಗಳು, ಅವುಗಳ ನಡುವೆಯೂ ಸ್ವಭಾಷೆಯನ್ನು ಉಳಿಸಿಕೊಳ್ಳಲು ಹೊಸ ರೀತಿಯ ತಂತ್ರಗಳನ್ನೇನಾದರೂ ಭಾಷಿಕರು

ರೂಪಿಸಿಕೊಳ್ಳುತ್ತಿದ್ದಾರೆಯೇ ಎನ್ನುವುದು ಸಾಮಾಜಿಕ ಭಾಷಾಶಾಸ್ತ್ರಜ್ಞರಿಗೆ ಆಸಕ್ತಿಯ ಮತ್ತು ಕುತೂಹಲದ ವಿಷಯವಾಗಿದೆ. ಇದಲ್ಲದೆ ಭಾಷಾ ಯೋಜನೆ ಮತ್ತು ಶಿಕ್ಷಣ ಯೋಜನೆಗಳನ್ನು ರೂಪಿಸುವಾಗ ಭಾಷಾ ಸಂಗೋಪನೆ ಮತ್ತು ಭಾಷಾ ಪಲ್ಲಟಗಳ ಬಗೆಗೆ ನಡೆಸಿದ ಅಧ್ಯಯನಗಳು ಹೆಚ್ಚಿನ ಮಾಹಿತಿಯನ್ನು ಒದಗಿಸುವುದರ ಮೂಲಕ ಯೋಜನೆಗಳು ಪ್ರಸ್ತುತ ಸಂದರ್ಭದ ಚಿತ್ರಣ ಮತ್ತು ಅವಶ್ಯಕತೆಗಳನ್ನು ಅರ್ಥಮಾಡಿಕೊಳ್ಳಲು ಸಹಾಯವಾಗಿವೆ.

1777 ರಲ್ಲಿ ಕೋರನ್‌ವಾಲ್‌ನಲ್ಲಿ ಕೋರ್‌ನಿಶ್ ಭಾಷೆಯನ್ನು ಮಾತನಾಡುತ್ತಿದ್ದ ಕಟ್ಟಕಡೆಯ ಭಾಷಿಕ ಸತ್ತಾಗ ಆ ಭಾಷೆಯೂ ನಾಶವಾಯಿತು. ಕೋರ್‌ನಿಶ್ ಭಾಷೆಯನ್ನು ಮಾತನಾಡುತ್ತಿದ್ದ ಸಾವಿರಾರು ಭಾಷಿಕರಿಗೆ ಆಂಗ್ಲಭಾಷೆಯ ಹಿಡಿತದಿಂದ ಬಿಡಿಸಿಕೊಳ್ಳಲು ಸಾಧ್ಯವಿರಲಿಲ್ಲ ಏಕೆಂದರೆ ಇಂಗ್ಲಿಶ್ ಪ್ರಬಲವರ್ಗದ ಭಾಷೆಯಷ್ಟೇ ಅಲ್ಲದೆ ರಾಷ್ಟ್ರ ಭಾಷೆಯೂ ಆಗಿದ್ದರಿಂದ ಕೋರ್‌ನಿಶ್ ಭಾಷಿಕರೆಲ್ಲರೂ ಸಹ ಇಂಗ್ಲಿಶ್‌ಗೆ ಪಲ್ಲಟಗೊಂಡಿದ್ದರು. ಈ ರೀತಿಯ ಸಂದರ್ಭಗಳನ್ನು ಅನೇಕ ದ್ವಿಭಾಷಾ ಸಮುದಾಯಗಳಲ್ಲಿ ಕಾಣಬಹುದಾಗಿದೆ. ಹೆಚ್ಚಿನ ಸಂದರ್ಭದಲ್ಲಿ ಭಾಷಿಕರು ಸಾಮಾಜಿಕವಾಗಿ ಮೇಲ್‌ಮುಖ ಚಲನೆ, ಆರ್ಥಿಕ ಸಫಲತೆ ಮತ್ತು ರಾಜಕೀಯ ಸ್ಥಾನಮಾನಗಳನ್ನು ಪಡೆಯುವುದಕ್ಕಾಗಿ ದಿನನಿತ್ಯದ ಸಂವಹನಕ್ಕಾಗಿ ಬಹುಸಂಖ್ಯಾತರ ಭಾಷೆಯನ್ನೇ ಬಳಸುತ್ತಿರುವುದರಿಂದ ಅಲ್ಪಸಂಖ್ಯಾತರ ಭಾಷೆಗಳು ಅದೃಶ್ಯ ಭಾಷೆಗಳಾಗಿಬಿಡುತ್ತಿವೆ. ಕೆಲವೆಡೆಗಳಲ್ಲಿ ಅಲ್ಪಸಂಖ್ಯಾತ ಸಮುದಾಯಗಳು ತಮ್ಮ ಭಾಷೆಗಳಾಡುವುದನ್ನು ನಿಲ್ಲಿಸಿಬಿಟ್ಟಿದ್ದಾರೆ. ಅಂತಕಡೆಗಳಲ್ಲಿ ಭಾಷೆ ಸಂಪೂರ್ಣ ನಾಶವಾಗಿದೆ ಎಂದಲ್ಲ. ಉದಾಹರಣೆಗೆ ಇಂಗ್ಲೆಂಡಿನಲ್ಲಿರುವ ಗುಜರಾತಿ ಭಾಷಿಕರು ಸಂಪೂರ್ಣವಾಗಿ ಗುಜರಾತಿಯಿಂದ ಇಂಗ್ಲಿಶ್‌ಗೆ ಪಲ್ಲಟಗೊಂಡಿದ್ದಾರೆ. ಆದರೆ ಗುಜರಾತಿ ಇಂತಹ ಸಂದರ್ಭದಲ್ಲಿ ಮೃತ ಭಾಷೆಯಲ್ಲ. ಪ್ರಪಂಚದ ಇತರೆಡೆಗಳಲ್ಲಿ ಅದರಲ್ಲೂ ಭಾರತದಲ್ಲಿ ಗುಜರಾತಿ ಭಾಷೆಯನ್ನಾಡುವ ಲಕ್ಷಾಂತರ ಭಾಷಿಕರಿದ್ದಾರೆ. ಇಂಗ್ಲೆಂಡಿನಲ್ಲಿರುವ ಗುಜರಾತಿ ಸಮುದಾಯದವರ ಭಾಷೆ ಮಾತ್ರ ಕಳೆದು ಹೋಗಿರುತ್ತದೆ.

ಮನುಷ್ಯ ತನ್ನ ಚಹರೆಯನ್ನು, ತನಗೆ ವಂಶಪಾರಂಪರ್ಯವಾಗಿ ಬಂದ ಸಂಸ್ಕೃತಿಯನ್ನೂ, ತನ್ನ ರಾಷ್ಟ್ರ, ಜನಾಂಗಗಳಿಗೆ ಸಂಬಂಧಿಸಿದ ಚಹರೆಗಳನ್ನು ಗುರುತಿಸಿಕೊಳ್ಳಲು ತನ್ನ ಸ್ವಭಾಷೆಯನ್ನು ಉಳಿಸಿಕೊಳ್ಳುತ್ತಿರುತ್ತಾನೆ/ಳೆ. ಇದರ ಜೊತೆಗೆ ತನ್ನ ಭಾಷಿಕ ಸಾಮರ್ಥ್ಯಗಳನ್ನು ಸಮರ್ಥವಾಗಿ ಕಲಿತ ಭಾಷೆಗಿಂತ ಸ್ವಭಾಷೆಯಲ್ಲೇ ಹೆಚ್ಚು ಸಮರ್ಥವಾಗಿ ಪ್ರಸ್ತುತಪಡಿಸುವ ಶಕ್ತಿ ಸ್ವಭಾಷೆಗೆ ಇದೆ ಎನ್ನುವ ನಂಬಿಕೆಯಿಂದಲೂ ಸಹ ಭಾಷಾ ಸಂಗೋಪನೆ ನಡೆಯುತ್ತಿರುತ್ತದೆ. ಜೊತೆಗೆ ಆಯ್ಕೆ ವ್ಯಕ್ತಿಯದಾಗಿರುತ್ತದೆ. ಅಂತಸ್ತು, ಆತ್ಮೀಯತೆ, ಪ್ರೀತಿ, ವಿಶ್ವಾಸ, ಸಂಬಂಧಗಳು ಇತ್ಯಾದಿಗಳನ್ನೇ ಇದು ಆಧರಿಸಿರುತ್ತದೆ. ಭಾಷಾ ಸಂಗೋಪನಾ ಕಾರ್ಯಗಳು ಎಲ್ಲಾ ಕಾಲದಲ್ಲೂ, ಎಲ್ಲಾ ಭಾಷಾ ಸಮುದಾಯಗಳಲ್ಲಿ ಪ್ರಯತ್ನಗಳು ನಡೆಯುತ್ತಾ ಬಂದಿವೆ. ಕೆಲವೆಡೆಗಳಲ್ಲಿ ಸಫಲವಾಗಿರುವಂತೆ, ಕೆಲವೆಡೆಗಳಲ್ಲಿ ವಿಫಲವೂ ಆಗಿವೆ.

ಒಂದೇ ಭಾಷಾ ಕುಟುಂಬಗಳು ಹೆಚ್ಚು ಹತ್ತಿರವಿದ್ದಾಗ ಭಾಷಾ ಸಂಗೋಪನೆ ಹೆಚ್ಚು ಸಾಧ್ಯವಾಗುತ್ತದೆ. ಉದಾ. ಬ್ರಿಟನ್ನಿನಲ್ಲಿರುವ ಭಾರತೀಯರು ಮತ್ತು ಪಾಕಿಸ್ತಾನಿಯರು ಕ್ರಮವಾಗಿ ಗುಜರಾತಿ ಮತ್ತು ಪಂಜಾಬಿಯನ್ನು ಉಳಿಸಿಕೊಂಡಿರುವ ಸಂದರ್ಭಗಳು, ಒಂದು ಮಾಹಿತಿಯ ಪ್ರಕಾರ ಬೀದರ್‌ನಲ್ಲಿರುವ ಗೊಂಡರು ಹಲವಾರು ನಿಯಮಗಳನ್ನು ಹಾಕಿಕೊಳ್ಳುವುದರ ಮೂಲಕ ತಮ್ಮ ಗೊಂಡಿ ಭಾಷೆಯನ್ನು ಕೆಲವು ಆವರಣಗಳಲ್ಲಿ ಕಡ್ಡಾಯವಾಗಿ ಬಳಸುತ್ತಿರುವ ಸಂದರ್ಭಗಳು; ಒರಿಸ್ಸಾದಲ್ಲಿರುವ ಕೊಂಡ ಬುಡಕಟ್ಟು ಜನರು ತಮ್ಮ ಕುಯಿ ಭಾಷೆಯನ್ನು ಮನೆ ಮತ್ತು ಒಳಗುಂಪುಗಳಲ್ಲಿ, ಒರಿಯಾ ಭಾಷೆಯನ್ನು ಹೊರಗುಂಪುಗಳಲ್ಲಿ ಬಳಸುತ್ತಿರುವ ಸಂದರ್ಭಗಳು; ದೆಹಲಿಯಲ್ಲಿರುವ ಪಂಜಾಬಿಗಳು ತಮ್ಮ ಪಂಜಾಬಿ ಭಾಷೆಯನ್ನು ಆಪ್ತ ವಲಯಗಳಾದ ಮನೆ, ಸ್ನೇಹಿತರು, ಸಂಬಂಧಿಗಳು, ಇತ್ಯಾದಿ ಆವರಣಗಳಲ್ಲಿ ಉಳಿಸಿಕೊಂಡು ಹಿಂದಿ, ಇಂಗ್ಲಿಶ್ ಭಾಷೆಯನ್ನು ಪ್ರಧಾನ ಆವರಣಗಳಲ್ಲೂ ಬಳಸುತ್ತಿರುವ ಸಂದರ್ಭಗಳು, ಕಮಲ್ ಕೆ ಶ್ರೀಧರ್ (1989) ರವರ ಅಧ್ಯಯನದಲ್ಲಿ ನ್ಯೂಯಾರ್ಕ್‌ನಲ್ಲಿರುವ ಕನ್ನಡಿಗರು ಸ್ನೇಹಿತರು, ಸಂಬಂಧಿಗಳು, ಮನೆ ಮುಂತಾದೆಡೆಗಳಲ್ಲಿ ಕನ್ನಡವನ್ನು ಉಳಿಸಿಕೊಂಡಿರುವ ಸಂದರ್ಭಗಳು ಭಾಷಾ ಸಂಗೋಪನೆಗೆ ಉದಾಹರಣೆಗಳಾಗಿವೆ. ಹೀಗೆ ಯಾವುದೇ ಭಾಷೆಯು ಯಾವುದೋ ಒಂದು ರೂಪದಲ್ಲಿ ಉಳಿದುಕೊಂಡು ಬರುತ್ತಿರುತ್ತದೆ. ವ್ಯಕ್ತಿಯಲ್ಲಿ ಭಾಷೆ ಸತ್ತರೂ ಸಮುದಾಯದಲ್ಲಿ ಭಾಷೆ ಸಾಯುವುದಿಲ್ಲ, ಒಂದು ಭಾಷೆಯನ್ನಾಡುವ ಭಾಷಿಕ ಸಮುದಾಯ ಒಮ್ಮೆಲೆ ಸಾವನಪ್ಪಿದರೆ ಅಥವಾ ನಾಶಗೊಂಡರೆ ಅಥವಾ ಇನ್ನಾವುದೇ ಪ್ರಕೃತಿ ವಿಕೋಪಗಳಿಗೆ, ಯುದ್ಧಗಳಿಗೆ ತುತ್ತಾದರೆ ಅಂತಹ ಸಂದರ್ಭದಲ್ಲಿ ಮಾತ್ರ ಭಾಷೆಯೂ ಸತ್ತು ಹೋಗುತ್ತದೆ. ಈ ರೀತಿಯ ಸನ್ನಿವೇಶಗಳು ಹೆಚ್ಚು ಸಂಭವಿಸುವುದು ಬುಡಕಟ್ಟು ಜನಾಂಗಗಳಲ್ಲಿ.

ಬಹುಭಾಷಿಕ ಸಂದರ್ಭಗಳು ಯಾವಾಗಲೂ ಸ್ಥಿರವಾಗಿರುವುದಿಲ್ಲ. ಅಲ್ಲಿ ಸದಾ ಪಲ್ಲಟಗಳು ನಡೆಯುತ್ತಲೇ ಇರುತ್ತವೆ. ಒಂದು ಭಾಷೆಯಿಂದ ಮತ್ತೊಂದು ಭಾಷೆಗೆ ಪಲ್ಲಟಗಳು ವ್ಯಕ್ತಿಯಲ್ಲಿ ಮತ್ತು ಸಮುದಾಯಗಳಲ್ಲಿ ಏಕೆ ನಡೆಯುತ್ತವೆ? ಯಾವ ಕಾರಣಗಳಿಗಾಗಿ ನಡೆಯುತ್ತವೆ? ಇದರ ಪ್ರಮಾಣವೆಷ್ಟು? ಇದರ ಪರಿಣಾಮಗಳೇನು? ಇದರ ಪರಿಣಾಮಗಳಿಂದಾಗಿ ಒಂದು ಭಾಷೆಯ ಅಳಿವು ಉಳಿವಿನ ಪ್ರಶ್ನೆಗಳ ಬಗೆಗೆ ಬದಲಾವಣೆಗಳ ಬಗೆಗೆ ಅಧ್ಯಯನಗಳು ಅನೇಕ ರೀತಿಯ ಹೊಸ ಕಾರಣಗಳನ್ನು ಹೊರಗೆಳೆದಿವೆ. ಅವುಗಳಲ್ಲಿ ರಾಜಕೀಯ, ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಮತ್ತು ಇತರೆ ಕಾರಣಗಳಿಗಾಗಿ ಉಂಟಾಗುವ ಭಾಷೆಗಳಲ್ಲಿ ಒಟ್ಟಾರೆಯಾಗಿ ಆರ್ಥಿಕ ಕಾರಣಗಳಿಗಾಗಿಯೇ ಹೆಚ್ಚು ಸಂಖ್ಯೆಯ ಭಾಷಿಕರಲ್ಲಿ ತೀವ್ರಗತಿಯ ಪಲ್ಲಟಗಳುಂಟಾಗುತ್ತಿರುವುದು ಅಧ್ಯಯನಗಳಿಂದ ತಿಳಿದು ಬಂದಿದೆ. ಇದಕ್ಕೆ ಪಶ್ಚಿಮದಲ್ಲಿ ಮತ್ತು ಭಾರತದಲ್ಲಿ ನಡೆದ ಅನೇಕ ಅಧ್ಯಯನಗಳು ಸಾಕ್ಷಿಯಾಗಿವೆ.

ಭಾರತದ ಸಂದರ್ಭದಲ್ಲಿ ದ್ವಿ-ಬಹುಭಾಷಿಕತೆಯ ಬಗೆಗೆ ನಡೆದಿರುವ ಅಧ್ಯಯನಗಳಲ್ಲಿ ಮುಖ್ಯವಾಗಿ ಭಾಷಾಪಲ್ಲಟ ಮತ್ತು ಭಾಷಾ ಸಂಗೋಪನೆಯ ಪರಿಕಲ್ಪನೆಗಳನ್ನು ಇಟ್ಟುಕೊಂಡು ಮಾಡಿರುವ ಅಧ್ಯಯನಗಳೇ ಹೆಚ್ಚಿನ ಸಂದರ್ಭದಲ್ಲಿ ಕಂಡುಬಂದಿವೆ. ಜೊತೆಗೆ ಭಾರತದಲ್ಲಿನ ಅಲ್ಪಸಂಖ್ಯಾತರು, ವಲಸಿಗರ ಬಗೆಗೆ ನಡೆದಿರುವ ಅಧ್ಯಯನಗಳಲ್ಲೂ ಬೇರೆ ಬೇರೆ ಭಾರತೀಯ ಭಾಷೆಗಳಲ್ಲಿ ನಡೆದ ಅಧ್ಯಯನಗಳು ಭಾಷಾ ಯೋಜನೆ ಮತ್ತು ಶಿಕ್ಷಣ ಯೋಜನೆಗಳನ್ನು ರೂಪಿಸುವಲ್ಲಿ ಉಪಯುಕ್ತ ಮಾಹಿತಿಯನ್ನು ತಿಳಿಸುವಂಥ ಅಧ್ಯಯನಗಳಾಗಿವೆ. ಈ ನಿಟ್ಟಿನಲ್ಲಿ ಭಾರತೀಯ ಭಾಷೆಗಳ ಕೇಂದ್ರ ಸಂಸ್ಥೆಯ ಯೋಜನೆಯಡಿಯಲ್ಲಿ ನಡೆದಿರುವ ಅನೇಕ ಅಧ್ಯಯನಗಳು ಬಹಳ ಉಪಯುಕ್ತವಾಗಿರುವಂಥದ್ದು ಹಾಗೂ ಭಾಷಾಶಾಸ್ತ್ರಕ್ಕೆ ಸಂಬಂಧಿಸಿದಂತೆ ಅನೇಕ ಪತ್ರಿಕೆಗಳಲ್ಲಿ ಕೆಲವು ಭಾಷಾ ತಜ್ಞರು ದ್ವಿಭಾಷಿಕ ಮತ್ತು ಬಹುಭಾಷಿಕ ಸಮುದಾಯಗಳಲ್ಲಿನ ಭಾಷಾ ಪಲ್ಲಟ ಮತ್ತು ಭಾಷಾ ಸಂಗೋಪನೆಯನ್ನು ಕುರಿತಂತೆ ಪ್ರಕಟಿಸಿರುವ ಸಂಶೋಧನ ಲೇಖನಗಳು ಉಪಯುಕ್ತ ಮಾಹಿತಿಯನ್ನು ನೀಡುತ್ತವೆ.

ಅಜಿತ್ ಕೆ.ಮೊಹಂತಿ (1990) ಅವರು ಲೇಖನವೊಂದರಲ್ಲಿ ಭಾರತದ ಸಂದರ್ಭದಲ್ಲಿ ಭಾಷೆಗಳಲ್ಲಿ ನಡೆಯುವ ಭಾಷಾ ಪಲ್ಲಟ ಮತ್ತು ಸಂಗೋಪನೆಯು ಪಶ್ಚಿಮದ ರಾಷ್ಟ್ರಗಳಲ್ಲಿ ನಡೆಯುವ ಪಲ್ಲಟ ಮತ್ತು ಸಂಗೋಪನೆಗಿಂತ ಹೇಗೆ ಭಿನ್ನವಾಗಿವೆ ಎನ್ನುವುದಕ್ಕೆ ಹಲವು ಕಾರಣಗಳನ್ನು ಕೊಟ್ಟಿದ್ದಾರೆ. ಭಾರತದ ಸಂದರ್ಭದಲ್ಲಿ ಭಾಷಾ ಪಲ್ಲಟಕ್ಕಿಂತ ಭಾಷಾ ಸಂಗೋಪನೆಯ ಸಂದರ್ಭಗಳೇ ಹೆಚ್ಚಿನ ಸಂದರ್ಭಗಳಲ್ಲಿ ಕಾಣಿಸಿಕೊಳ್ಳುವಂಥದ್ದು ಎಂದಿದ್ದಾರೆ. ಇದಕ್ಕೆ ಸಾಕ್ಷಿಯಾಗಿ ಅನೇಕ ಅಧ್ಯಯನಗಳನ್ನು ಅವರು ಉಲ್ಲೇಖಿಸುತ್ತಾರೆ. ಭುವನೇಶ್ವರಿ (1986) ಯವರು ಕೇರಳದ ಪಾಲ್ಘಾಟ್ ಜಿಲ್ಲೆಗೆ ಅನೇಕ ವರ್ಷಗಳ ಹಿಂದೆ ಆಂಧ್ರದಿಂದ ವಲಸೆ ಬಂದು ನೆಲೆನಿಂತಿರುವ ತೆಲುಗು ಭಾಷಿಕರಲ್ಲಿ ತೆಲುಗು ಮಲೆಯಾಳಂ ದ್ವಿಭಾಷಿಕರಾಗಿರುವವರು ತೆಲುಗು ಭಾಷೆಯನ್ನು ತಲೆಮಾರುಗಳಲ್ಲಿ ಇನ್ನೂ ಉಳಿಸಿಕೊಂಡಿರುವ ಅಂಶವನ್ನು ದಾಖಲಿಸಿದ್ದಾರೆ. ಪಿ.ಬಿ.ಪಂಡಿತ್ (1972) ರವರು ಸೌರಾಷ್ಟ್ರಿಯರ ಅಧ್ಯಯನದಲ್ಲಿ ಕಂಡುಕೊಂಡ ಅಂಶಗಳಲ್ಲಿ ಏಕೆ ಭಾರತದ ಸಂದರ್ಭದಲ್ಲಿ ಇನ್ನು ಸ್ಥಿರ ದ್ವಿಭಾಷಾ ಸಂದರ್ಭಗಳಿವೆ ಎನ್ನುವುದಕ್ಕೆ ಪಶ್ಚಿಮದ ರಾಷ್ಟ್ರಗಳಿಗೆ ವಲಸೆ ಹೋದ ವಲಸಿಗರಲ್ಲಿ ಎರಡು ಅಥವಾ ಮೂರನೇ ತಲೆಮಾರುಗಳಲ್ಲಿ ಸಂಪೂರ್ಣವಾಗಿ ತಮ್ಮ ಸ್ವಭಾಷೆಗಳಿಂದ ಪ್ರಬಲವರ್ಗದ ಅಧಿಕಾರಯುತ ಭಾಷೆಗೆ ಪಲ್ಲಟಗೊಂಡಿದ್ದಾರೆ. ಆದರೆ ಭಾರತೀಯರು ಭಾರತದಲ್ಲಾಗಲಿ ವಿದೇಶಗಳಲ್ಲಾಗಲಿ ಎಲ್ಲೇ ನೆಲೆಸಿರಲಿ ತಮ್ಮ ಮನೆಮಾತುಗಳನ್ನು ಉಳಿಸಿಕೊಂಡಿದ್ದಾರೆ. ಎಷ್ಟೇ ವರ್ಷಗಳು ಬೇರೆ ಭಾಷಿಕರೊಡನೆ ಬದುಕುವ ಸಂದರ್ಭ ಬಂದರೂ ಸಹ ತಮ್ಮ ಮನೆಮಾತುಗಳನ್ನು ಉಳಿಸಿಕೊಂಡು ಬೇರೆ ಭಾಷೆಗಳನ್ನು ಕಲಿಯುತ್ತಾರೆ, ಬಳಸುತ್ತಾರೆ. ಆದ್ದರಿಂದ ಭಾರತದಲ್ಲಿ ಭಾಷಾ ಪಲ್ಲಟಕ್ಕಿಂತ ಭಾಷಾ ಸಂಗೋಪನೆ ನಿಯಮ ಎಂದಿದ್ದಾರೆ. ಆದರೆ ಭಾರತದಲ್ಲಿ ಅನೇಕ ಸಂದರ್ಭಗಳಲ್ಲಿ ಭಾಷಾ ಪಲ್ಲಟದ ಪ್ರಕ್ರಿಯೆಯನ್ನು ಕಾಣಬಹುದಾಗಿದೆ. ಆದ್ದರಿಂದ ಭಾಷಾ ಸಂಗೋಪನೆ ನಿಯಮದಂತೇನೂ ಕಾಣಲಾಗದು.

ಒರಿಸ್ಸಾದಲ್ಲಿರುವ ಕೊಂಡ ಬುಡಕಟ್ಟಿನ ಬಗೆಗೆ ಅಧ್ಯಯನ ಮಾಡಿರುವ (ಮೊಹಂತಿ 1982 ಎ,ಬಿ, ಎ,ಬಿ,ಸಿ ಮೊಹಂತಿ ಮತ್ತು ಬಾಬು 1983, ಪಟ್ನಾಯಕ್ ಮತ್ತು ಮೊಹಂತಿ 1984, ಮೊಹಂತಿ ಮತ್ತು ದಾಸ್ 1987) ಇವರುಗಳು ಕುಯಿ ಮತ್ತು ಒರಿಯಾ ಮಾತನಾಡುವ ದ್ವಿಭಾಷಿಕ ಮಕ್ಕಳ ಬಗೆಗಿನ ಅಧ್ಯಯನಗಳು ಮನಶಾಸ್ತ್ರೀಯ ಅಂಶಗಳು ಸ್ವಭಾಷೆಯನ್ನು ಉಳಿಸಿಕೊಳ್ಳುವಲ್ಲಿ ಕಾರಣವಾದ ಅಂಶವನ್ನು ಹಲವಾರು ಬಗೆಯ ಪರೀಕ್ಷೆಗಳನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಬಳಸುವುದರ ಮೂಲಕ ಕಂಡುಕೊಳ್ಳಲಾಗಿದೆ.

ಕಮಲ್ ಕೆ ಶ್ರೀಧರ್ (1985) ರವರು ನ್ಯೂಯಾರ್ಕ್‌ನಲ್ಲಿ ನೆಲೆಸಿರುವ ಕನ್ನಡಿಗರ ಬಗೆಗಿನ ಅಧ್ಯಯನದಲ್ಲಿ ಅಮೇರಿಕಾ ದೇಶಕ್ಕೆ ವಲಸೆ ಹೋದ ಅನೇಕ ವಲಸಿಗರಲ್ಲಿ ಕನ್ನಡಿಗರು ಮಾತ್ರ ಸ್ವಭಾಷೆಯನ್ನು ಕೆಲವು ಆವರಣಗಳಲ್ಲಿ ಹಾಗೆ ಉಳಿಸಿಕೊಂಡಿರುವ ವಿಶಿಷ್ಟ ಮಹತ್ವದ ಬಗೆಗೆ ಅವರ ಅಧ್ಯಯನ ತಿಳಿಸುತ್ತದೆ. ಜನ್ನಿಫರ್‌ಮೇರಿ ಬಯರ್ (1986) ರವರು ತಮಿಳುನಾಡಿನ ಇತರೆಡೆಗಳಿಂದ ಬೆಂಗಳೂರು ನಗರಕ್ಕೆ ವಲಸೆ ಬಂದು ನೆಲೆಸಿರುವ ಅಯ್ಯಾಂಗಾರ್, ಮೊದಲಿಯಾರ್ ಮತ್ತು ಕ್ರಿಶ್ಚಿಯನ್ ತಮಿಳಿಗರಲ್ಲಿ ಮೊದಲಿಯಾರ್ ತಮಿಳರಲ್ಲಿ ಮಾತ್ರ ಹೆಚ್ಚಿನ ತಮಿಳು ಭಾಷಾ ಸಂಗೋಪನೆ ಇದ್ದರೆ, ತಮಿಳು ಅಯ್ಯಾಂಗಾರ್ ಮತ್ತು ಕ್ರಿಶ್ಚಿಯನ್ ತಮಿಳರು ಕನ್ನಡಕ್ಕೆ ಪಲ್ಲಟವಾಗುತ್ತಿರುವ ಸಂಗತಿಯೊಂದನ್ನು ತಿಳಿಸಿದ್ದಾರೆ.

ಶ್ಯಾಮ್‌ಮೋಹನ್‌ಲಾಲ್ (1986) ರ ಅಧ್ಯಯನವೂ ಸಹ ಬೆಂಗಳೂರಿಗೆ ವಲಸೆ ಬಂದಿರುವ ತಮಿಳರಲ್ಲಿ ಭಾಷಾ ಪಲ್ಲಟ ಮತ್ತು ಭಾಷಾ ಮಿಶ್ರಣ ಬಗೆಗಿನ ಅಂಶಗಳು ಸಮಾಜೋಭಾಷಿಕ ಹಿನ್ನೆಲೆಯಲ್ಲಿ ಕಾರಣವಾದ ಭಾಷಾ ಸಂಗೋಪನೆ ಮತ್ತು ಭಾಷಾ ಪಲ್ಲಟದ ಬಗೆಗೆ ತಿಳಿಸುತ್ತವೆ. ಆರ್.ಎಸ್.ರಂಗೀಲ (1986) ರ ಅಧ್ಯಯನದಲ್ಲಿ ದೆಹಲಿಯಲ್ಲಿರುವ ಪಂಜಾಬಿ ಸಿಖ್‌ರು ಪಂಜಾಬಿಯನ್ನು ಉಳಿಸಿ ಕೊಂಡಿದ್ದರೆ, ಮಧ್ಯಮವರ್ಗದ ದೆಹಲಿ ಪಂಜಾಬಿಗಳು ಪಂಜಾಬಿ ಭಾಷೆಗೆ ಪಲ್ಲಟಗೊಂಡಿದ್ದನ್ನು ಸೂಚಿಸಲಾಗಿದೆ. ಎರಡನೆಯ ತಲೆಮಾರಿನಲ್ಲಿ ಪಂಜಾಬಿ ಹಿಂದುಗಳು ಹಿಂದಿ, ಇಂಗ್ಲಿಶ್‌ಗೆ ಪಲ್ಲಟಗೊಳ್ಳುತ್ತಿದ್ದಾರೆಂಬ ಅಂಶವನ್ನು ತಿಳಿಸಲಾಗಿದೆ. ಟಿ.ಎಸ್.ಸತ್ಯನಾಥ್ (1982) ಅವರು ದೆಹಲಿ ಕನ್ನಡಿಗರನ್ನು ಕುರಿತಂತೆ ಮಾಡಿರುವ ಅಧ್ಯಯನದಲ್ಲಿ ದೆಹಲಿಯಲ್ಲಿರುವ ಕನ್ನಡಿಗರು ಮನೆ ಮತ್ತು ಒಳಗುಂಪುಗಳಲ್ಲಿ ಕನ್ನಡವನ್ನು ಸಾಂಸ್ಥಿಕವಲ್ಲದ ಆವರಣಗಳಲ್ಲಿ ಹಿಂದಿಯನ್ನೂ, ಸಂಸ್ಥೆಗಳಲ್ಲಿ ಇಂಗ್ಲಿಶ್‌ನ್ನು ಬಳಸುತ್ತಿದ್ದು, ಹೊಸ ತಲೆಮಾರಿನಲ್ಲಿ ಕನ್ನಡ ಬಳಸುವ ಮನೆ ಆವರಣದಲ್ಲೂ ಸಹ ಇಂಗ್ಲಿಶ್ ಭಾಷೆ ಬಳಕೆಯಾಗಲು ಪ್ರಾರಂಭಿಸಿದೆ ಯಾದ್ದರಿಂದ ಇದು ದೆಹಲಿಯಲ್ಲಿನ ಕನ್ನಡಿಗರಲ್ಲಾಗುತ್ತಿರುವ ಭಾಷಾ ಪಲ್ಲಟವನ್ನು ತಿಳಿಸುತ್ತದೆ.

ಇಂದು ಭಾರತದ ಸಂದರ್ಭದಲ್ಲಿ ಸಿಂಧಿ ಭಾಷೆಗೆ ಇರುವ ಮಿತವಾದ ಸಮಾಜೋಭಾಷಿಕ ಕಾರ್ಯಗಳಿಂದಾಗಿ ಸಿಂಧಿ ಭಾಷೆ ಕೇವಲ ಒಳಗುಂಪುಗಳಲ್ಲಿ ಹೆಚ್ಚಾಗಿ ಬಳಕೆಯಾಗುತ್ತಿದೆ. ಇದನ್ನು ಬಳಸುತ್ತಿರುವವರು ಕೇವಲ ಮಹಿಳೆಯರು ಮತ್ತು ವೃದ್ಧರು. ಬಹಳಷ್ಟು ಹೊಸ ತಲೆಮಾರಿನಲ್ಲಿ ಸಿಂಧಿ ಮಿತ ಆವರಣಗಳಲ್ಲಿ ಮಾತ್ರ ಬಳಕೆಯಾಗುತ್ತಿದೆ. ಮನೆ ಮತ್ತು ಸಮಾನ ಸಾಂಸ್ಕೃತಿಕ ಗುಂಪುಗಳಲ್ಲಿ ಶಿಕ್ಷಿತರು ತಮ್ಮ ಸಾಕ್ಷರತೆಯ ಕೌಶಲಗಳನ್ನು ಸಿಂಧಿ ಭಾಷೆಯಲ್ಲಿ ಕಳೆದುಕೊಂಡು ಹಿಂದಿ ಮತ್ತು ಇಂಗ್ಲಿಶ್ ಭಾಷೆಯಲ್ಲಿ ಪಡೆದುಕೊಳ್ಳುತ್ತಿರುವುದು. ಇದರ ಪರಿಣಾಮವಾಗಿ ಭಾರತದಲ್ಲಿ ಸಿಂಧಿಭಾಷೆ ಬದಲಾಗುತ್ತಿದೆ. ಒಂದೆಡೆ ಸಿಂಧಿ ಭಾಷಾ ಪ್ರಭೇದಗಳು ಬೇರೆ ಭಾಷೆಗಳೊಂದಿಗೆ ಸೇರಿ ಹೋಗುತ್ತಿರುವುದು, ಇತರ ಭಾರತೀಯ ಭಾಷೆಗಳ ಸಂಪರ್ಕದಿಂದ ಸಿಂಧಿ ತನ್ನ ಭವಿಷ್ಯವನ್ನು ಕಳೆದುಕೊಳ್ಳುತ್ತಿರುವುದು. ಸಿಂಧಿ ಬಳಕೆಯಾಗುವ ಆವರಣಗಳಲ್ಲಿ ಇತರ ಭಾಷೆಗಳು ಸಿಂಧಿಯ ಜಾಗವನ್ನು ತೆರವು ಮಾಡುತ್ತಿರುವುದರಿಂದ ಸಿಂಧಿಯಂತಹ ಭಾಷೆ ಬೇಗ ವಿನಾಶದ ಅಂಚಿಗೆ ಸರಿಯುತ್ತದೆ ಎಂಬ ಅಂಶವನ್ನು ಸಿ.ಜೆ.ದಾಸ್‌ವಾನಿ ಮತ್ತು ಎಸ್.ಪ್ರಾಚನಿ 1978 ಅಧ್ಯಯನ ತಿಳಿಸುತ್ತದೆ. ಇದಲ್ಲದೆ ಉರ್ದು ಭಾಷಾ ಅಲ್ಪಸಂಖ್ಯಾತರಲ್ಲಿ ಆಗಿರುವ ಜನಸಂಖ್ಯಾ ಹಂಚಿಕೆಯಿಂದಾಗಿ ತಲೆಮಾರುಗಳಲ್ಲಿ ಉರ್ದು ಭಾಷಿಕರು ಉರ್ದು ಭಾಷೆಯಲ್ಲಿ ಸಾಕ್ಷರತೆಯ ಕೌಶಲಗಳನ್ನು ಕಳೆದುಕೊಂಡು ಕನ್ನಡ ಅಥವಾ ಇಂಗ್ಲಿಶ್ ಭಾಷೆಯಲ್ಲಿ ಶಿಕ್ಷಣವನ್ನು ಪಡೆಯುವಲ್ಲಿ ಉರ್ದುಭಾಷೆ ಸಾಕ್ಷರತೆಯ ಕೌಶಲವನ್ನು ಕಳೆದುಕೊಂಡು ಆಡುಭಾಷೆಯಾಗುತ್ತಿದೆ. ಸಮಾಜೋಭಾಷಿಕ ಅಂಶಗಳು ಅವರ ಭಾಷಾ ಸಂಗೋಪನೆ, ಪಲ್ಲಟ ಮತ್ತು ಭಿನ್ನ ಗುರುತುಗಳನ್ನು ಉಳಿಸಿಕೊಳ್ಳುವಲ್ಲಿ ಕಾರಣವಾಗುವಂತೆ ಕಾಣುತ್ತಿದೆ.

ಎಚ್.ಆರ್.ಡುವ (1986) ರ ಅಧ್ಯಯನದಲ್ಲಿ ಉರ್ದು ಭಾಷೆಗೂ ಇರುವ ಸಮಾಜೋಭಾಷಿಕ ಕಾರ್ಯಗಳ ಮಿತಿಯಿಂದಾಗಿ ತನ್ನ ಚಹರೆಯನ್ನು ಉಳಿಸಿಕೊಳ್ಳುವಲ್ಲಿ ಮತ್ತು ಪಲ್ಲಟಗೊಳ್ಳುವಲ್ಲಿನ ಅಂಶಗಳನ್ನು ಮೈಸೂರು ನಗರದಲ್ಲಿ ದಖ್ಖನಿ ಉರ್ದು, ಶಿಷ್ಟ ಉರ್ದು, ಕನ್ನಡ ಭಾಷೆಯ ಬಳಕೆಯ ಸಂದರ್ಭಗಳನ್ನು ಕ್ಷೇತ್ರಕಾರ್ಯದ ಮೂಲಕ ಗಮನಿಸುವಾಗ ಮೂರು ಭಾಷೆಗಳನ್ನು ಬಳಸುವ ಭಾಷಿಕರಲ್ಲಿ ಲಿಂಗಾಧಾರಿತ ಭಿನ್ನತೆಗಳಿರುವುದರ ಜೊತೆಗೆ ಸಮಾಜೋಭಾಷಿಕ ಅಂಶಗಳು ಭಿನ್ನ ಭಾಷೆಯ ಬಳಕೆಗೆ ಕಾರಣವಾಗಿರುವ ಅಂಶವನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ಕನ್ನಡದ ಸಂದರ್ಭದಲ್ಲಿ ಎಂ.ಟಿ.ರತಿ (1993) ಯವರು ಕೊಡಗು ಜಿಲ್ಲೆಯ ಬಹುಭಾಷಿಕತೆಯನ್ನು ಕುರಿತಂತೆ ಮಾಡಿರುವ ಅಧ್ಯಯನದಲ್ಲಿ ಕನ್ನಡ ಭಾಷೆಗೆ ಕೊಡವ, ಮಲೆಯಾಳಂ, ತುಳು ಭಾಷಿಕರಲ್ಲಿ ಆಗುತ್ತಿರುವ ಭಾಷಾ ಪಲ್ಲಟಗಳ ಜೊತೆಗೆ ಈ ಭಾಷಿಕರು ಸ್ವಭಾಷೆಗಳನ್ನು ಉಳಿಸಿಕೊಳ್ಳುವಲ್ಲಿ ಮಾಡಿಕೊಳ್ಳುತ್ತಿರುವ ಸಂಗೋಪನಾ ತಂತ್ರಗಳನ್ನು ಕುರಿತಂತಹ ಹಲವು ಸಂಗತಿಗಳನ್ನು ತಿಳಿಯಬಹುದಾಗಿದೆ. ಕೊಡಗಿನಲ್ಲಿ ಕನ್ನಡ ಪ್ರತಿಷ್ಠಿತ

ಭಾಷೆಯಾಗಿರುವುದರಿಂದ ಕನ್ನಡ ಸ್ವಭಾಷಿಕರು ಮಾತ್ರ ತಮ್ಮ ಮನೆಮಾತನ್ನು ಬಿಟ್ಟು ಇತರೆ ಭಾಷೆಗಳನ್ನು ಬಳಸುವುದಿಲ್ಲ. ಆದರೆ ವಲಸಿಗ ವರ್ಗಗಳಾದ ಮಲೆಯಾಳಂ ಹಾಗೂ ತುಳು ಸ್ವಭಾಷಿಕರಲ್ಲಿ ಹೆಚ್ಚಿನವರು ಇತರೆ ಭಾಷೆಗಳನ್ನು ಬಳಸುವುದರಿಂದ ಈ ಎರಡೂ ವರ್ಗಗಳವರು ಕ್ರಮೇಣವಾಗಿ ತಮ್ಮ ಸ್ವಭಾಷೆಯನ್ನು ಕಳೆದುಕೊಳ್ಳುತ್ತಿದ್ದಾರೆ. ಅದರಲ್ಲೂ ಪ್ರತ್ಯೇಕ ಪ್ರಾದೇಶಿಕತೆ, ಆರ್ಥಿಕ ಸ್ವತಂತ್ರತೆಯನ್ನು ಹೊಂದಿಲ್ಲದ ತಮ್ಮ ತಾಯ್ನಾಡಿನ ಸಂಪರ್ಕವನ್ನು ಕಡಿದುಕೊಂಡಿರುವವರು ಹೆಚ್ಚಾಗಿ ತಮ್ಮ ಸ್ವಭಾಷೆಯಿಂದ ಪ್ರತಿಷ್ಠಿತ ಭಾಷೆಯ ಕಡೆಗೆ ಪಲ್ಲಟಗೊಳ್ಳುತ್ತಿದ್ದಾರೆ. ಇದರ ನಡುವೆಯೂ ಕೆಲವು ಕಡೆಗಳಲ್ಲಿ ಭಾಷಾ ಅನನ್ಯತೆಯನ್ನು ಕಾಪಾಡಿಕೊಂಡಿರುವ ಅಂಶಗಳು ಸಹ ವ್ಯಕ್ತವಾಗಿವೆ.

ಬಳ್ಳಾರಿ ಪರಿಸರದಲ್ಲಿ ಅನೇಕ ಶತಮಾನಗಳಿಂದಲೂ ಕನ್ನಡ - ತೆಲುಗು ದ್ವಿಭಾಷಾ ಸಂದರ್ಭವಿರುವುದು ಚಾರಿತ್ರಿಕ ಆಧಾರಗಳಿಂದ ತಿಳಿದು ಬರುತ್ತದೆ. ಆದ್ದರಿಂದ ಅನೇಕ ವರ್ಷಗಳಿಂದಲೂ ಕನ್ನಡಿಗರು ಮತ್ತು ತೆಲುಗರು ಇಲ್ಲಿ ಒಟ್ಟಿಗೆ ಬದುಕುತ್ತಿರುವುದು ಸಹಜವಾಗಿದೆ. ಯಾವುದೇ ರಾಜಕೀಯ ಗಡಿಗಳನ್ನು ಮೀರಿಯೂ ಜನಸಮುದಾಯದಲ್ಲಿ ದ್ವಿಭಾಷಿಕತೆಯು ನೆಲೆಗೊಂಡಂತಿದೆ. ಶತಮಾನಗಳ ದ್ವಿಭಾಷಾ ಸಂದರ್ಭಗಳಲ್ಲಿ ಒಟ್ಟಿಗೆ ಬದುಕುತ್ತಿದ್ದ ಭಾಷಿಕರು ಪ್ರಾಂತ ವಿಘಟನೆಯ ಕಾಲದಲ್ಲಿ ಹರಿದು ಹಂಚಿಹೋಗಬೇಕಾಯಿತು. ಭಾಷಿಕರ ಮಧ್ಯೆ ರಾಜಕೀಯ ಗಡಿಗಳನ್ನು ಹಾಕಬಹುದೇ ವಿನಹ ಭಾಷಿಕ ಗಡಿಗಳನ್ನು ಹಾಕಲು ಸಾಧ್ಯವಿಲ್ಲವಾದ್ದರಿಂದ ಮನುಷ್ಯನ ಜೀವನಾವಶ್ಯಕತೆಯಲ್ಲಿ ರಾಜಕೀಯ ಗಡಿಗಳನ್ನು ಮೀರಿಯೂ ಸಮಾಜದಲ್ಲಿ ದ್ವಿಭಾಷಿಕತೆ ಪ್ರವೃತ್ತವಾಗಿರಬಹುದು. ಬಳ್ಳಾರಿ ಜಿಲ್ಲೆಯ ವಿಘಟನೆಯ ನಂತರದಲ್ಲಿ ಆಂಧ್ರಪ್ರದೇಶಕ್ಕೆ ಹರಿದು ಹಂಚಿಹೋದ ತೆಲುಗು ಭಾಷಿಕರು ಕಳೆದ ಹಲವು ದಶಕಗಳಲ್ಲಿ ಬಳ್ಳಾರಿ ಜಿಲ್ಲೆಯ ತುಂಗಭದ್ರ ಆಣೆಕಟ್ಟು ನಿರ್ಮಾಣ ಸಂದರ್ಭದಲ್ಲಿ, ಬಳ್ಳಾರಿ ಜೆಲ್ಲೆಯ ಪೂರ್ವಭಾಗದಲ್ಲಿ ಉಂಟಾದ ಔದ್ಯಮೀಕರಣ ಪ್ರಕ್ರಿಯೆಯಿಂದಾಗಿ, ವೈವಾಹಿಕ ಕಾರಣಗಳಿಂದಾಗಿ, ಇನ್ನು ಹಲವು ಕಾರಣಗಳಿಂದಾಗಿ ಮತ್ತೆ ಇಲ್ಲಿ ಬಂದು ನೆಲೆನಿಲ್ಲುವ ಅವಶ್ಯಕತೆಗಳು ಉಂಟಾದವು. ಜೊತೆಗೆ ಬಳ್ಳಾರಿಯ ವಿಘಟನೆಯಲ್ಲಿ ತೆಲುಗು ಭಾಷಿಕರೆಲ್ಲರೂ ಆಂಧ್ರಪ್ರದೇಶಕ್ಕೆ ಹಂಚಿಹೋಗಲಿಲ್ಲ. ಹಂಚಿ ಹೋದದ್ದು ಪ್ರದೇಶಗಳಷ್ಟೆ. ಆದ್ದರಿಂದ ಅನೇಕ ತೆಲುಗು ಭಾಷಿಕರು ಬಹುಸಂಖ್ಯಾತ ಕನ್ನಡಿಗರೊಂದಿಗೆ ಬದುಕುವ ಸನ್ನಿವೇಶಗಳಿರುವುದರಿಂದ ಇಲ್ಲಿ ಕನ್ನಡ - ತೆಲುಗು ದ್ವಿಭಾಷಿಕತೆಯ ಸಂದರ್ಭಗಳು ಇಂದಿಗೂ ಪ್ರಸ್ತುತವಾಗಿವೆ.

ಇಂತಹ ಸಂದರ್ಭದಲ್ಲಿ ಸಮಾಜದಲ್ಲಿ ಆಗುತ್ತಿರುವ ಹಲವು ಬದಲಾವಣೆಗಳು, ಸರ್ಕಾರದ ಆಡಳಿತಾತ್ಮಕ ನಿರ್ಧಾರಗಳು ಇಪ್ಪತ್ತನೆಯ ಶತಮಾನದ ಅಂಚಿನಲ್ಲಾದ ಹಲವು ರೀತಿಯ ಬದಲಾವಣೆಗಳಿಂದಾಗಿ ಮತ್ತು ಜಾಗತೀಕರಣ ಪ್ರಕ್ರಿಯೆಯಿಂದಾಗಿ ಯಾವ ರೀತಿಯ ಬದಲಾವಣೆಗಳು, ಪರಿಣಾಮಗಳು ಇಲ್ಲಿನ ದ್ವಿಭಾಷಾ ಸಂದರ್ಭದಲ್ಲಿ

ಉಂಟಾಗುತ್ತಿವೆ. ಅಥವಾ ಭಾಷಿಕರಲ್ಲಿ ಮತ್ತೊಂದು ಭಾಷೆಯ ಬಗೆಗಿನ ಮನೋಭಾವಗಳು ಯಾವ ರೀತಿಯ ಬದಲಾವಣೆಗಳಿಗೆ, ಪರಿಣಾಮಗಳಿಗೆ ಎಡೆಮಾಡಿಕೊಟ್ಟಿದೆ ಎನ್ನುವುದು ಆಸಕ್ತಿದಾಯಕವಾಗಿದೆ.

ಹಲವು ಕಾರಣಗಳಿಗಾಗಿ ಉಂಟಾಗಿರುವ ಕನ್ನಡ - ತೆಲುಗು ದ್ವಿಭಾಷಿಕತೆಯಲ್ಲಿ ಭಾಷಿಕರ ಕಲಿಕೆ - ಬಳಕೆಯ ನೆಲೆಯಲ್ಲಿ ಭಿನ್ನತೆಗಳಿರುವ ಅಂಶಗಳನ್ನು ಇದಕ್ಕೆ ಕಾರಣವಾಗಿರುವ ಸಾಮಾಜಿಕ ಭಿನ್ನಾಂಶಗಳನ್ನು ಕುರಿತಂತೆ ಹಿಂದಿನ ಅಧ್ಯಾಯಗಳಲ್ಲಿ ತಿಳಿದುಕೊಳ್ಳಲಾಗಿದೆಯಾದರೂ ಇದಕ್ಕೆ ಪೂರಕವಾಗಿ ದ್ವಿಭಾಷಿಕರಲ್ಲಾಗುತ್ತಿರುವ ಭಾಷಾ ಪಲ್ಲಟ ಮತ್ತು ಸಂಗೋಪನೆಯ ನೆಲೆಗಳನ್ನು ಕುರಿತಂತೆ ಕೆಲವು ವಿಚಾರಗಳನ್ನು ಮುಂದಿಡುವ ಅವಶ್ಯವಿದೆ. ಏಕೆಂದರೆ ದ್ವಿಭಾಷಾ ಪರಿಸರಗಳಲ್ಲಿ ಭಾಷಿಕರ ಭಾಷಾ ಮನೋಭಾವಗಳು ಒಂದು ಭಾಷೆಯ ಅಳಿವು - ಉಳಿವಿಗೆ ಕಾರಣವಾಗಿರುತ್ತವೆ. ಆದ್ದರಿಂದ ಪ್ರಸ್ತುತ ದ್ವಿಭಾಷಿಕರಲ್ಲಿ ಆಗುತ್ತಿರುವ ಭಾಷಾ ಪಲ್ಲಟಗಳು ಮತ್ತು ಸಂಗೋಪನೆಗಳಿಂದ ಇದೊಂದು ಸ್ಥಿರ ಅಥವಾ ಅಸ್ಥಿರ ದ್ವಿಭಾಷಾ ಸನ್ನಿವೇಶಗಳಲ್ಲಿ ಯಾವ ಸನ್ನಿವೇಶವನ್ನು ಹೆಚ್ಚಿನ ಸಂದರ್ಭಗಳಲ್ಲಿ ಉಳಿಸಿಕೊಳ್ಳುತ್ತದೆ ಎಂಬ ಸಂಗತಿಗಳನ್ನು ಕುರಿತಂತೆ ತಿಳಿಯುವ ಅಗತ್ಯವಿದೆ. ಕ್ಷೇತ್ರಕಾರ್ಯದಲ್ಲಿ ದೊರೆತ ಮಾಹಿತಿಯಿಂದ ಕೆಲವು ನಕ್ಷೆಗಳ ಮೂಲಕ ದ್ವಿಭಾಷಿಕರಲ್ಲಾಗುತ್ತಿರುವ ಪಲ್ಲಟಗಳನ್ನು ತೋರಿಸಲಾಗಿದೆ.

ನಕ್ಷೆ-1

ಕನ್ನಡಿಗರು ದ್ವಿಭಾಷಿಕರಾಗುತ್ತಿರುವ ಪ್ರಮಾಣ
ತಲೆಮಾರುಗಳಲ್ಲಿ ಇಳಿಮುಖವಾಗುತ್ತಿರುವುದು




■ ಮಾತು ಗಂಡು □ ಗ್ರಹಿಕೆ ಗಂಡು □ ಮಾತು ಹೆಣ್ಣು □ ಗ್ರಹಿಕೆ ಹೆಣ್ಣು

## ನಕ್ಷೆ-2
## ತೆಲುಗು ಭಾಷಿಕರು ದ್ವಿಭಾಷಿಕರಾಗುತ್ತಿರುವ ಪ್ರಮಾಣ ತಲೆಮಾರುಗಳಲ್ಲಿ ಏರುತ್ತಿರುವುದು



ನಕ್ಷೆ-3

ತಲೆಮಾರುಗಳಲ್ಲಿ ಬದಲಾಗುತ್ತಿರುವ ತೆಲುಗು ಭಾಷೆಯ ಸಾಕ್ಷರತೆಯ ಕೌಶಲಗಳು




ನಕ್ಷೆ-4
ತಲೆಮಾರುಗಳಲ್ಲಿ ಬದಲಾಗುತ್ತಿರುವ ಸಾಕ್ಷರತೆಯ ಕೌಶಲಗಳು
ಜನಸಂಖ್ಯೆ ಶೇಕಡಾವಾರುಗಳಲ್ಲಿ
ತಲೆಮಾರುಗಳು
0
10
20
30
40
50
60
70
80
90
1
2
3
29.2
50.1
82.2
45
55.1
85.6

ನಕ್ಷೆ-5
ಲಿಂಗಾಧಾರಿತವಾಗಿ ತಲೆಮಾರುಗಳಲ್ಲಿ ಉಂಟಾಗಿರುವ ತೆಲುಗಿನ ಸಾಕ್ಷರತೆಯ ಕೌಶಲಗಳು



ನಕ್ಷೆ-6

ಲಿಂಗಾಧಾರಿತವಾಗಿ ತಲೆಮಾರುಗಳಲ್ಲಿ ಉಂಟಾಗಿರುವ ಕನ್ನಡದ ಸಾಕ್ಷರತೆಯ ಕೌಶಲಗಳು



ಹಿಂದಿನ ಅಧ್ಯಾಯಗಳಲ್ಲಿ ಕನ್ನಡಿಗರಿಗಿಂತ ತೆಲುಗು ಭಾಷಿಕರಿಗೆ ಕನ್ನಡವನ್ನು ಕಲಿತು ದ್ವಿಭಾಷಿಕರಾಗುವ ಅವಶ್ಯಕತೆಗಳಿರುವುದನ್ನು ಗಮನಿಸಲಾಗಿದೆ. ಆದಕಾರಣ ಭಾಷಿಕರಲ್ಲಾಗುತ್ತಿರುವ ಭಾಷಾ ಪಲ್ಲಟ ಮತ್ತು ಭಾಷಾ ಸಂಗೋಪನೆಯನ್ನು ಕುರಿತಂತೆ ಮೌಖಿಕ ಮತ್ತು ಸಾಕ್ಷರತೆಯ ನೆಲೆಗಳಲ್ಲಿ, ಭಾಷಾ ಬಳಕೆಯ ಆವರಣಗಳಲ್ಲಿ, ಶೈಕ್ಷಣಿಕ ಸಂದರ್ಭಗಳಲ್ಲಿ ಆಗುತ್ತಿರುವ ಬದಲಾವಣೆಗಳನ್ನು ಇಲ್ಲಿ ಗಮನಿಸಿದಾಗ ಭಾಷಾ ಕೌಶಲಗಳ ನೆಲೆಯಲ್ಲಿ ಮತ್ತು ಭಾಷಾ ಬಳಕೆಯ ನೆಲೆಗಳಲ್ಲಿ ದ್ವಿಭಾಷಿಕರಲ್ಲಾಗುತ್ತಿರುವ ಭಾಷಾ ಪಲ್ಲಟ ಮತ್ತು ಸಂಗೋಪನೆಯ ನೆಲೆಗಳನ್ನು ಕುರಿತಂತೆ ಕೆಲವು ಅಂಕಿ - ಅಂಶಗಳ ಆಧಾರಗಳಿಂದ ಕಾಣುತ್ತಿರುವ ಸಂಗತಿಗಳು ನಕ್ಷೆ - 1 ರಲ್ಲಿ ಕಾಣುತ್ತಿರುವಂತೆ ಕನ್ನಡಿಗರು ತೆಲುಗು ಭಾಷೆಯನ್ನು ಕಲಿತು ದ್ವಿಭಾಷಿಕರಾಗುವ ಪ್ರಮಾಣ ತಲೆಮಾರುಗಳಲ್ಲಿ ಇಳಿಮುಖವಾಗುತ್ತಿದೆ. ಇದನ್ನು ಲಿಂಗಾಧಾರಿತವಾಗಿ ನೋಡಿದಾಗಲೂ ಸಹ ಇಳಿಮುಖವಾಗುತ್ತಿರುವುದು ಕಾಣುತ್ತಿದೆ. ತಲೆಮಾರಿನಿಂದ ತಲೆಮಾರಿಗೆ ಮೌಖಿಕ ಕೌಶಲಗಳು ಇಳಿಮುಖವಾಗುತ್ತಿದ್ದು ಹೆಚ್ಚಾಗಿ ಗ್ರಹಿಕೆಯ ನೆಲೆಯಲ್ಲಿ ತೆಲುಗು ಭಾಷೆಯ ಕೌಶಲಗಳನ್ನು ಕನ್ನಡಿಗರು ಪಡೆದುಕೊಂಡಿದ್ದಾರೆ. ಆದರೆ ಮೌಖಿಕ ನೆಲೆಗಳಲ್ಲಿ ತೆಲುಗು ಭಾಷೆಯನ್ನು ಬಳಸುವ ಅವಶ್ಯಕತೆಗಳು ಕಡಿಮೆ ಆಗುತ್ತಿರುವುದು ಕಾಣುತ್ತಿದೆ. ಕಾರಣ ಬಳ್ಳಾರಿ ಏಕೀಕರಣಕ್ಕೆ ಮುಂಚಿನ ದಿನಗಳಲ್ಲಿ ಕನ್ನಡಿಗರೂ ಸಹ ತೆಲುಗನ್ನು ಕಲಿತು ಬಳಸುವ ಅವಕಾಶಗಳಿತ್ತಲ್ಲದೆ ತೆಲುಗಿನಲ್ಲೆ ಸಾಕ್ಷರತೆಯನ್ನು ಪಡೆಯುವ ಸಂದರ್ಭಗಳು ಇದ್ದಂತಹ ಸಂಗತಿಗಳು ಚರಿತ್ರೆಯ ಪುಟಗಳಿಂದ, ಅನೇಕ ಹಿರಿಯ ತಲೆಮಾರಿನ ಪ್ರತಿವಕ್ತರಿಂದ ತಿಳಿಯಲಾಗಿದೆ. ಆದರೆ ಏಕೀಕರಣೋತ್ತರದಲ್ಲಿ ಮೊದಲಿದ್ದ ಪರಿಸ್ಥಿತಿಗಳು ಬದಲಾಗಿವೆ. ತೆಲುಗರೇ ಕನ್ನಡವನ್ನು ಕಲಿತು ಬಳಸುವ ಹೆಚ್ಚಿನ ಸಂದರ್ಭಗಳು ನಿರ್ಮಾಣವಾಗಿರುವುದರಿಂದ ಕನ್ನಡಿಗರಿಗೆ ತೆಲುಗನ್ನು ಕಲಿತು ಬಳಸುವ ಅವಶ್ಯಕತೆಗಳು ತಲೆಮಾರಿನಿಂದ ತಲೆಮಾರಿಗೆ ಇಳಿಮುಖವಾಗುತ್ತಿದೆ. ಜೊತೆಗೆ ಕನ್ನಡಿಗರಲ್ಲಿ ಪುರುಷರು ಹೊರ ಆವರಣಗಳಲ್ಲಿ ತೆಲುಗು ಭಾಷಿಕರ ಜೊತೆ ವ್ಯವಹರಿಸುವುದರಿಂದ ಮೌಖಿಕ ನೆಲೆಯಲ್ಲಿ ಸ್ವಲ್ಪಮಟ್ಟಿಗೆ ತೆಲುಗನ್ನು ಬಳಸುವ ಅವಶ್ಯಕತೆ ಇದೆ. ಆದರೆ ಮಹಿಳೆಯರು ಬಹುಪಾಲು ಗ್ರಹಿಕೆಯ ನೆಲೆಯಲ್ಲಿ ಮಾತ್ರ ತೆಲುಗು ಭಾಷೆಯ ಕೌಶಲವನ್ನು ಪಡೆದಿರುತ್ತಾರೆ. ಕಾರಣ ತೆಲುಗು ಭಾಷೆಯ ಸಿನಿಮಾ, ಧಾರವಾಹಿ ಇತ್ಯಾದಿ ಕಾರ್ಯಕ್ರಮಗಳನ್ನು ನೋಡುವುದರಿಂದ ತೆಲುಗು ಭಾಷೆಯ ಗ್ರಹಿಕೆಯ ನೆಲೆಗಳು ಹೆಚ್ಚು ಇದ್ದಂತೆ ತೆಲುಗನ್ನು ಕಲಿತು ಬಳಸುವ ಅವಶ್ಯಕತೆಗಳು ಕನ್ನಡಿಗ ಮಹಿಳೆಯರಿಗೆ ಇಲ್ಲ. ಇದಕ್ಕೆ ವಿರುದ್ಧವಾಗಿ ನಕ್ಷೆ - 2 ನ್ನು ನೋಡಿದರೆ ತೆಲುಗು ಭಾಷಿಕರು ಕನ್ನಡವನ್ನು ಕಲಿತು ದ್ವಿಭಾಷಿಕರಾಗುತ್ತಿರುವ ಪ್ರಮಾಣ ತಲೆಮಾರುಗಳಲ್ಲಿ ಏರುತ್ತಿದೆ. ಲಿಂಗಾಧಾರಿತವಾಗಿ ನೋಡಿದಾಗಲೂ ಸಹ ಪುರುಷರಲ್ಲಿ ಮತ್ತು ಮಹಿಳೆಯರಲ್ಲಿ ದ್ವಿಭಾಷಿಕರಾಗುತ್ತಿರುವ ಪ್ರಮಾಣ ಮೊದಲ ತಲೆಮಾರುಗಳಿಗಿಂತ ಎರಡು ಮತ್ತು ಮೂರನೆಯ ತಲೆಮಾರುಗಳಲ್ಲಿ ಹೆಚ್ಚಾಗಿದೆ. ಪುರುಷರಿಗೆ ಹೋಲಿಸಿದಲ್ಲಿ ಮಹಿಳೆಯರು ಕನ್ನಡದಲ್ಲಿ ಗ್ರಹಿಕೆಯ ಕೌಶಲವನ್ನು ಹೆಚ್ಚಾಗಿ ಪಡೆದುಕೊಂಡಿದ್ದಾರೆ. ಪುರುಷರಲ್ಲಿ ಕನ್ನಡದ ಮೌಖಿಕ ಕೌಶಲಗಳೆರಡೂ ತಲೆಮಾರುಗಳಲ್ಲಿ ಹೆಚ್ಚಾಗಿದೆ. ಭಾರತದಂಥ

ದೇಶದಲ್ಲಿ ದ್ವಿಭಾಷಿಕತೆ ಮತ್ತು ಬಹುಭಾಷಿಕತೆಗಳು ಸಮುದಾಯಗಳ ನಿತ್ಯ ವ್ಯವಹಾರದ ಭಾಗವಾಗಿರುವುದರಿಂದ ಅನೇಕ ಭಾಷೆಗಳನ್ನು ಭಾಷಿಕರು ಗ್ರಹಿಕೆಯ ನೆಲೆಗಳಲ್ಲಿ ಪಡೆದಿರುತ್ತಾರೆ. ಆದರೆ ಭಾಷೆಗಳನ್ನು ಕಲಿತು ಬಳಸುವ ಅವಶ್ಯಕತೆಗಳು ಒದಗಿಬರದೇ ಇರಬಹುದು. ಜೊತೆಗೆ ಸಮೂಹ ಮಾಧ್ಯಮಗಳು, ಧಾರ್ಮಿಕ ಆಚರಣೆಗಳು, ಹಬ್ಬಗಳು, ಶಿಕ್ಷಣ ಸಂಸ್ಥೆಗಳು, ಸಿನಿಮಾ, ರೇಡಿಯೋ, ಟಿ.ವಿ., ಸಾಂಸ್ಕೃತಿಕ ಆಚರಣೆಗಳು, ಇವೆಲ್ಲವೂ ಒಂದಿಲ್ಲೊಂದು ರೀತಿಯಲ್ಲಿ ಅನೇಕ ಭಾಷೆಗಳನ್ನು ಕಿವಿಯ ಮೇಲೆ ಹಾಕುತ್ತಿರುತ್ತವೆ. ಆದ್ದರಿಂದ ಭಾಷೆಗಳನ್ನು ಕೇಳಿಸಿಕೊಳ್ಳುವ ಸಂದರ್ಭಗಳಿರುವುದರಿಂದ ಅನೇಕ ಭಾಷೆಗಳನ್ನು ಗ್ರಹಿಸುತ್ತಲೆ ದ್ವಿಭಾಷಿಕರೂ ಬಹುಭಾಷಿಕರೂ ಆಗುವ ನೆಲೆಗೆ ಭಾಷಿಕರು ತಲುಪುತ್ತಾರೆ.

ತೆಲುಗು ಭಾಷಿಕರಲ್ಲಿ ಹೆಚ್ಚಿನ ಭಾಷಿಕರು ವಲಸಿಗರಾದ ಕಾರಣ ಇಲ್ಲಿನ ಸಾಮಾಜಿಕ ಪರಿಸರದ ಭಾಷೆಯನ್ನು ಕಲಿತು ಬಳಸುವ ಅವಶ್ಯಕತೆಗಳು ಉಂಟಾಗಿವೆ. ಆದ್ದರಿಂದ ತೆಲುಗರು ಮೊದಲ ತಲೆಮಾರುಗಳಿಗಿಂತ ಹೆಚ್ಚಾಗಿ ಈಗಿನ ತಲೆಮಾರುಗಳಲ್ಲಿ ಕನ್ನಡವನ್ನು ಕಲಿತು ದ್ವಿಭಾಷಿಕರಾಗುತ್ತಿರುವುದು ಕಾಣುತ್ತಿದೆ. ಇದನ್ನು ಲಿಂಗಾಧಾರಿತವಾಗಿ ನೋಡಿದಾಗಲೂ ಸಹ ದ್ವಿಭಾಷಿಕರಾಗುವ ಅವಶ್ಯಕತೆಗಳು ಮಹಿಳೆಯರಲ್ಲಿ ಮತ್ತು ಪುರುಷರಲ್ಲಿ ಏರುತ್ತಿದ್ದು, ಅವಿದ್ಯಾವಂತರಲ್ಲಿ ಕನ್ನಡದ ಸಾಮಾಜಿಕ ಸಂದರ್ಭಗಳಿಗೆ ಒಳಗಾದ ಮಹಿಳೆಯರಲ್ಲಿ ಕೆಲವು ವಿವಾಹಿತ ಮಹಿಳೆಯರಲ್ಲಿ ಗ್ರಹಿಕೆಯ ನೆಲೆಯಲ್ಲಿ ಮಾತ್ರ ಕನ್ನಡವನ್ನು ಪಡೆದುಕೊಂಡಿದ್ದಾರೆ. ಮಾತಿನ ನೆಲೆಯಲ್ಲಿ ಕನ್ನಡವನ್ನು ಕಲಿತು ಬಳಸುವ ಅವಶ್ಯಕತೆಗಳು ಹೆಚ್ಚಿನ ಸಂದರ್ಭದಲ್ಲಿ ಒದಗಿಬರದೇ ಇರುವುದರಿಂದ ಅರೆ ದ್ವಿಭಾಷಿಕರಾಗಿರುವ ಸನ್ನಿವೇಶಗಳು ಇವರಿಗಿದೆ. ಪುರುಷರು ಸಾಮಾಜಿಕ ವ್ಯವಹಾರಗಳಿಗಾಗಿ, ಉದ್ಯೋಗಕ್ಕಾಗಿ, ವ್ಯಾಪಾರ - ವಾಣಿಜ್ಯ, ರಾಜಕೀಯ ಮುಂತಾದ ಕಾರಣಗಳಿಗಾಗಿ ಕನ್ನಡದ ಸಂದರ್ಭದಲ್ಲಿ ವ್ಯವಹರಿಸಬೇಕಾಗಿರುವುದರಿಂದ ಕನ್ನಡವನ್ನು ಕಲಿತು ಬಳಸುವ ಅವಕಾಶಗಳು, ಅಗತ್ಯಗಳು ಹೆಚ್ಚು ಇವೆ.

ಎರಡು ಭಾಷೆಗಳಲ್ಲಿನ ಸಾಕ್ಷರತೆಯಲ್ಲಿ ಉಂಟಾಗುತ್ತಿರುವ ಪಲ್ಲಟಗಳನ್ನು ನೋಡಿದಾಗಲೂ ವ್ಯತ್ಯಾಸಗಳಿರುವುದು ಕಾಣುತ್ತಿದೆ. ನಕ್ಷೆ - 3 ರಲ್ಲಿ ಕಾಣುತ್ತಿರುವಂತೆ ತಲೆಮಾರುಗಳಲ್ಲಿ ತೆಲುಗಿನ ಸಾಕ್ಷರತೆಯ ಅಂತರವಿರುವುದು ಕಾಣುತ್ತಿದೆ. ಲಿಂಗಾಧಾರಿತವಾಗಿ ನೋಡಿದಾಗ ಮಹಿಳೆಯರಲ್ಲಿ ಮೊದಲ ತಲೆಮಾರುಗಳಲ್ಲಿ ಸಾಕ್ಷರತೆಯ ಪ್ರಮಾಣ ಕಡಿಮೆ ಇದ್ದು, ಎರಡು ಮತ್ತು ಮೂರನೆಯ ತಲೆಮಾರುಗಳಲ್ಲಿ ಅದು ಸ್ವಲ್ಪಮಟ್ಟಿಗೆ ಹೆಚ್ಚಾಗಿರುವಂತಿದೆ. ಪುರುಷರಲ್ಲಿ ಮೊದಲ ತಲೆಮಾರುಗಳಲ್ಲಿ ಸಾಕ್ಷರತೆಯ ಪ್ರಮಾಣ ಹೆಚ್ಚಿದ್ದು ಎರಡು ಮತ್ತು ಮೂರನೆ ತಲೆಮಾರಿನಲ್ಲಿ ಕಡಿಮೆಯಾಗುತ್ತಿರುವುದು ಕಾಣುತ್ತಿದೆ. ನಕ್ಷೆ - 4 ರಲ್ಲಿ ಕನ್ನಡದ ಸಾಕ್ಷರತೆಯ ಕೌಶಲಗಳನ್ನು ನೋಡಿದಾಗ ಮೊದಲ ತಲೆಮಾರುಗಳಲ್ಲಿ ಓದು ಬರಹಗಳ ನಡುವಿದ್ದ ಸಾಕ್ಷರತೆಯ ಅಂತರ ಎರಡು ಮತ್ತು

ಮೂರನೆಯ ತಲೆಮಾರುಗಳಲ್ಲಿ ಕಡಿಮೆಯಾಗುತ್ತಾ ಬಂದು, ಕನ್ನಡದಲ್ಲಿ ಸಾಕ್ಷರತೆಯನ್ನು ಪಡೆಯುವುದು ಹೆಚ್ಚಾಗಿರುವುದು ಕಾಣುತ್ತಿದೆ. ಇದನ್ನು ಲಿಂಗಾಧಾರಿತವಾಗಿ ನೋಡಿದಾಗಲೂ ಮೊದಲ ತಲೆಮಾರಿನ ಮಹಿಳೆಯರಲ್ಲಿ ಸಾಕ್ಷರತೆಯ ಪ್ರಮಾಣ ಕಡಿಮೆ ಇದ್ದು ಎರಡು ಮತ್ತು ಮೂರನೆಯ ತಲೆಮಾರುಗಳಲ್ಲಿ ಹೆಚ್ಚಾಗಿದೆ. ಹಾಗೆಯೇ ಪುರುಷರಲ್ಲೂ ಸಹ ಮೊದಲ ತಲೆಮಾರುಗಳಿಗಿಂತ ಈಗಿನ ತಲೆಮಾರುಗಳಲ್ಲಿ ಸಾಕಷ್ಟು ಹೆಚ್ಚಾಗಿರುವುದು ಕಾಣುತ್ತಿದೆ. ತೆಲುಗು ಭಾಷಿಕರು ತೆಲುಗಿನ ಸಾಕ್ಷರತೆಯ ಕೌಶಲಗಳನ್ನು ಪಡೆಯುವಲ್ಲಿ ತಲೆಮಾರುಗಳಲ್ಲಿ ಆಗುತ್ತಿರುವ ಬದಲಾವಣೆಗಳನ್ನು ಗಮನಿಸಿದಾಗ ಮೊದಲ ತಲೆಮಾರುಗಳಲ್ಲಿ ಸಾಕ್ಷರತೆಯನ್ನು ಪಡೆಯುವಲ್ಲಿ ಭಾಷಿಕರಲ್ಲಿದ್ದ ಅಂತರ ಎರಡು ಮತ್ತು ಮೂರನೆಯ ತಲೆಮಾರುಗಳಲ್ಲಿ ಕಡಿಮೆಯಾಗಿದೆ. ಮೊದಲ ತಲೆಮಾರುಗಳಲ್ಲಿ ಮಹಿಳೆಯರು ಅವಿದ್ಯಾವಂತರಾಗಿದ್ದು ಸಾಕ್ಷರತೆಯ ಸಂದರ್ಭಗಳಿಗೆ ಒಳಗಾಗುವ ಬಹಳ ಕಡಿಮೆ ಸಂದರ್ಭಗಳಲ್ಲಿ ಇದ್ದು ಇತ್ತೀಚೆಗೆ ಸಮಾಜದಲ್ಲಿನ ಹಲವು ಬದಲಾವಣೆಗಳ ಅರಿವಿನಿಂದಾಗಿ ಮಹಿಳೆಯರು ಸಾಕ್ಷರತೆಯನ್ನು ಪಡೆಯುತ್ತಿರುವುದು ಹೆಚ್ಚಾಗುತ್ತಿದೆ. ಅಲ್ಲದೆ ವೈವಾಹಿಕ ಸಂಬಂಧಗಳನ್ನು ತೆಲುಗರು ತೆಲುಗರೊಂದಿಗೆ ಮಾಡುವ ಸಂದರ್ಭದಲ್ಲಿ ಮಹಿಳೆಯರನ್ನು ತೆಲುಗಿನ ಸಾಕ್ಷರತೆಯ ಸಂದರ್ಭಗಳಿಗೆ ಒಳಪಡಿಸುವ ಅಗತ್ಯಗಳು ಇವೆ. ಇದರಲ್ಲೂ ಕೆಳವರ್ಗಗಳಲ್ಲಿ ಈ ರೀತಿಯ ಪರಿಸ್ಥಿತಿಗಳು ಹೆಚ್ಚಿನ ಪ್ರಮಾಣದಲ್ಲಿವೆ. ಆದರೆ ಪುರುಷರಲ್ಲಿ ತಲೆಮಾರುಗಳಲ್ಲಿ ತೆಲುಗಿನ ಸಾಕ್ಷರತೆಯ ಪ್ರಮಾಣ ಇಳಿಮುಖವಾಗುತ್ತಿದೆ. ಕಾರಣ ಇವರಲ್ಲಿ ಕೆಲವರು ಶಿಕ್ಷಣವನ್ನು ತೊರೆದು ಕೂಲಿ ಮಾಡುತ್ತಾ ಇತರ ಉದ್ಯೋಗಗಳಲ್ಲಿ ನಿರತರಾಗಿದ್ದರೆ, ಇತ್ತೀಚೆಗೆ ಸಾಮಾಜದಲ್ಲಿನ ಹಲವು ಬದಲಾವಣೆಗಳಿಂದಾಗಿ ಸಾಮಾಜಿಕ ಚಲನೆಯಲ್ಲಿ ಮೇಲ್‌ಮುಖವಾಗಿ ಚಲಿಸಲು ಕನ್ನಡ ಭಾಷೆಯ ಸಾಕ್ಷರತೆಯ ಕೌಶಲಗಳನ್ನು ಪಡೆಯುವಲ್ಲಿ ಇವರಲ್ಲಿ ಭಾಷಾ ಪಲ್ಲಟಗಳಾಗುತ್ತಿವೆ. ತೆಲುಗಿನಲ್ಲಿ ಓದಿದರೆ ಉಪಯೋಗವಿಲ್ಲ. ಕನ್ನಡದಲ್ಲಿ ಓದಿದರೆ ಉದ್ಯೋಗ ಸಿಗುವುದೆಂಬ ತೆಲುಗು ಭಾಷಿಕರ ಮನೋಭಾವದಿಂದ ಕನ್ನಡದ ಸಾಕ್ಷರತೆಯ ಕಡೆಗೆ ಕೆಳವರ್ಗ, ಕೆಳಮಧ್ಯಮವರ್ಗ ಮತ್ತು ಮಧ್ಯಮವರ್ಗಗಳಲ್ಲಿ ಭಾಷಾ ಪಲ್ಲಟಗಳು ಅಧಿಕವಾಗುತ್ತಿದ್ದು, ಲಿಂಗಾಧಾರಿತವಾಗಿಯೂ ಇದು ಹೆಚ್ಚಾಗುತ್ತಿದೆ. ಇತ್ತೀಚಿನ ಕರ್ನಾಟಕ ಸರ್ಕಾರದ ಕನ್ನಡ ಭಾಷೆಯ ಪರವಾದ ಆಡಳಿತಾತ್ಮಕ ನಿರ್ಧಾರಗಳಿಂದಾಗಿ ಹೆಚ್ಚು ಹೆಚ್ಚು ಪಲ್ಲಟಗಳು ಕನ್ನಡದ ಸಾಕ್ಷರತೆಯ ನೆಲೆಗಳ ಕಡೆಗೆ ಉಂಟಾಗುತ್ತಿವೆ. ಇದರಿಂದ ಅನೇಕ ತೆಲುಗು ಮಾಧ್ಯಮ ಶಾಲೆಗಳಲ್ಲಿ ವರ್ಷದಿಂದ ವರ್ಷಕ್ಕೆ ತೆಲುಗು ಭಾಷೆಯನ್ನು ಮಾಧ್ಯಮವಾಗಿ ತೆಗೆದುಕೊಂಡು ಓದುವವರ ಸಂಖ್ಯೆ ಇಳಿಮುಖವಾಗುತ್ತಿದೆ. ಇದು ನಗರ ಸಂದರ್ಭಗಳಲ್ಲಿ ತೀವ್ರವಾದ ಪಲ್ಲಟಗಳು ಉಂಟಾಗುತ್ತಿದ್ದರೆ ಗ್ರಾಮೀಣ ಸಂದರ್ಭದಲ್ಲೂ ಭಾಷಾದ್ವೀಪಗಳಿರುವ ಕಡೆಗಳಲ್ಲಿ ಪಲ್ಲಟಗಳು ಈಗೀಗ ತೀವ್ರವಾಗುತ್ತಿರುವಂತಿದೆ. ಶಿಕ್ಷಣದ ಸಂದರ್ಭಗಳಲ್ಲಿ ದೊರೆತ ಅಂಕಿ - ಅಂಶಗಳೂ ಸಹ ಈ ಮೇಲಿನ ಬದಲಾವಣೆಯನ್ನು ಇನ್ನಷ್ಟು ಬಲಪಡಿಸುತ್ತವೆ. ತೆಲುಗು ಮಾಧ್ಯಮಗಳಿಂದ ಕನ್ನಡ ಮಾಧ್ಯಮಗಳಿಗೆ ಪಲ್ಲಟಗೊಳ್ಳುತ್ತಿರುವ ವಿದ್ಯಾರ್ಥಿಗಳ ಬಗೆಗಿನ ವಿವರಗಳಲ್ಲಿ ವರ್ಷದಿಂದ - ವರ್ಷಕ್ಕೆ ತೆಲುಗು ಮಾಧ್ಯಮಗಳಲ್ಲಿ ಓದುವವರ ಸಂಖ್ಯೆ ಇಳಿಮುಖವಾಗುತ್ತಿರುವುದು ಕಾಣುತ್ತಿದೆ.

ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಪಟೇಲ ನಗರ, ಹೊಸಪೇಟೆ

| ವರ್ಷ | ಒಟ್ಟು ವಿದ್ಯಾರ್ಥಿಗಳು |
|---|---|
| 1993-94 | 86 |
| 1995-96 | 58 |
| 1995-96 | 41 |
| 1996-97 | * 51 |
| 1997-98 | 43 |
| 1998-99 | 30 |
| 1999-2000 | 18 |
| 2000-2001 | 08 |

* ವಿಶೇಷ ದಾಖಲಾತಿ ಅನ್ವಯ

ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ತೋರಣಗಲ್ಲು ರೈಲ್ವೆ ನಿಲ್ದಾಣ

| ವರ್ಷ | ಒಟ್ಟು ವಿದ್ಯಾರ್ಥಿಗಳು |
|---|---|
| 1992-93 | 138 |
| 1993-94 | 120 |
| 1995-96 | 118 |
| 1995-96 | 102 |
| 1996-97 | * 135 |
| 1997-98 | 132 |
| 1998-99 | 120 |
| 1999-2000 | 96 |
| 2000-2001 | 78 |

* ವಿಶೇಷ ದಾಖಲಾತಿ ಅನ್ವಯ

ಸರ್ಕಾರಿ ತೆಲುಗು ಮಾಧ್ಯಮ ಶಾಲೆ, ಶ್ರೀರಾಂಪುರ, ಬಳ್ಳಾರಿ

| ವರ್ಷ | ಒಟ್ಟು ವಿದ್ಯಾರ್ಥಿಗಳು |
|---|---|
| 1993-94 | 98 |
| 1995-96 | 96 |
| 1995-96 | 87 |
| 1996-97 | 90 |
| 1997-98 | 60 |
| 1998-99 | 42 |
| 1999-2000 | 24 |
| 2000-2001 | 07 |

ಸರ್ಕಾರಿ ತೆಲುಗು ಮಾಧ್ಯಮ ಶಾಲೆ, ಸಿರುಗುಪ್ಪ

| ವರ್ಷ | ಒಟ್ಟು ವಿದ್ಯಾರ್ಥಿಗಳು |
|---|---|
| 1992-93 | 88 |
| 1993-94 | 87 |
| 1995-96 | 79 |
| 1995-96 | 80 |
| 1996-97 | 72 |
| 1997-98 | 63 |
| 1998-99 | 47 |
| 1999-2000 | 36 |
| 2000-2001 | 31 |

*ಮೂಲ : ಶಾಲಾ ಮುಖ್ಯೋಪಾಧ್ಯಾಯರು ಒದಗಿಸಿದ ಅಂಕಿ - ಅಂಶಗಳು*

ಈ ಮೇಲಿನ ಎಲ್ಲಾ ಅಂಕಿ - ಅಂಶಗಳು, ಸಾಕ್ಷಿಗಳು ಎಲ್ಲವೂ ಸಹ ಮೌಖಿಕ ನೆಲೆಯಲ್ಲಿ ಮತ್ತು ಸಾಕ್ಷರತೆಯ ನೆಲೆಯಲ್ಲಿ ಉಂಟಾಗುತ್ತಿರುವ ಭಾಷಾ ಪಲ್ಲಟವನ್ನು ಕುರಿತಂತೆ ತಿಳಿಸುತ್ತಿವೆ. ಇದಕ್ಕೆ ಕಾರಣಗಳೇನಿರಬಹುದು, ಯಾರಲ್ಲಿ ಈ ಪಲ್ಲಟಗಳು ಉಂಟಾಗುತ್ತಿವೆ, ಪಲ್ಲಟಗೊಳ್ಳುವ ಸಂದರ್ಭದಲ್ಲಿ ಭಾಷಿಕರು ತಮ್ಮ ಭಾಷೆಗಳನ್ನು ಸಂಪೂರ್ಣವಾಗಿ ಕಳೆದುಕೊಳ್ಳುತ್ತಿರುವರೆ ಅಥವಾ ಉಳಿಸಿಕೊಳ್ಳುತ್ತಿರುವರೆ ಎಂಬ ಹಲವು ಪ್ರಶ್ನೆಗಳು ಎದುರಾಗುತ್ತವೆ. ಬಳ್ಳಾರಿ ಪರಿಸರದಲ್ಲಿ ದ್ವಿಭಾಷಾ ಸಂದರ್ಭವೊಂದು ಬದಲಾಗುತ್ತಿರುವುದನ್ನು ಮೇಲಿನ ಅಂಕಿ - ಅಂಶಗಳು ತಿಳಿಸುತ್ತಿವೆ. ಅಲ್ಲದೆ ಸಾಕ್ಷರತೆಯನ್ನು ಪಡೆದುಕೊಳ್ಳುವ ನೆಲೆಗಳಲ್ಲಿಯೂ ಸಹ ಬದಲಾವಣೆಗಳುಂಟಾಗಿವೆ. ಕಾರಣ ಬಳ್ಳಾರಿ ಏಕೀಕರಣಕ್ಕೆ ಮುಂಚಿನ ದಿನಗಳಲ್ಲಿ ತೆಲುಗು ಮಾಧ್ಯಮದ ಶಾಲೆಗಳು ಹೆಚ್ಚಿನ ಪ್ರಮಾಣದಲ್ಲಿದ್ದು, ಕನ್ನಡಿಗರೂ ಸಹ ತೆಲುಗು ಮಾಧ್ಯಮದಲ್ಲಿ ಓದುವ ಅನಿವಾರ್ಯಗಳಿತ್ತೆಂಬುದರ ಬಗೆಗೆ ಚರಿತ್ರೆಯ ಪುಟಗಳು ತಿಳಿಸುತ್ತವೆ. ಅಂತಹ ಸಂದರ್ಭಗಳಲ್ಲಿ ಕನ್ನಡಿಗರೂ ಸಹ ತೆಲುಗನ್ನು ಕಲಿತು ದ್ವಿಭಾಷಿಕರಾಗುವ ಅವಶ್ಯಕತೆಗಳು ಇತ್ತೆಂದು ಹಲವರ ಅಭಿಪ್ರಾಯ. ಕರ್ನಾಟಕ ಏಕೀಕರಣದಲ್ಲಿ ಬಳ್ಳಾರಿ ಭಾಷಾವಾರು ಪ್ರಾಂತಗಳ ವಿಂಗಡನೆಯಿಂದಾಗಿ ಭಾಷಿಕರನೇಕರು ಆಂಧ್ರಪ್ರದೇಶಕ್ಕೆ ಹಂಚಿಹೋದರು. ಇನ್ನು ಕೆಲವರು ಇಲ್ಲೆ ನೆಲೆನಿಂತರು. ಏಕೀಕರಣೋತ್ತರದಲ್ಲಿ ಕರ್ನಾಟಕದಲ್ಲಿ ಕನ್ನಡ ಆಡಳಿತ ಭಾಷೆಯಾಯಿತಲ್ಲದೆ ಕನ್ನಡ ಭಾಷೆಯ ಉದ್ಧಾರಕ್ಕಾಗಿ ಕರ್ನಾಟಕ ಸರ್ಕಾರವು ತೆಗೆದುಕೊಂಡ ಆಡಳಿತಾತ್ಮಕ ನಿರ್ಧಾರಗಳಿಂದಾಗಿ ಅನ್ಯಭಾಷಿಕರು ಕನ್ನಡವನ್ನು ಕಲಿತು ಬಳಸುವ ಅನಿವಾರ್ಯಗಳುಂಟಾದವು. ಇದರ ಪರಿಣಾಮ ಬಳ್ಳಾರಿ ದ್ವಿಭಾಷಾ ಪ್ರದೇಶದಲ್ಲೂ ಉಂಟಾಗಿದೆ. ಕನ್ನಡ ಮಾಧ್ಯಮದ ಶಾಲೆಗಳು ಹೆಚ್ಚಿಗೆ ತೆರೆಯಲ್ಪಟ್ಟವು. ಸರ್ಕಾರ ಕನ್ನಡ ಮನೆಭಾಷೆಯ ಶಿಕ್ಷಣವನ್ನು ಕೆಲವು ಹಂತದವರೆಗೂ ಕಡ್ಡಾಯಗೊಳಿಸಿದ್ದು, ಕನ್ನಡ ಮಾಧ್ಯಮದಲ್ಲಿ ಓದಿದವರಿಗೆ ಉನ್ನತ ಶಿಕ್ಷಣದಲ್ಲಿ ಮೀಸಲಾತಿ ಜಾರಿಗೆ ತಂದದ್ದು, ಇತ್ಯಾದಿಗಳ ಫಲವಾಗಿ ಕರ್ನಾಟಕದಲ್ಲಿ ತಳವೂರಿರುವ ಅನ್ಯಭಾಷಿಕರಿಗೆ ಕನ್ನಡ ಕಲಿತು ಬಳಸುವ ಅವಶ್ಯಕತೆಗಳು ಹೆಚ್ಚಾಗಿದೆ. ಅದರಲ್ಲೂ ಭಾಷಾ ಅಲ್ಪಸಂಖ್ಯಾತ ವಲಸಿಗರಿಗೆ ಇದರ ಅವಶ್ಯಕತೆ ಹೆಚ್ಚಿದೆ. ಆದ್ದರಿಂದ ಕನ್ನಡ ಭಾಷೆಯ ಕಡೆಗೆ ತೆಲುಗು ಭಾಷಿಕರು ಪಲ್ಲಟಗೊಳ್ಳುತ್ತಿರುವುದು ವರ್ಷದಿಂದ ವರ್ಷಕ್ಕೆ ಹೆಚ್ಚಾಗುತ್ತಿದೆ. ಜೊತೆಗೆ ಶಿಕ್ಷಣ ಸಂದರ್ಭಗಳಲ್ಲಿ ಕಾಣುತ್ತಿರುವಂತೆ ತೆಲುಗು ಮಾಧ್ಯಮಗಳಲ್ಲಿ ಶಿಕ್ಷಣ ಪಡೆಯುತ್ತಿರುವವರಲ್ಲಿ ಬಹಳಷ್ಟು ಮಕ್ಕಳು ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಹಿಂದುಳಿದಿರುವ ಕುಟುಂಬದ ಹಿನ್ನೆಲೆಯಿಂದ ಬರುತ್ತಿರುವವರಾಗಿದ್ದು, ಇವರಲ್ಲಿ ಹೆಚ್ಚಿನವರು ವಲಸಿಗ ಕೂಲಿ ಕಾರ್ಮಿಕ ಮಕ್ಕಳೇ ಆಗಿದ್ದಾರೆ. ಅದರಲ್ಲೂ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಸೇರಿದವರಾಗಿದ್ದು, ತೀರ ಕೆಳಮಟ್ಟದ ಸಮಾಜೋಆರ್ಥಿಕ ಸ್ಥಾನಮಾನಗಳನ್ನು ಹೊಂದಿರುವವರಾಗಿದ್ದಾರೆ. ಇಂತಹ ಕುಟುಂಬಗಳ ಮಕ್ಕಳು ಏಳನೇ ತರಗತಿಯವರೆಗೂ ಶಿಕ್ಷಣವನ್ನು ಪಡೆದು ಏಳನೆ ತರಗತಿಯ ನಂತರ ಗಂಡು ಮಕ್ಕಳು ಕೂಲಿ, ಇತ್ಯಾದಿ ಕೆಲಸಗಳಿಗೆ ಹೋದರೆ, ಹೆಣ್ಣು ಮಕ್ಕಳು ಶಿಕ್ಷಣಕ್ಕೆ ತಿಲಾಂಜಲಿ ಹಾಕಿ ಮನೆಕೆಲಸ, ಕೂಲಿ ಇತ್ಯಾದಿ ಕೆಲಸಗಳಿಗೆ ತೊಡಗಿಸಿಕೊಳ್ಳುತ್ತಾರೆ. ಇದೊಂದು ಸಂಗತಿಯಾದರೆ, ಇಲ್ಲವಾದರೆ ವಿವಾಹ ಸಂದರ್ಭಗಳಿಗೆ ಒಳಪಡಿಸುವ ಸನ್ನಿವೇಶಗಳನ್ನು ಕಾಣಲಾಗಿದೆ.

ಇನ್ನು ಕೆಲವರು ಉದ್ಯೋಗದಲ್ಲಿರುವವರು ಆಂಧ್ರಪ್ರದೇಶದಿಂದ ವರ್ಗವಾಗಿ ಬಂದವರು, ವೈವಾಹಿಕ ಸಂಬಂಧವನ್ನು ತಾಯ್ನಾಡಿನೊಂದಿಗೆ ಬೆಳೆಸಲು ಇಚ್ಛಿಸುವವರು, ಮಾತ್ರ ತೆಲುಗು ಮಾಧ್ಯಮಗಳಲ್ಲಿ ಓದುತ್ತಿದ್ದಾರೆ.

ಕ್ಷೇತ್ರಕಾರ್ಯವನ್ನು ಮಾಡುವಾಗಿನ ಮೂರು ವರ್ಷಗಳಲ್ಲಿ ಆಗಿರುವ ಶೈಕ್ಷಣಿಕ ಬದಲಾವಣೆಗಳನ್ನು ನೋಡಿದಾಗ ಇನ್ನೊಂದಂಶವು ಕಾಣಲಾಗಿದೆ. ಇತ್ತೀಚಿನ ದಿನಗಳಲ್ಲಿ ಕೂಲಿ, ಮನೆಕೆಲಸ, ಮುಂತಾದ ಸಣ್ಣ ಪುಟ್ಟ ಉದ್ಯೋಗಗಳಿಗಾಗಿ ಶಾಲಾ ಶಿಕ್ಷಣಕ್ಕೆ ತಿಲಾಂಜಲಿ ಹಾಕುವವರ ಸಂಖ್ಯೆ ಕಡಿಮೆಯಾದಂತಿದೆ. ಇಂತಹ ಮಕ್ಕಳು ಶಿಕ್ಷಣಕ್ಕಾಗಿ ಕನ್ನಡ ಮಾಧ್ಯಮವನ್ನು ಆಯ್ಕೆ ಮಾಡಿಕೊಳ್ಳುತ್ತಿರುವ ಸಂಗತಿಗಳು ಕಂಡುಬಂದಿವೆ. ಕೆಳಮಟ್ಟದ ಸಮಾಜೋ ಆರ್ಥಿಕ ಸ್ಥಾನಮಾನದಿಂದ ಮೇಲ್ಮುಖ ಚಲನೆಯ ಕಡೆಗೆ ಚಲಿಸಲು ಕನ್ನಡ ಭಾಷಾ ಮಾಧ್ಯಮವೊಂದು ಕೆಳವರ್ಗ ಮತ್ತು ಕೆಳಮಧ್ಯಮ ವರ್ಗದ ತೆಲುಗು ಭಾಷಿಕರಿಗೆ 'ರಹದಾರಿ' ಇದ್ದಂತಿದೆ. ಇದರಿಂದ ತಿಳಿದುಬರುತ್ತಿರುವುದೇನೆಂದರೆ ಭಾಷೆಯ ಮೂಲಕ ತಮ್ಮ ಸ್ಥಾನಮಾನಗಳನ್ನು ಉತ್ತಮಪಡಿಸಿಕೊಳ್ಳಲು ಪ್ರಯತ್ನಿಸುತ್ತಿರುವುದು. ಈ ಸಂದರ್ಭದಲ್ಲಿ ತೊವ್ ಸ್ಕೂಟನಬ್ ಕಾಂಗಸ್ (1982:79) ಅವರ ಮಾತುಗಳು ನಿಜವೆನಿಸುತ್ತವೆ. "ಅಲ್ಪಸಂಖ್ಯಾತ ವಲಸಿಗ ವರ್ಗದವರಿಗೆ ದ್ವಿಭಾಷಿಕರಾಗುವ ಒತ್ತಡ ಸಮಾಜದಲ್ಲಿ ಹೆಚ್ಚಿನ ಪ್ರಮಾಣದಲ್ಲಿರುತ್ತದೆ. ಈ ವರ್ಗದವರ ಮನೆಭಾಷೆಗೆ ಸಾಮಾನ್ಯವಾಗಿ ಆಡಳಿತಾತ್ಮಕ ಹಕ್ಕುಗಳು ಮಿತಿಯಲ್ಲಿರುತ್ತವೆ ಅಥವಾ ಮಿತವಾಗಿರುತ್ತವೆ. ಇಂತಹ ಸಂದರ್ಭಗಳಲ್ಲಿ ಸಮಾಜ ಮತ್ತು ಕೌಟುಂಬಿಕ ಒತ್ತಡಗಳು ಈ ವರ್ಗದ ಆಶೋತ್ತರಗಳನ್ನು ಮೇಲ್ಮುಖ ಚಲನೆಯ ಕಡೆಗೆ ಕೊಂಡೊಯ್ಯುವಲ್ಲಿ ಪ್ರಮುಖವಾಗಿ ಭಾಷೆ ಒಂದು ಸಾಧನವಾಗಿ, ಸಂವಹನ ಮಾಧ್ಯಮವಾಗಿ ಎಲ್ಲಾ ರೀತಿಯ ಹಕ್ಕು ಸೌಲಭ್ಯಗಳನ್ನು ಪಡೆಯುವಲ್ಲಿ ಕೆಲಸ ಮಾಡುತ್ತಿರುತ್ತದೆ. ತಂದೆ - ತಾಯಿಗಳು ತಮಗಿಂತ ತಮ್ಮ ಮಕ್ಕಳ ಜೀವನಮಟ್ಟ ಉತ್ತಮವಾಗಿರಲೆಂದು ಪ್ರಬಲವರ್ಗದವರ ಭಾಷೆಯನ್ನು ಪ್ರೋತ್ಸಾಹಿಸುವುದು ಎಲ್ಲಾ ಅಲ್ಪಸಂಖ್ಯಾತ ವಲಸಿಗ ವರ್ಗದಲ್ಲಿ ಸಾಮಾನ್ಯವಾದ ಲಕ್ಷಣ" ಇನ್ನೊಂದೆಡೆ ಆರ್ಥಿಕವಾಗಿ, ಸಾಮಾಜಿಕವಾಗಿ ಉನ್ನತವಾದ ಸ್ಥಾನಮಾನಗಳನ್ನು ಹೊಂದಿರುವ ತೆಲುಗು ಭಾಷಿಕರು ತಮ್ಮ ಸ್ಥಾನಮಾನಗಳನ್ನು ಹೆಚ್ಚಿಸಿಕೊಳ್ಳಲು ಈಗಿನ ತಲೆಮಾರುಗಳಲ್ಲಿ ಇಂಗ್ಲಿಶ್ ಭಾಷಾ ಮಾಧ್ಯಮಗಳ ಕಡೆಗೆ ಪಲ್ಲಟವಾಗುತ್ತಿರುವುದನ್ನು ಕಾಣಲಾಗಿದೆ. ಈ ವರ್ಗದ ಭಾಷಿಕರಲ್ಲಿ ಬಹುಮಟ್ಟಿಗೆ ಆಂಧ್ರದೊಂದಿಗೆ ವ್ಯಾಪಾರ ವಾಣಿಜ್ಯ ಸಂಬಂಧಗಳಿಗಾಗಿ, ವೈವಾಹಿಕ ಸಂಬಂಧಗಳಿಗಾಗಿ, ರಾಜಕೀಯ ಸಂಬಂಧಗಳಿಗಾಗಿ ಈ ರೀತಿಯ ಪಲ್ಲಟಗಳು ಉಂಟಾಗಿವೆ. ಈ ವರ್ಗದವರು ಕಾಲೇಜು - ಪದವಿ ಹಂತಗಳಲ್ಲಿ ತೆಲುಗು ಭಾಷೆಯನ್ನು ಒಂದು ವಿಷಯವನ್ನಾಗಿ ತೆಗೆದುಕೊಂಡು ಓದುತ್ತಿದ್ದಾರೆ. "ನಗರ ಪ್ರದೇಶಗಳಲ್ಲಿ ಭಾಷಾ ಸಂಪರ್ಕ ಸಂದರ್ಭಗಳಲ್ಲಿ ಒಂದು ರೀತಿಯ ಅತಂತ್ರ ಸ್ಥಿತಿ ಉದ್ಭವವಾಗುತ್ತದೆ. ದ್ವಿಭಾಷಿಕ ಗುಂಪುಗಳು ಸಂಪೂರ್ಣ ಪಲ್ಲಟ ಹೊಂದಲ್ಲ. ಆಂಶಿಕ ಪಲ್ಲಟ ಹೊಂದುತ್ತಾರೆ. ಕಿರಿಯರು ಸಮುದಾಯದ ಅಂಚಿನವರೊಡನೆ, ಉದ್ಯೋಗವಲಯದಲ್ಲಿ ಅನೌಪಚಾರಿಕ ಆವರಣ, ಆತ್ಮೀಯ ಆವರಣ, ಬೇರೆ ಭಾಷೆ ಬಳಸುವುದು" ಶ್ರೀವಾಸ್ತವ (1989:15). ಸರ್ಕಾರದ

ಅಧಿಕೃತ ಮಾನ್ಯತೆ, ಪೋಷಕತ್ವ ಸಿಗದೆ ಇರುವ ಸಂದರ್ಭದಲ್ಲಿ ಒಂದು ಅತಂತ್ರ ಸ್ಥಿತಿ ಉಂಟಾಗಿ ಸ್ಥಿತ್ಯಂತರ ರೂಪದಲ್ಲಿರುವ ದ್ವಿಭಾಷಿಕತೆ ಕೊನೆಗೆ ಭಾಷಾ ಪಲ್ಲಟದಲ್ಲಿ ಪರ್ಯಾವಸಾನಗೊಳ್ಳುತ್ತದೆ. ರೊಮೈನ (1994:50).

ಇವಿಷ್ಟು ಭಾಷಾ ಕೌಶಲಗಳ ನೆಲೆಯಲ್ಲಿ ಭಾಷಿಕರಲ್ಲಾಗುತ್ತಿರುವ ಭಾಷಾ ಪಲ್ಲಟದ ಬಗೆಗೆ ತಿಳಿಸುತ್ತಿದ್ದರೆ ಭಾಷೆಯನ್ನು ಬಳಸುವ ಆವರಣಗಳಲ್ಲಿಯೂ ಭಾಷಿಕರಲ್ಲಿ ಪಲ್ಲಟಗಳು ಉಂಟಾಗಿವೆಯೆ, ಯಾವ ಆವರಣಗಳಲ್ಲಿ ಭಾಷಿಕರು ಭಾಷೆಯನ್ನು ಉಳಿಸಿಕೊಳ್ಳುತ್ತಿದ್ದಾರೆ ಅಥವಾ ಭಾಷಾ ಬಳಕೆಯ ಆವರಣಗಳಲ್ಲೂ ಪಲ್ಲಟಗಳುಂಟಾಗುತ್ತಿವೆಯೆ? ಇದು ತಲೆಮಾರುಗಳಲ್ಲಿ ವಿಭಿನ್ನವಾಗಿರಬಹುದೇ? ಲಿಂಗಾಧಾರಿತವಾಗಿ ನೋಡಿದಾಗ ವ್ಯತ್ಯಾಸಗಳಿವೆಯೆ? ಸಾಮಾಜಿಕ ಭಿನ್ನಾಂಶಗಳು ಭಾಷಾ ಬಳಕೆಯ ಆವರಣಗಳನ್ನು ನಿಯಂತ್ರಿಸುತ್ತಿವೆಯೆ? ಈ ಎಲ್ಲಾ ಪ್ರಶ್ನೆಗಳಿಗೆ ದ್ವಿಭಾಷಿಕರು ಭಾಷೆಯನ್ನು ಬಳಸುವ ಕೆಲವು ಆವರಣಗಳನ್ನು ನೋಡಿದಾಗ ಈ ಕೆಳಕಂಡ ಸಂಗತಿಗಳಿರುವುದು ಕಾಣುತ್ತಿದೆ.

ಕೋಷ್ಟಕ - 1 ರಲ್ಲಿ ತೆಲುಗು - ಕನ್ನಡ ದ್ವಿಭಾಷಿಕರಾದ ಮಹಿಳೆಯರಲ್ಲಿ ಕೆಳವರ್ಗ, ಕೆಳಮಧ್ಯಮವರ್ಗದ ಅವಿದ್ಯಾವಂತ ಮಹಿಳೆಯರು ಹೆಚ್ಚಿನ ಆವರಣಗಳಲ್ಲಿ ತೆಲುಗು ಭಾಷೆಯನ್ನು ಉಳಿಸಿಕೊಂಡಿರುವಂತಿದೆ. ಇದಕ್ಕೆ ಅವರು ನೆಲೆಸಿರುವ ವಾಸಸ್ಥಾನಗಳು ಒಂದೆಡೆ ಹೆಚ್ಚು ಕಾರಣವಾಗಿದ್ದರೆ, ಮತ್ತೊಂದೆಡೆ ಇವರಲ್ಲಿ ಹೆಚ್ಚಿನವರು ಆಂಧ್ರಪ್ರದೇಶದಿಂದ ಕೂಲಿಗಾಗಿ ವಲಸೆ ಬಂದವರಾಗಿದ್ದು, ವಯಸ್ಕ ಭಾಷಾ ಕಲಿಕೆಯ ಹಂತವನ್ನು ದಾಟಿದವರಾದ್ದರಿಂದ ಸಹಜವಾಗಿ ಬೇರೊಂದು ಭಾಷೆಯನ್ನು ಕಲಿಯುವಲ್ಲಿ ತೊಡಕಿದೆ. ಹೆಚ್ಚಿನ ಕನ್ನಡದ ಸಂದರ್ಭಗಳಿಗೆ ಒಳಗಾಗದವರೂ ಆಗಿದ್ದಾರೆ. ಮಧ್ಯಮ, ಮೇಲ್ಮಧ್ಯಮ, ಉನ್ನತ ವರ್ಗದ ಮಹಿಳೆಯರಲ್ಲಿ ಮನೆ, ಸಂಬಂಧಿಕರು ಕೆಲವು ಸ್ನೇಹಿತರು ಇತ್ಯಾದಿ ಕೆಲವೇ ಕೆಲವು ಆವರಣಗಳಲ್ಲಿ ಮನೆಮಾತನ್ನು ಉಳಿಸಿಕೊಂಡು ಹೆಚ್ಚಿನ ಸಂದರ್ಭಗಳಿಗೆ ಕನ್ನಡವನ್ನು ಬಳಸುವುದು ಕಾಣುತ್ತದೆ. ಜೊತೆಗೆ ಈ ವರ್ಗಗಳಲ್ಲಿನ ಮಕ್ಕಳು ಮನೆ ಆವರಣದಲ್ಲೆ ಹೆಚ್ಚು ತೆಲುಗು ಭಾಷೆಯನ್ನು ಉಳಿಸಿಕೊಂಡು ಮಿಕ್ಕಂತೆ ಕನ್ನಡವನ್ನು ಹೆಚ್ಚಿನ ಆವರಣಗಳಲ್ಲಿ ಬಳಸುತ್ತಾರೆ. ಭಾಷೆಯು ಕೆಲವು ಆವರಣಗಳಲ್ಲಿ ಪಲ್ಲಟವಾಗುತ್ತಿರುವುದು ಕಾಣುತ್ತಿದೆ. ಆದರೆ ಮನೆ ಮತ್ತು ಸಂಬಂಧಿಕರು ಆವರಣಗಳಲ್ಲಿ ಹೆಚ್ಚು ಭಾಷೆ ಉಳಿದಿರುವಂತಿದೆ. ಎರಡನೇ ತಲೆಮಾರುಗಳಲ್ಲಿ ಭಾಷಾ ಆಯ್ಕೆ ಕೆಲವೊಮ್ಮೆ ಸಮವಾಗಿದ್ದರೆ ಈಗಿನ ತಲೆಮಾರುಗಳಲ್ಲಿ ಕನ್ನಡ ಭಾಷೆಗೆ ಹೆಚ್ಚಿನ ಪಲ್ಲಟವಾಗಿರುವುದು ಕಾಣುತ್ತಿದೆ.

# ಮಹಿಳೆಯರಲ್ಲಿ ಭಾಷಾ ಬಳಕೆಯ ಆವರಣಗಳು

## ಕೋಷ್ಟಕ - 1

| ಕ್ರ.ಸಂ | ವಯಸ್ಸು | ಜಾತಿ | ಶಿಕ್ಷಣ | ವೃತ್ತಿ | ವರ್ಗ ವಿಧಾನ | ಕುಟುಂಬ | ಮನೆ | ಅಕ್ಕಪಕ್ಕ | ಸಂಬಂಧಿಕರು | ಶಾಲೆಯಲ್ಲಿ | ಕೆಲಸ ಮಾಡುವ ಕಡೆ | ಮಾರುಕಟ್ಟೆ | ಪ್ರಾರ್ಥನೆ | ಟಿ.ವಿ. ನೋಡುವುದು | ಕಚೇರಿಗಳಲ್ಲಿ | ಸ್ನೇಹಿತರು |
|---|---|---|---|---|---|---|---|---|---|---|---|---|---|---|---|---|
| 1 | 8 | ಪಜಾ. | ಅವಿದ್ಯಾವಂತ | ಮನೆಕೆಲಸ ಕೂಲಿ | ಕೆಳ | ಅವಿಭಕ್ತ | ತೆ | ತೆ | ತೆ | - | ಕ | ಕ | ತೆ | ತೆ | - | ತೆ |
| 2 | 10 | ಪಜಾ. | ವಿದ್ಯಾವಂತ | ವಿದ್ಯಾರ್ಥಿ | ಕೆಳ | ಅವಿಭಕ್ತ | ತೆ | ತೆ | ತೆ | ಕ | - | ಕ | ತೆ | ತೆ | - | ಕ/ತೆ |
| 3 | 11 | ಬ್ರಾಹ್ಮಣ | ವಿದ್ಯಾವಂತ | ವಿದ್ಯಾರ್ಥಿ | ಮೇ.ಮ. | ಅವಿಭಕ್ತ | ತೆ | ಕ | ತೆ | ಕ | - | ಕ | ಕ | ಹಿ/ತೆ | - | ಕ |
| 4 | 13 | ಬಲಿಜ | ವಿದ್ಯಾವಂತ | ವಿದ್ಯಾರ್ಥಿ | ಉನ್ನತ | ಅವಿಭಕ್ತ | ತೆ | ಕ | ತೆ | ಕ | - | ಕ | ಕ | ಹಿ/ತೆ | - | ಕ |
| 5 | 13 | ಆಗಸ | ವಿದ್ಯಾವಂತ | ವಿದ್ಯಾರ್ಥಿ | ಮಧ್ಯಮ | ಅವಿಭಕ್ತ | ತೆ | ಕ | ತೆ | ಕ | - | ಕ | ಕ | ಕ | - | ಕ |
| 6 | 14 | ಪ.ಪಂ | ಅವಿದ್ಯಾವಂತ | ಮನೆಕೆಲಸ | ಕೆಳಮಧ್ಯಮ | ಅಣು | ತೆ | ತೆ | ತೆ | - | ಕ | ಕ | ತೆ | ತೆ | - | ತೆ |
| 7 | 14 | ಬ್ರಾಹ್ಮಣ | ವಿದ್ಯಾವಂತ | ವಿದ್ಯಾರ್ಥಿ | ಮೇ.ಮ. | ಅವಿಭಕ್ತ | ತೆ | ಕ | ತೆ | ಕ | - | ಕ | ಕ | ಹಿ/ತೆ | - | ಕ |
| 8 | 16 | ಆಗಸ | ಅವಿದ್ಯಾವಂತ | ವಿದ್ಯಾರ್ಥಿ | ಕೆಳಮಧ್ಯಮ | ಅಣು | ತೆ | ತೆ/ಕ | ತೆ | - | ಕ | ಕ | ತೆ | ತೆ | - | ತೆ/ಕ |
| 9 | 18 | ಕುರುಬ | ವಿದ್ಯಾವಂತ | ಮನೆಕೆಲಸ | ಮಧ್ಯಮ | ಅಣು | ತೆ | ಕ/ತೆ | ತೆ | ಕ | - | ಕ | ಕ | ತೆ/ಕ | ಕ | ಕ |
| 10 | 18 | ಕಮ್ಮ | ವಿದ್ಯಾವಂತ | ವಿದ್ಯಾರ್ಥಿ | ಮಧ್ಯಮ | ಅವಿಭಕ್ತ | ತೆ | ಕ/ತೆ | ತೆ | ಕ | - | ಕ | ಕ | ತೆ/ಕ | ಕ | ಕ |
| 11 | 21 | ನೇಕಾರ | ವಿದ್ಯಾವಂತ | ವಿದ್ಯಾರ್ಥಿ | ಮೇ.ಮ. | ಅಣು | ತೆ | ಕ/ತೆ | ತೆ | ಕ | - | ಕ | ಕ | ತೆ/ಕ | ಕ | ಕ |
| 12 | 22 | ವೈಶ್ಯ | ವಿದ್ಯಾವಂತ | ವಿದ್ಯಾರ್ಥಿ | ಮೇ.ಮ. | ಅಣು | ತೆ/ಕ | ತೆ/ಕ | ತೆ/ಕ | ಕ | - | ಕ | ಕ | ತೆ/ಕ | ಕ/ತೆ | ಕ/ತೆ |
| 13 | 24 | ವೈಶ್ಯ | ವಿದ್ಯಾವಂತ | ಗೃಹಿಣಿ | ಮೇ.ಮ. | ಅಣು | ತೆ | ಕ/ತೆ | ತೆ/ಕ | ಕ | - | ಕ/ತೆ | ಕ | ತೆ/ಕ | ಕ/ತೆ | ಕ/ತೆ |
| 14 | 28 | ನಾಯ್ಡು | ವಿದ್ಯಾವಂತ | ಗೃಹಿಣಿ | ಉನ್ನತ | ಅವಿಭಕ್ತ | ತೆ | ಕ | ತೆ | ತೆ | - | ತೆ/ಕ | ತೆ | ತೆ | - | ತೆ/ಕ |
| 15 | 33 | ಪ.ಪಂ. | ವಿದ್ಯಾವಂತ | ಬ್ಯಾಂಕ್ | ಮೇ.ಮ. | ಅಣು | ತೆ/ಕ | ಕ | ತೆ | ಕ | ಕ/ತೆ | ಕ | ತೆ | ತೆ | ಕ/ತೆ | ಕ/ತೆ |
| 16 | 38 | ಕಮ್ಮ | ವಿದ್ಯಾವಂತ | ಗೃಹಿಣಿ | ಮಧ್ಯಮ | ಅಣು | ತೆ | ಕ | ತೆ | ತೆ | - | ಕ | ತೆ | ತೆ | - | ಕ/ತೆ |
| 17 | 45 | ಕುರುಬ | ವಿದ್ಯಾವಂತ | ಟೈಲರ್ | ಮಧ್ಯಮ | ಅಣು | ತೆ | ಕ/ತೆ | ತೆ | ತೆ | ಕ/ತೆ | ಕ/ತೆ | ತೆ | ತೆ/ಕ | ಕ/ತೆ | ಕ/ತೆ |
| 18 | 52 | ಬ್ರಾಹ್ಮಣ | ವಿದ್ಯಾವಂತ | ಗೃಹಿಣಿ | ಮೇ.ಮ. | ಅವಿಭಕ್ತ | ತೆ | ತೆ/ಕ | ತೆ | ತೆ | - | ಕ/ತೆ | ತೆ | ತೆ/ಕ | - | ತೆ/ಕ |
| 19 | 60 | ಪಜಾ | ಅವಿದ್ಯಾವಂತ | ಕೂಲಿ | ಕೆಳ | ಅಣು | ತೆ | ತೆ | ತೆ | - | ಕ/ತೆ | ತೆ/ಕ | ತೆ | ತೆ | - | ತೆ |

# ಪುರುಷರಲ್ಲಿ ಭಾಷಾ ಬಳಕೆಯ ಆವರಣಗಳು

## ಕೋಷ್ಟಕ - 2

| ಕ್ರ.ಸ | ವಯಸ್ಸು | ಜಾತಿ | ಶಿಕ್ಷಣ | ವೃತ್ತಿ | ವರ್ಗ ವಿಧಾನ | ಕುಟುಂಬ | ಮನೆ | ಅಕ್ಕಪಕ್ಕ | ಸಂಬಂಧಿಕರು | ಶಾಲೆಯಲ್ಲಿ | ಕೆಲಸ ಮಾಡುವ ಕಡೆ | ಮಾರುಕಟ್ಟೆ | ಪ್ರಾರ್ಥನೆ | ಟಿ.ವಿ. ನೋಡುವುದು | ಕಚೇರಿಗಳಲ್ಲಿ | ಸ್ನೇಹಿತರು |
|---|---|---|---|---|---|---|---|---|---|---|---|---|---|---|---|---|
| 1 | 10 | ಅಗಸ | ಅವಿದ್ಯಾವಂತ | ಕೂಲಿ | ಕೆಳ | ಅಣು | ತೆ | ತೆ | ತೆ | - | ತೆ | ತೆ | ತೆ | ಕ/ತೆ | - | ತೆ |
| 2 | 10 | ಪ.ಪಂ | ವಿದ್ಯಾವಂತ | ವಿದ್ಯಾರ್ಥಿ | ಕೆಳಮಧ್ಯಮ | ಅಣು | ತೆ | ತೆ/ಕ | ತೆ | ಕ | - | ಕ | ತೆ | ಹಿ/ತೆ | - | ಕ |
| 3 | 11 | ಬ್ರಾಹ್ಮಣ | ವಿದ್ಯಾವಂತ | ವಿದ್ಯಾರ್ಥಿ | ಮೇ.ಮ. | ಅವಿಭಕ್ತ | ತೆ | ಕ | ತೆ | ಕ | - | ಕ | ಕ | ತೆ/ಹಿ | - | ಕ |
| 4 | 12 | ಕಮ್ಮ | ವಿದ್ಯಾವಂತ | ವಿದ್ಯಾರ್ಥಿ | ಮಧ್ಯಮ | ಅಣು | ತೆ | ಕ | ತೆ | ಕ | - | ಕ | ತೆ | ಹಿ/ಕ | - | ಕ |
| 5 | 12 | ಪಂಪ | ವಿದ್ಯಾವಂತ | ವಿದ್ಯಾರ್ಥಿ | ಮೇ.ಮ. | ಅಣು | ಕ | ಕ | ತೆ | ಕ | - | ಕ | ಕ | ಹಿ/ತೆ | - | ಕ |
| 6 | 14 | ಪ.ಪಂ | ವಿದ್ಯಾವಂತ | ವಿದ್ಯಾರ್ಥಿ | ಮೇ.ಮ. | ಅಣು | ಕ/ತೆ | ಕ | ತೆ | ಕ | - | ಕ | ಕ | ತೆ | - | ಕ |
| 7 | 18 | ಅಗಸ | ಅವಿದ್ಯಾವಂತ | ಇಸ್ತ್ರಿ | ಕೆಳಮಧ್ಯಮ | ಅಣು | ತೆ | ತೆ/ಕ | ತೆ | - | ಕ | ಕ | ತೆ | ತೆ | - | ತೆ/ಕ |
| 8 | 19 | ನಾಯ್ಡು | ವಿದ್ಯಾವಂತ | ಖಾಸಗಿ | ಉನ್ನತ | ಅವಿಭಕ್ತ | ತೆ | ಕ | ತೆ | ಕ | ಕ/ತೆ | ಕ | ಕ | ತೆ | - | ಕ |
| 9 | 22 | ಕುರುಬ | ವಿದ್ಯಾವಂತ | ವಿದ್ಯಾರ್ಥಿ | ಮಧ್ಯಮ | ಅಣು | ತೆ | ಕ | ತೆ | ಕ | - | ಕ | ಕ | ತೆ | ಕ | ಕ/ತೆ |
| 10 | 24 | ಕುರುಬ | ವಿದ್ಯಾವಂತ | ಪೊಲೀಸ್ | ಮಧ್ಯಮ | ಅಣು | ತೆ | ಕ/ತೆ | ತೆ | ಕ | ಕ/ತೆ | ಕ | ಕ | ಹಿ/ತೆ | ಕ | ತೆ/ಕ |
| 11 | 26 | ವೈಶ್ಯ | ವಿದ್ಯಾವಂತ | ಇಂಜಿನಿಯರ್ | ಮಧ್ಯಮ | ಅಣು | ಕ | ಕ/ತೆ | ತೆ/ಕ | ಕ | ಕ | ಕ | ಕ | ತೆ | ಕ | ಕ/ತೆ |
| 12 | 30 | ಪ.ಜಾ | ಅವಿದ್ಯಾವಂತ | ಕೂಲಿ | ಕೆಳ | ಅವಿಭಕ್ತ | ತೆ | ತೆ/ಕ | ತೆ | - | ಕ | ಕ | ತೆ | ತೆ | ಕ/ತೆ | ತೆ |
| 13 | 34 | ನಾಯ್ಡು | ವಿದ್ಯಾವಂತ | ಕಟ್ಟಡ ಗುತ್ತಿಗೆ | ಉನ್ನತ | ಅವಿಭಕ್ತ | ತೆ | ಕ | ತೆ | ತೆ | ಕ/ತೆ | ಕ/ತೆ | ತೆ | ತೆ/ಹಿ | ಕ/ತೆ | ಕ/ತೆ |
| 14 | 37 | ಕಮ್ಮ | ವಿದ್ಯಾವಂತ | ಖಾಸಗಿ | ಮಧ್ಯಮ | ಅಣು | ತೆ | ಕ | ತೆ | ಕ | ಕ | ಕ | ತೆ | ತೆ/ಹಿ | - | ಕ/ತೆ |
| 15 | 38 | ಪ.ಪಂ. | ವಿದ್ಯಾವಂತ | ರೈಲ್ವೆ | ಮೇ.ಮ. | ಅಣು | ತೆ/ಕ | ಕ | ತೆ | ಕ | ತೆ/ಕ | ತೆ/ಕ | ತೆ | ತೆ | ಕ/ತೆ | ತೆ/ಕ |
| 16 | 44 | ಬ್ರಾಹ್ಮಣ | ವಿದ್ಯಾವಂತ | ಇಂಜಿನಿಯರ್ | ಮೇ.ಮ. | ಅವಿಭಕ್ತ | ತೆ | ಕ | ತೆ | ಕ | ಕ/ತೆ | ಕ | ತೆ | ತೆ | - | ಕ |
| 17 | 49 | ಅಗಸ | ಅವಿದ್ಯಾವಂತ | ಇಸ್ತ್ರಿ | ಕೆಳಮಧ್ಯಮ | ಅಣು | ತೆ | ಕ/ತೆ | ತೆ | - | ಕ | ಕ | ತೆ | ತೆ | ಕ/ತೆ | ತೆ |
| 18 | 56 | ಕುರುಬ | ವಿದ್ಯಾವಂತ | ಖಾಸಗಿ | ಮಧ್ಯಮ | ಅಣು | ತೆ | ಕ/ತೆ | ತೆ | ತೆ | ತೆ/ಕ | ತೆ/ಕ | ತೆ | ತೆ | - | ತೆ/ಕ |
| 19 | 58 | ಕಮ್ಮ | ಅವಿದ್ಯಾವಂತ | ಕೃಷಿ | ಮಧ್ಯಮ | ಅವಿಭಕ್ತ | ತೆ | ತೆ/ಕ | ತೆ | - | ತೆ/ಕ | ಕ | ತೆ | ತೆ | - | ತೆ |
| 20 | 63 | ಪ.ಜಾ | ಅವಿದ್ಯಾವಂತ | ಕೂಲಿ | ಕೆಳ | ಅಣು | ತೆ | ತೆ | ತೆ | - | ಕ/ತೆ | ತೆ | ತೆ | ತೆ | - | ತೆ |

ಕೋಷ್ಟಕ - 2 ರಲ್ಲಿ ಕಾಣುವಂತೆ ತೆಲುಗು - ಕನ್ನಡ ದ್ವಿಭಾಷಿಕರಾದ ಪುರುಷರಲ್ಲಿ ಕೆಳವರ್ಗ, ಕೆಳ ಮಧ್ಯಮವರ್ಗದ ಅವಿದ್ಯಾವಂತ ಪುರುಷರಲ್ಲಿ ಮೊದಲ ತಲೆಮಾರುಗಳಲ್ಲಿ ಭಾಷೆಯನ್ನು ಹೆಚ್ಚು ಉಳಿಸಿಕೊಂಡಿದ್ದಾರೆ. ಇವರು ಕೂಲಿ ಇತ್ಯಾದಿ ಉದ್ಯೋಗಗಳಿಗಾಗಿ ಆಂಶಿಕ ಪಲ್ಲಟವನ್ನು ಕನ್ನಡ ಭಾಷೆಗೆ ಹೊಂದಿದವರಾಗಿದ್ದಾರೆ. ಇವರು ಭಾಷೆಯನ್ನು ಉಳಿಸಿಕೊಳ್ಳುವಲ್ಲಿ ಒಂದೆಡೆ ಇವರು ನೆಲೆಸಿರುವ ವಾಸಸ್ಥಾನ ಕಸುಬುಗಳು ಕಾರಣವಾಗಿದ್ದರೆ, ಇವರುಗಳು ಅವಿಭಕ್ತ ಕುಟುಂಬಗಳಲ್ಲಿ ನೆಲೆಸಿರುವುದೂ ಭಾಷೆಯನ್ನು ಉಳಿಸಿಕೊಳ್ಳಲು ಕಾರಣವಾಗಿದೆ. ಮಧ್ಯಮ, ಮೇಲ್ಮಧ್ಯಮ, ಉನ್ನತ ವರ್ಗಗಳಲ್ಲಿರುವವರು ಮನೆ ಆವರಣಗಳಲ್ಲೂ ಕೆಲವರು ಕನ್ನಡ ಬಳಸುತ್ತಿರುವುದು ಕಾಣುತ್ತಿದೆ. ಕಾರಣ ತೆಲುಗನ್ನು ಕುಟುಂಬದ ಇತರರೊಂದಿಗೆ ಮಾತನಾಡುತ್ತಿದ್ದರೂ ಮಕ್ಕಳೊಂದಿಗೆ ಕನ್ನಡ ಬಳಸುವ ಅವಶ್ಯಕತೆಗಳು ಇದೆ. ಇದು ಹೆಚ್ಚು ವಿದ್ಯಾವಂತ ಕುಟುಂಬಗಳಲ್ಲಿ ಅಣು ಕುಟುಂಬಗಳಲ್ಲಿ ಕೆಲವೆಡೆ ಕಂಡು ಬಂದಿದ್ದರೆ, ಇನ್ನು ಕೆಲವೆಡೆ ಪೋಷಕರು ಅವಿದ್ಯಾವಂತರಾಗಿದ್ದರೂ ಮಕ್ಕಳೊಂದಿಗೆ ಕನ್ನಡದಲ್ಲಿ ತಂದೆ ಮಾತ್ರ ಮಾತನಾಡುವುದು ಕಾಣಲಾಗಿದೆ. ತಾಯಿಯೊಂದಿಗೆ ಮಕ್ಕಳು ತೆಲುಗಿನಲ್ಲೆ ಮಾತನಾಡುತ್ತಾರೆ. ಜೊತೆಗೆ ಉದ್ಯೋಗದ ಕಾರಣಗಳಿಗಾಗಿ ಸಾಮಾಜಿಕ ಸಂಪರ್ಕವು ಕನ್ನಡದ ಸಂದರ್ಭಗಳಲ್ಲೆ ಎದುರಾಗಿರುವುದರಿಂದ ಕನ್ನಡವನ್ನು ಕಲಿತು ಬಳಸುವ ಅವಶ್ಯಕತೆಗಳು ಪುರುಷರಲ್ಲಿ ಹೆಚ್ಚಾಗಿದೆ. ಇದು ತಲೆಮಾರುಗಳಲ್ಲಿ ಇನ್ನಷ್ಟು ಹೆಚ್ಚುತ್ತಿದೆ. ಆದರೆ ಎಲ್ಲರೂ ಮನೆ ಆವರಣ ಮತ್ತು ಸಂಬಂಧಿಕರಲ್ಲಿ ಸ್ವಭಾಷೆಯನ್ನು ಉಳಿಸಿಕೊಂಡಿರುವಂತಿದೆ.

ಭಾಷಾ ಬಳಕೆಯ ಆವರಣಗಳನ್ನು ನೋಡಿದಾಗ ದ್ವಿಭಾಷಿಕರಾದವರಲ್ಲಿ ತಲೆಮಾರುಗಳಲ್ಲಿ ತೆಲುಗು ಭಾಷೆ ಪಲ್ಲಟಗೊಳ್ಳುತ್ತಿರುವುದರ ಜೊತೆಗೆ ಕೆಲವು ಆವರಣಗಳಲ್ಲಿ ಭಾಷೆ ಉಳಿದುಕೊಂಡಿರುವುದು ಕಾಣುತ್ತಿದೆ. ಹಾಗಾದರೆ ಈ ಭಾಷಿಕರು ಯಾವ ರೀತಿಯಲ್ಲಿ ಭಾಷೆಯನ್ನು ಉಳಿಸಿಕೊಳ್ಳಲು ಪ್ರಯತ್ನಿಸಿದ್ದಾರೆ. ಭಾಷೆಯನ್ನು ಉಳಿಸಿಕೊಳ್ಳುವಲ್ಲಿ ಯಾವ ಯಾವ ಸಂಗತಿಗಳು ಪೂರಕವಾಗಿವೆ. ತೆಲುಗು - ಕನ್ನಡ ದ್ವಿಭಾಷಿಕರಾದವರಲ್ಲಿ ಅನೇಕರು ಕೆಳವರ್ಗ, ಕೆಳಮಧ್ಯಮವರ್ಗದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಭಾಷಿಕರು ಒಂದೇ ಪ್ರದೇಶದಲ್ಲಿ ಒಟ್ಟಿಗೆ ವಾಸಿಸುತ್ತಿದ್ದಾರೆ. ಇಂತಹ ಸ್ಥಳಗಳೆಲ್ಲಾ ಪುಟ್ಟ ಪುಟ್ಟ ಭಾಷಾ ದ್ವೀಪಗಳಂತೆ ಗೋಚರಿಸುತ್ತಿವೆ. ಇಂತಹ ಭಾಷಾ ದ್ವೀಪಗಳಲ್ಲಿ ನೆಲೆಸಿರುವ ತೆಲುಗು ಭಾಷಿಕರನೇಕರಿಗೆ ದಿನನಿತ್ಯದ ಹಲವು ವ್ಯವಹಾರಗಳು ತಮ್ಮ ಸುತ್ತ - ಮುತ್ತಲ ತೆಲುಗಿನ ಸಾಮಾಜಿಕ ಸಂದರ್ಭಗಳಲ್ಲೆ ಮುಗಿದುಹೋಗಿರುತ್ತವೆ. ಇಂತಹ ಭಾಷಿಕರಿಗೆ ಉದ್ಯೋಗದ ಕಾರಣಗಳಿಗಾಗಿ, ಕೂಲಿಗಾಗಿ ಮಾತ್ರವೇ ಕನ್ನಡ ಬಳಸುವ ಅವಕಾಶ ಉಂಟಾಗಿರುತ್ತದೆ.

ಅನೇಕ ದ್ವಿಭಾಷಿಕ ಕುಟುಂಬಗಳಲ್ಲಿ ವಲಸಿಗ ತೆಲುಗರು ಅವಿಭಕ್ತ ಕುಟುಂಬಗಳಲ್ಲಿ ನೆಲೆಸಿದ್ದಾರೆ. ಕುಟುಂಬದ ಸದಸ್ಯರೆಲ್ಲಾ ಒಟ್ಟಾಗಿ ಒಂದೇ ಕುಟುಂಬದಲ್ಲಿ ನೆಲೆಸಿರುವುದರಿಂದಲೂ, ಸುತ್ತ - ಮುತ್ತಲ ಪರಿಸರದವರ ಜೊತೆಗೆ

ಹೆಚ್ಚು ತಮ್ಮ ಭಾಷೆಯನ್ನು ಬಳಸುವುದರಿಂದ ತೆಲುಗು ಸಿನಿಮಾ, ಈ ಟಿ.ವಿ., ಜೆಮಿನಿ ಟಿ.ವಿ. ಗಳಲ್ಲಿ ಬರುವ ತೆಲುಗು ಕಾರ್ಯಕ್ರಮಗಳನ್ನು ನೋಡುವುದು, ಸದಾ ತೆಲುಗು ಹಾಡುಗಳನ್ನು ರೇಡಿಯೋದಲ್ಲಿ ಕೇಳುವುದು, ಗುಂಪು - ಗುಂಪಾಗಿ ಹರಟೆ ಹೊಡೆಯುವುದರಿಂದಲೂ ಭಾಷೆಯನ್ನು ಮನೆ ಆವರಣ ಮತ್ತು ತಾವು ವಾಸವಾಗಿರುವ ಸುತ್ತ - ಮುತ್ತಲ ಪರಿಸರದಲ್ಲಿ ಉಳಿಸಿಕೊಂಡಿದ್ದಾರೆ. ಜೊತೆಗೆ ತಾಯ್ನಾಡಿನ ಸಂಬಂಧವಿರುವುದರಿಂದಲೂ, ವೈವಾಹಿಕ ಸಂಬಂಧಗಳನ್ನು ತಾಯ್ನಾಡಿನೊಂದಿಗೆ ಬೆಳೆಸುತ್ತಿರುವುದರಿಂದಲೂ, ಹೆಚ್ಚಿನ ಸಾಮಾಜಿಕ ಸಂಪರ್ಕ ಮೇಲ್ಜಾತಿ, ಮೇಲ್‌ವರ್ಗದವರ ಜೊತೆಗೆ ಉಂಟಾಗದ ಕಾರಣವಾಗಿಯೂ ಈ ಭಾಷಿಕರಲ್ಲಿ ಭಾಷೆಯೂ ಉಳಿದಿದೆ. ವಿವಾಹದ ಪತ್ರಿಕೆಗಳನ್ನು ಮುದ್ರಿಸುವಾಗ ಕನ್ನಡ ಮತ್ತು ತೆಲುಗು ಎರಡೂ ಭಾಷೆಗಳಲ್ಲಿ ಮುದ್ರಿಸುತ್ತಾರೆ. ಇವರಲ್ಲಿ ಮಹಿಳೆಯರಲ್ಲೆ ಭಾಷಾ ಸಂಗೋಪನೆ ಹೆಚ್ಚಾಗಿರುವುದನ್ನು ಕಾಣಲಾಗಿದೆ.

ಇನ್ನು ಮೇಲ್‌ವರ್ಗಗಳಲ್ಲಿನ ಮಹಿಳೆಯರೂ ಸಹ ತೆಲುಗಿನಲ್ಲಿ ಸಿನಿಮಾ, ಧಾರವಾಹಿ ಇತ್ಯಾದಿಗಳನ್ನು ನೋಡುವುದರ ಮೂಲಕ ತೆಲುಗು ವಾರಪತ್ರಿಕೆ, ದಿನಪತ್ರಿಕೆಗಳನ್ನು ಓದುವುದರ ಮೂಲಕ ತೆಲುಗು ಸ್ನೇಹಿತ, ಸಂಬಂಧಿಕರೊಂದಿಗೆ ಹೆಚ್ಚಿನ ಸಂಪರ್ಕವನ್ನಿಟ್ಟುಕೊಳ್ಳುವುದರ ಮೂಲಕ ಆಂಧ್ರದೊಂದಿಗಿನ ವ್ಯಾಪಾರ - ವಾಣಿಜ್ಯ, ರಾಜಕೀಯ ಸಂಬಂಧಗಳಿಂದಾಗಿ, ವೈವಾಹಿಕ ಸಂಬಂಧದಿಂದಾಗಿ, ಅವಿಭಕ್ತ ಕುಟುಂಬಗಳು ಇರುವುದರಿಂದಲೂ, ಇವರುಗಳಲ್ಲಿ ತೆಲುಗು ಭಾಷೆ ಉಳಿದಿದೆ. ಈ ವರ್ಗಗಳಲ್ಲಿನ ಮಹಿಳೆಯರ ಸ್ಥಾನಮಾನಗಳು ಉತ್ತಮವಾಗಿರುವುದರಿಂದ (ಕಮ್ಮರೆಡ್ಡಿ, ಕಾಪು, ನಾಯ್ಡು) ಹೊರಗಡೆ ಹೋಗಿ ಉದ್ಯೋಗ ಮಾಡುವಂತಹ ಪ್ರಸಂಗಗಳು ಕಡಿಮೆ ಪ್ರಮಾಣದಲ್ಲಿ ಇರುವುದರಿಂದಲೂ, ವೈವಾಹಿಕ ಸಂಬಂಧದಿಂದಾಗಿ ಹೆಚ್ಚಿನ ಮಹಿಳೆಯರು ಆಂಧ್ರದಿಂದ ಬಂದವರಾಗಿದ್ದಾರೆ. ಇವರುಗಳು ತೆಲುಗಿನಲ್ಲೆ ಸಾಕ್ಷರತೆಯನ್ನು ಪಡೆದುಕೊಂಡಿರುವವರಾಗಿರುವುದರಿಂದಲೂ ಭಾಷೆಯನ್ನು ಉಳಿಸಿಕೊಂಡಿದ್ದಾರೆ. ಈ ಕುಟುಂಬಗಳಲ್ಲಿನ ಮಕ್ಕಳು ಕನ್ನಡ - ಇಂಗ್ಲಿಶ್ ಭಾಷೆಗಳಲ್ಲಿ ಸಾಕ್ಷರತೆ ಪಡೆಯುತ್ತಿದ್ದು ತೆಲುಗು ಭಾಷೆಯನ್ನು ಮನೆ ಆವರಣದಲ್ಲಿ ಉಳಿದಂತೆ ಕೆಲವು ಸ್ನೇಹಿತ ಸಂಬಂಧಿಕರ ಬಳಿ ಮಾತ್ರ ಭಾಷೆಯನ್ನು ಬಳಸುತ್ತಿರುವಂತೆ ಕಾಣುತ್ತದೆ. ಪುರುಷರಲ್ಲಿ ಹೆಚ್ಚಿನವರು ವ್ಯಾಪಾರ - ವ್ಯವಾಹಾರಗಳಿಗಾಗಿ, ರಾಜಕೀಯ ಕಾರಣಗಳಿಗಾಗಿ ಭಾಷೆಯನ್ನು ಉಳಿಸಿಕೊಂಡಿದ್ದಾರೆ. ಈ ವರ್ಗದ ಭಾಷಿಕರಿಗೆ ತೆಲುಗು ಒಂದೆಡೆ ಪ್ರತಿಷ್ಠಿತ ಭಾಷೆಯಾಗಿದ್ದರೆ, ಮತ್ತೊಂದೆಡೆ ರಾಜಕೀಯವಾಗಿ 'ರಹದಾರಿ' ಇದ್ದಂತಿದೆ. ಏಕೆಂದರೆ ಬಳ್ಳಾರಿ ಜಿಲ್ಲೆಯ ರಾಜಕೀಯ ನಾಯಕರುಗಳಲ್ಲಿ ಹೆಚ್ಚಿನವರು ತೆಲುಗರೇ ಆಗಿದ್ದು, ಚುನಾವಣಾ ಸಂದರ್ಭಗಳಲ್ಲಿ ತೆಲುಗು ನಟ - ನಟಿಯರನ್ನು, ತೆಲುಗು ರಾಜಕೀಯ ನಾಯಕರನ್ನು ಕರೆಸಿ ಚುನಾವಣಾ ಪ್ರಚಾರ ಭಾಷಣ ಮಾಡಿಸುವುದು, ಚುನಾವಣೆಗಳಲ್ಲಿ ಹೆಚ್ಚು ತೆಲುಗರು ನೆಲೆಸಿರುವ ಭಾಷಾ ದ್ವೀಪಗಳಲ್ಲಿ ತೆಲುಗಿನಲ್ಲೆ ಭಾಷಣಗಳನ್ನು ಮಾಡುವುದು ಹೀಗೆ ಭಾಷೆಯನ್ನು ಉಳಿಸಿಕೊಳ್ಳಲಾಗುತ್ತಿದೆ.

ಭಾಷಾ ಪಲ್ಲಟ ಮತ್ತು ಸಂಗೋಪನೆ ಪ್ರಕ್ರಿಯೆಗಳಲ್ಲಿ ಸಾಮಾಜಿಕ ಅಂಶಗಳು, ಸಮಾಜೋಭಾಷಿಕ ಅಂಶಗಳು ಶಿಕ್ಷಣ, ಧರ್ಮ, ವಲಸೆ, ತಳಪೂರುವ ಪ್ರಕ್ರಿಯೆ, ಅಧಿಕೃತ ಭಾಷಾ ನೀತಿಯ ಕಾರ್ಯಕ್ರಮಗಳು, ಬಳಕೆ, ಭಾಷಾ ಮನೋಭಾವ, ಚಹರೆ, ಭೌಗೋಳಿಕ ರಾಜಕೀಯ ಅಂಶಗಳಲ್ಲಿ ಒಂದು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುತ್ತದೆ. ಈ ಎಲ್ಲಾ ಸಂಗತಿಗಳನ್ನು ನೋಡಿದಾಗ ಇಲ್ಲಿನ ದ್ವಿಭಾಷಾ ಸಂದರ್ಭದಲ್ಲಿ ಭಾಷಾ ಪಲ್ಲಟಗಳು ಹೆಚ್ಚುತ್ತಿದ್ದು, ಭಾಷಾ ಸಂಗೋಪನಾ ಕಾರ್ಯಗಳು ನಡೆಯುತ್ತಿದ್ದರೂ ದ್ವಿಭಾಷಾ ಸಂದರ್ಭವೊಂದು ಬದಲಾವಣೆಗೆ ಒಳಗಾಗುತ್ತಿರುವಂತೆ ಕಾಣುತ್ತಿದೆ. ಇದನ್ನು ಮುಂದಿನ ದಿನಗಳಲ್ಲಿ ಇನ್ನಷ್ಟು ಭಿನ್ನ ನೆಲೆಗಳಲ್ಲಿ ಗುರುತಿಸಬಹುದಾಗಿದೆ. ಅಲ್ಲದೆ ಎಲ್ಲಿಯವರೆಗೂ ಆಂಧ್ರದೊಂದಿಗೆ ಹಲವು ಸಂಬಂಧಗಳನ್ನು ಭಾಷಿಕರು ಉಳಿಸಿಕೊಳ್ಳಲು ಪ್ರಯತ್ನಿಸುತ್ತಾರೋ ಅಲ್ಲಿಯವರೆಗೂ ವೈಯಕ್ತಿಕ ನೆಲೆಯಲ್ಲಿ ದ್ವಿಭಾಷಿಕತೆ ಇದ್ದೇ ಇರುತ್ತದೆ. ಆದರೆ ಸಾಮುದಾಯಿಕ ನೆಲೆಯಲ್ಲಿ ಮಾತ್ರ ಬದಲಾವಣೆಗೆ ಹೆಚ್ಚು ಒಳಗಾಗಬಹುದು. ದ್ವಿಭಾಷಿಕರು ಸಾಕ್ಷರತೆಯ ಕೌಶಲವನ್ನು ಬೇರೆ ಭಾಷೆಯಲ್ಲಿ ಪಡೆದುಕೊಂಡು ತಮ್ಮ ಮನೆ ಭಾಷೆಯನ್ನು ಕೇವಲ ಮೌಖಿಕ ನೆಲೆಯಲ್ಲಿ ಉಳಿಸಿಕೊಳ್ಳುವುದರಿಂದ ಸಾಕ್ಷರತೆಯ ಕೌಶಲಗಳು ಕ್ರಮೇಣ ಗಟ್ಟಿಗೊಳ್ಳುತ್ತಾ, ಮನೆಭಾಷೆಯ ಸ್ಥಾನವನ್ನು ಪಲ್ಲಟಗೊಳಿಸಬಹುದು. ಇಂತಹ ಪರಿಣಾಮಗಳು ಮುಂಬರುವ ದಿನಗಳಲ್ಲಿ ನೋಡಬೇಕಿದೆ. "ಭಾರತದ ಇತರ ಪ್ರದೇಶಗಳಲ್ಲಿರುವ ಬೇರೆ - ಬೇರೆ ಭಾಷಿಕರು ದ್ವಿಭಾಷಿಕರಾಗುವ ಸನ್ನಿವೇಶ ಸಾಮಾನ್ಯವಾದುದು. ನಾಲ್ಕೈದು ತಲೆಮಾರುಗಳಲ್ಲಿ ದ್ವಿಭಾಷಾ ಕುಟುಂಬದಲ್ಲಿ ಹಿಂದೆ ಇದ್ದ ಮನೆ ಭಾಷೆ ಕಣ್ಮರೆಯಾಗಿ ಹೊಸ ಭಾಷೆಯ ಕಡೆಗೆ ಒಲವು ಮೂಡುತ್ತ ಹೋಗುವುದರಿಂದ ಯಾವುದೇ ವಲಸೆ ಹೋಗುವ ಸಮಾಜದಲ್ಲಿ ದ್ವಿಭಾಷಿಕತೆ ಸ್ಥಿರವಾಗಿ ನಿಲ್ಲುತ್ತದೆಯೆಂದು ಹೇಳಲಿಕ್ಕಾಗುವುದಿಲ್ಲ. ದೆಹಲಿಯಲ್ಲಿರುವ ಕನ್ನಡಿಗರು ಕನ್ನಡ ಸಂಘಗಳನ್ನು ಸ್ಥಾಪಿಸಿಕೊಂಡು ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುವ ಸಾಧ್ಯತೆ ಇದೆ. ಹೀಗೆ ಭಾಷೆ ತನ್ನ ಸಂವಹನ ಮಾಧ್ಯಮವನ್ನು ಭಾರತದಲ್ಲಿ ಜಾಗೃತವಾಗಿರಿಸುತ್ತದೆ ಎಂದು ತಿಳಿದರೂ ಆ ಪ್ರಯತ್ನಗಳು ಫಲಕಾರಿಯಾಗುವುದಿಲ್ಲ. ಆದರೆ ಒಂದು ಮಾತು ಮಾತ್ರ ಸತ್ಯ. ಭಾರತೀಯ ದ್ವಿಭಾಷಿಕತೆ ಸಾಮಾಜಿಕ, ಸಾಂಸ್ಕೃತಿಕ ಸಂಸ್ಥೆಗಳಿಂದ ಸಮರ್ಥಿತವಾದುದು. ಭಾರತೀಯ ಪರಿಸರದಲ್ಲಿ ದ್ವಿಭಾಷಿಕತೆ ಒಂದು ಸಾಮಾಜಿಕ ಅವಶ್ಯಕತೆಯಾಗಿದೆ". ಜಿ.ಎಂ.ಹೆಗಡೆ (1980 : 682)

"ಭಾರತೀಯ ದ್ವಿಭಾಷಿಕತೆಯ ಅತ್ಯಂತ ಸೂಕ್ಷ್ಮ ಲಕ್ಷಣವೇನೆಂದರೆ ವಿವಿಧ ಭಾಷೆಗಳಿಗೆ ವಿವಿಧ ಸಾಮಾಜಿಕ ಪಾತ್ರಗಳನ್ನು ನೀಡುವುದರ ಮೂಲಕ ರೂಪಿಸಿರುವ ಸಾಮಾಜಿಕ, ಸಾಂಸ್ಕೃತಿಕ ನಡವಳಿಕೆಯ ಸಂಕೀರ್ಣ ಮೊತ್ತ, ವಿವಿಧ ಭಾಷೆಗಳಿಗೆ ವಿವಿಧ ಪಾತ್ರಗಳಿರುವುದರಿಂದ, ಅವುಗಳು ಪ್ರತ್ಯೇಕ ಸಾಮಾಜಿಕ ಘಟಕಗಳಾಗಿ ವಿಂಗಡನೆಯಾಗಿರುವುದರಿಂದ ಅವುಗಳು ಉಳಿದುಕೊಳ್ಳುತ್ತವೆ. ಈ ಸಾಮಾಜಿಕ ಪಾತ್ರಗಳು ಒಂದಕ್ಕೊಂದು ಪ್ರತಿಸ್ಪರ್ಧಿಯಲ್ಲ. ಹೀಗಿರುವುದರಿಂದ ಭಾರತೀಯ ದ್ವಿಭಾಷಿಕತೆ ಅಸಂಘರ್ಷಾತ್ಮಕವಾದ ಸ್ಥಿರವಿನ್ಯಾಸವನ್ನು ಹೊಂದಿದೆ.

ಭಾರತೀಯ ದ್ವಿಭಾಷಿಕತೆ ಸಾವಯವ ಪರಿಕಲ್ಪನೆಯನ್ನಾಧರಿಸಿದ್ದಾಗಿದೆ. ಬಹುಭಾಷಿಗಳು ಸೌಹಾರ್ದಯುತವಾದ, ಸ್ಥಿರವಾದ ಮತ್ತು ಸಹಕಾರಿಯಾದ ಸಂಬಂಧವನ್ನು ಹೊಂದಿದವರಾಗಿರುತ್ತಾರೆ ಎಂಬುದನ್ನು ಹಲವು ಭಾಷಾ ಶಾಸ್ತ್ರಜ್ಞರು ಲಕ್ಷಣೀಕರಿಸಿದ್ದಾರೆ. ಆದರೆ ಅಸಾಮಾಜಿಕವಾಗಿ ಭಾರತದ ದ್ವಿ - ಬಹುಭಾಷಿಕತೆ ಸ್ಥಿರವಾಗಿಲ್ಲ, ಬದಲಾಗುತ್ತಿದೆ, ಬದಲಾವಣೆ ರಹಿತ ಸಮಾಜವಾಗಿ ಭಾಷಾಶಾಸ್ತ್ರಜ್ಞರು ಪರಿಭಾವಿಸಿದ್ದಾರೆ. ಸ್ಪರ್ಧಾರಹಿತ ಬಹುಭಾಷಿಕತೆಯನ್ನು ಮುಂದಿಟ್ಟಿದ್ದಾರೆ. ಭಾಷೆಗೂ ಸಾಮಾಜಿಕ ಬದಲಾವಣೆಗಳಿಗೂ ಅಂತರ್ಗತ ಸಂಬಂಧವಿದೆ. ಭಾರತದಲ್ಲಿನ ಶ್ರೇಣೀಕೃತ ಮತ್ತು ಸಾಮಾಜಿಕ ಬದಲಾವಣೆಯ ಚರಿತ್ರೆ ಭಾಷೆಗೆ ಸಂಬಂಧಿಸಿದ ಪ್ರಶ್ನೆಗಳನ್ನು ಅರ್ಥಮಾಡಿಕೊಳ್ಳಲು ಸಾಧ್ಯ. (ಕೈಲಾಸನಾಥ ಅಗರವಾಲ್ ಮತ್ತು ಆರ್.ಎಸ್.ಗುಪ್ತ 1998:64).

ಭಾರತದ ಸಂದರ್ಭದಲ್ಲಿ ದ್ವಿ - ಬಹುಭಾಷಿಕತೆಯ ಸಂದರ್ಭಗಳು ಸ್ಥಿರವಾದದ್ದು. ಇದು ಬದಲಾಗುವುದಿಲ್ಲ ಎನ್ನುವ ಹಲವು ಭಾಷಾ ವಿಜ್ಞಾನಿಗಳ ಏಕಮುಖ ದೃಷ್ಟಿಕೋನಗಳನ್ನು ಒಪ್ಪಲಾಗದು. ಏಕೆಂದರೆ ಆಧುನಿಕ ಶತಮಾನದಲ್ಲಾಗುತ್ತಿರುವ ಬದಲಾವಣೆಗಳಿಂದಾಗಿ ಸಾಮಾಜಿಕ ವ್ಯವಸ್ಥೆ, ರಾಜಕೀಯ ಪರಿಸರ, ಶಿಕ್ಷಣ ವ್ಯವಸ್ಥೆ, ಎಲ್ಲವೂ ಸಹ ಬದಲಾಗುವ ಒತ್ತಡವನ್ನು ಎಲ್ಲಾ ಕ್ಷೇತ್ರಗಳಲ್ಲೂ ಒಡ್ಡುತ್ತಿರುತ್ತವೆ. ಹೀಗಿರುವಾಗ ಬದಲಾವಣೆ ಎನ್ನುವುದು ನಿಧಾನವಾಗಿ ಆಗಬಹುದು ಅಥವಾ ತೀವ್ರಗತಿಯಲ್ಲಿ ಆಗಬಹುದು. ನಡೆಯುವ ಪ್ರಕ್ರಿಯೆ. ಈ ಬದಲಾವಣೆಯ ಪ್ರಕ್ರಿಯೆಯಲ್ಲಿ ಸ್ಥಿರ ಭಾಷಿಕ ಸಂದರ್ಭಗಳು ಸಹ ಅನೇಕ ರೀತಿಯ ಪಲ್ಲಟಗಳಿಗೆ, ಬದಲಾವಣೆಗೆ ಒಳಗಾಗುವಂಥದ್ದು, ಜಾಗತೀಕರಣ ಸಂದರ್ಭದಲ್ಲಿ ಉಂಟಾಗುತ್ತಿರುವ ಬದಲಾವಣೆಯನ್ನು ಸುಲಭವಾಗಿ ಗುರುತಿಸುವುದಾದರೆ, ಎಲ್ಲಾ ಭಾರತೀಯ ಭಾಷೆಗಳನ್ನಾಡುವ, ಮಧ್ಯಮ, ಮೇಲ್‌ವರ್ಗ ಮತ್ತು ಉನ್ನತ ವರ್ಗಗಳಲ್ಲಿ ಭಾಷಿಕರು ಹೆಚ್ಚಿನ ಸಂದರ್ಭದಲ್ಲಿ ಇಂಗ್ಲಿಶ್ ಭಾಷೆಯಲ್ಲಿ ಸಾಕ್ಷರತೆಯ ಕೌಶಲಗಳನ್ನು ಪಡೆದುಕೊಳ್ಳುತ್ತಿರುವುದರ ಮೂಲಕ ಉನ್ನತ ಆರ್ಥಿಕ, ಸಾಮಾಜಿಕ, ಅಧಿಕಾರದ ಸ್ಥಾನಮಾನಗಳನ್ನು ಪಡೆಯುತ್ತಿರುವ ಲಕ್ಷಣಗಳು ಹೆಚ್ಚಿನ ಸಂದರ್ಭಗಳಲ್ಲಿ ಕಾಣುತ್ತಿವೆ. ಪರಿಣಾಮ ಭಾಷಿಕರ ಸ್ವಭಾಷೆಗಳು ಕೇವಲ ಮೌಖಿಕ ಭಾಷೆಗಳಾಗಿ ಉಳಿಯುವಂಥಾಗಬಹುದು. ಮುಂದೆ ಇದರ ಪರಿಣಾಮಗಳ ಬಗೆಗೆ ಕಾದು ನೋಡಬೇಕಿದೆ. ಸಿಂಧಿ ಭಾಷೆಗೆ ಇರುವ ಆತಂಕವನ್ನು ಎದುರಿಸಬೇಕಾದ ಸಂದರ್ಭವೂ ಸಹ ಬರಬಹುದು. ಆದ್ದರಿಂದ ಭಾರತೀಯ ಭಾಷೆಗಳು ತಮ್ಮತಮ್ಮ ಸ್ವಭಾಷೆಗಳನ್ನು ಉಳಿಸಿಕೊಳ್ಳುವಲ್ಲಿ ಹೊಸ ತಂತ್ರಗಳನ್ನು ಹುಡುಕಿಕೊಳ್ಳಬೇಕಿದೆ. ಹೊಸ ಸವಾಲುಗಳನ್ನು ಎದುರಿಸಬೇಕಿದೆ. ಇದಕ್ಕೆ ನಮ್ಮ ಸಂದರ್ಭದಲ್ಲೆ ಹಲವು ಹೊಸ ಸವಾಲುಗಳನ್ನು ಎದುರಿಸುವ ಸಾಧ್ಯತೆಗಳ ಬಗೆಗೆ ಪ್ರಯತ್ನಗಳಾಗಬೇಕಿದೆ.

## ನುಡಿಬೆರಕೆ ಮತ್ತು ನುಡಿಜಿಗಿತ

ದ್ವಿಭಾಷಿಕ ಸನ್ನಿವೇಶಗಳಲ್ಲಿ ಭಾಷಿಕರ ವ್ಯವಹಾರದಲ್ಲಿ ಕಂಡುಬರುವ ಮುಖ್ಯ ಭಾಷಿಕ ಪ್ರಕ್ರಿಯೆಗಳಾಗಿ ನುಡಿಬೆರಕ ಮತ್ತು ನುಡಿಜಿಗಿತಗಳನ್ನು ಗುರುತಿಸುತ್ತಾರೆ. ಇಂಗ್ಲಿಶ್‌ನ Code mixing ಗೆ ಸಂವಾದಿಯಾಗಿ ನುಡಿಬೆರಕೆ, ನುಡಿಮಿಶ್ರಣ, ಭಾಷಾ ಮಿಶ್ರಣ ಎಂದೂ, Code Switching ಗೆ ಸಂವಾದಿಯಾಗಿ ನುಡಿಜಿಗಿತ, ನುಡಿಪಲ್ಲಟ ಎಂಬ ಪದಗಳನ್ನು ಕನ್ನಡದ ಸಂದರ್ಭದಲ್ಲಿ ಸಾಮಾಜಿಕ ಭಾಷಾಶಾಸ್ತ್ರದ ಬರಹಗಳಲ್ಲಿ ಬಳಸಲಾಗುತ್ತಿದೆ. "ಒಂದು ಭಾಷೆಯ ವಾಕ್ಯವನ್ನು ಆಡುವಾಗ / ಬರೆಯುವಾಗ ಇನ್ನೊಂದು ಭಾಷೆಯ ಭಾಷಾಂಶಗಳನ್ನು ಬೆರೆಸುವುದು ನುಡಿಬೆರಕೆ. ಇಡೀ ವಾಕ್ಯದ ಹಿಂದಿನ ನಿಯಮ ಒಂದು ಭಾಷೆಯದಾಗಿದ್ದು, ವಾಕ್ಯಾಂಶಗಳು ಮಾತ್ರ ಕೆಲವು ಇನ್ನೊಂದು ಭಾಷೆಯಿಂದ ಬಂದು ಸೇರುತ್ತದೆ. ನುಡಿಜಿಗಿತದಲ್ಲಿ ಒಂದು ವಾಕ್ಯವನ್ನು ಒಂದು ಭಾಷೆಯ ನಿಯಮಾನುಸಾರ ರಚಿಸಿ ಮುಗಿಸಿ ಆನಂತರ ಹೊಸ ವಾಕ್ಯವನ್ನು ಇಡಿಯಾಗಿ ಇನ್ನೊಂದು ಭಾಷೆಯಲ್ಲಿ ರಚಿಸಿ ಬಳಸಲಾಗುತ್ತದೆ. ವಾಕ್ಯದ ಆಚೆಗಿನ ಹಂತದಲ್ಲಿ ಈ ಬೆರಕೆ ನಡೆಯುತ್ತದೆ. ದ್ವಿಭಾಷಿಕರಲ್ಲಿ ನಡೆಯುವ ನುಡಿಬೆರಕೆಯ ಪ್ರಮಾಣ, ಉದ್ದೇಶಗಳು ಭಿನ್ನವಾಗಿರುತ್ತದೆ. ನುಡಿಜಿಗಿತ ಮಾತ್ರ ಬಹುಮಟ್ಟಿಗೆ ದ್ವಿಭಾಷಿಕರಲ್ಲೆ ನಡೆಯುವಂಥದ್ದು. ನುಡಿ ಬೆರಕೆ ದ್ವಿಭಾಷಿಕರಲ್ಲೆ ನಡೆಯುತ್ತದೆ ಎನ್ನುವಂತಿಲ್ಲ. ಎಷ್ಟೋ ವೇಳೆ ದ್ವಿಭಾಷಿಕ ಸನ್ನಿವೇಶಗಳಲ್ಲಿ ನಡೆಯುವ ಭಾಷಾಂಶಗಳನ್ನು ತಮ್ಮ ಭಾಷಿಕ ಸಂಕಥನಗಳಲ್ಲಿ ಸೇರಿಸಿಕೊಳ್ಳುತ್ತಾರೆ" ( ಡಾ. ಕೆ.ವಿ.ನಾರಾಯಣ 1998:19). 'ಒಂದು ಇಲ್ಲವೇ ಒಂದಕ್ಕಿಂತ ಹೆಚ್ಚು ಭಾಷೆಗಳಲ್ಲಿ ಒಂದರ ಘಟಕಗಳನ್ನು ಇನ್ನೊಂದಕ್ಕೆ ರವಾನಿಸುತ್ತಾ, ಮತ್ತೊಂದು ನಿಯಂತ್ರಿತ ಅಥವಾ ಅಷ್ಟೇನೂ ನಿಯಂತ್ರಿತವಲ್ಲದ ಹೊಸ ಭಾಷಿಕ ಪ್ರಕ್ರಿಯೆಯನ್ನು ರೂಪಿಸುವುದು ಭಾಷಾ ಮಿಶ್ರಣ'ವೆಂದು ಕಾಛ್ರು (1974) ರವರು ವ್ಯಾಖ್ಯಾನಿಸುತ್ತಾರೆ. ಈ ನುಡಿಮಿಶ್ರಣವೊಂದು ರೂಪುಗೊಳ್ಳುವುದು ದ್ವಿಭಾಷಿಕತೆಯಷ್ಟೆ ಹಳತಾದರೂ ಅದರ ಭಾಷಾ ವೈಜ್ಞಾನಿಕ ಹಾಗೂ ಸಾಮಾಜಿಕ ಭಾಷಾ ಶಾಸ್ತ್ರದ ನೆಲೆಗಳಲ್ಲಿ ಭಾಷಾ ಶಾಸ್ತ್ರಜ್ಞರು ದೃಷ್ಟಿ ಹಾಯಿಸುತ್ತಿರುವುದು ತೀರಾ ಈಚೆಗೆ.

ಈ ನುಡಿಜಿಗಿತ - ನುಡಿಮಿಶ್ರಣಗಳು ಏಕೆ ನಡೆಯುತ್ತವೆ? ದ್ವಿಭಾಷಿಕರ ಯಾವ ಉದ್ದೇಶಗಳನ್ನು ಪೂರೈಸಲು ಈ ಕ್ರಿಯೆಗಳು ನಡೆಯುತ್ತಿರುತ್ತವೆ? ಎಂಬುದನ್ನು ಕುರಿತಂತೆ ಯೋಚಿಸುವಾಗ ಈ ಸಂದರ್ಭದಲ್ಲಿ ಭಾಷಾ ಆಯ್ಕೆಯೂ ಮುಖ್ಯವಾಗುವಂತಿದೆ. ದ್ವಿಭಾಷಿಕ ಸನ್ನಿವೇಶಗಳಲ್ಲಿ ಉಂಟಾಗುವ ಈ ಭಾಷಾ ಪ್ರಕ್ರಿಯೆಗಳ ಹಿಂದೆ ಭಾಷಾ ಆಯ್ಕೆಯು ಪ್ರಧಾನವಾಗಿದ್ದು, ದ್ವಿಭಾಷಿಕರು ಯಾವ ಸಂದರ್ಭದಲ್ಲಿ ಎಷ್ಟು ಹೇಗೆ ಭಾಷೆಯನ್ನು ಬಳಸುತ್ತಾರೆ. ಭಾಷೆಯನ್ನು ಬಳಸುವುದರ ಮೂಲಕ ತನ್ನ ಸ್ಥಾನವನ್ನು ಹೇಗೆ ಗುರುತಿಸಿಕೊಳ್ಳಬಹುದು ಎನ್ನುವುದೂ ಸಹ ಮುಖ್ಯವಾಗಿರುತ್ತದೆ. ಒಬ್ಬ ಭಾಷಿಕನ ಭಾಷಾ ಆಯ್ಕೆ ಸಾಮಾಜಿಕ ಪಾತ್ರವನ್ನು ಆಯ್ಕೆ ಮಾಡಿಕೊಳ್ಳುವಾಗ ಭಾಷೆಯು ಆಯಾ ಪಾತ್ರಕ್ಕೆಷ್ಟರ

ಮಟ್ಟಿಗೆ ಅಣಿಗೊಳಿಸುತ್ತದೆ ಅನ್ನುವುದರ ಮಟ್ಟಿಗೆ ಭಾಷಾ ಪಾತ್ರ ನಿಗದಿಯಾಗುತ್ತದೆ. ಕನ್ನಡ - ತೆಲುಗು ದ್ವಿಭಾಷಿಕರಲ್ಲಿ ಯಾವ - ಯಾವ ಸಂದರ್ಭಗಳಲ್ಲಿ ಯಾವ ಭಾಷೆಯನ್ನು ಬಳಸಬೇಕೆಂಬುದರ ಬಗೆಗೆ ಬಹುಮಟ್ಟಿಗೆ ಖಚಿತತೆ ಇರುವಂತೆ ಕಾಣುತ್ತದೆ. ಈ ದ್ವಿಭಾಷಿಕರ ಭಾಷಾ ಆಯ್ಕೆಯೆ ಇದಕ್ಕೆ ಸಾಕ್ಷಿ. ಈ ಭಾಷಾ ಆಯ್ಕೆಯು ವಯಸ್ಸು, ಲಿಂಗ, ಶಿಕ್ಷಣ, ಪ್ರತಿಷ್ಠೆ, ಆತ್ಮೀಯತೆ, ಅಧಿಕಾರದ ಸಂಬಂಧಗಳು, ಸಮಾಜೋಆರ್ಥಿಕ ಸ್ಥಾನ-ಮಾನಗಳು, ವಾಸಸ್ಥಳ, ಹೀಗೆ ಹಲವು ಅಂಶಗಳನ್ನು ಆಧರಿಸಿರುತ್ತವೆ. ಬಹುಮಟ್ಟಿಗೆ ನುಡಿಮಿಶ್ರಣದ ಸಂದರ್ಭಗಳು ಈ ಪರಿಸರದಲ್ಲಿ ಕಂಡುಬಂದಿರುವುದು ಕೆಲವೆಡೆಗಳಲ್ಲಿ ಮಾತ್ರ. ಕನ್ನಡದ ಭಾಷಿಕ ಸಂದರ್ಭಗಳಿಗೆ ಹೆಚ್ಚು ಒಳಗಾದ ತೆಲುಗು ಭಾಷಿಕರಲ್ಲಿ, ವ್ಯಾಪಾರದ ಸಂದರ್ಭಗಳಿಗೆ ಒಳಗಾದ ತೆಲುಗು ಭಾಷಿಕರಲ್ಲಿ, ವಯಸ್ಕ ಭಾಷಾ ಕಲಿಕೆಯ ಹಂತ ದಾಟಿದ ಮೇಲೆ ಕನ್ನಡವನ್ನು ಕಲಿತು ದ್ವಿಭಾಷಿಕರಾದ ತೆಲುಗು ವಲಸಿಗರಲ್ಲಿ, ವೈವಾಹಿಕ ಸಂಬಂಧದಿಂದುಂಟಾದ ದ್ವಿಭಾಷಿಕತೆಯಲ್ಲಿ, ನುಡಿಮಿಶ್ರಣದ ಸಂದರ್ಭವನ್ನು ಮುಖ್ಯವಾಗಿ ಕಾಣಲಾಗಿದೆ. ಹೆಚ್ಚು - ಹೆಚ್ಚು ದಿನನಿತ್ಯದ ವ್ಯವಹಾರಗಳಲ್ಲಿ ತೆಲುಗು ಭಾಷೆಯನ್ನು ಬಳಸುವವರು. ಕನ್ನಡಿಗರೊಂದಿಗೆ ಮಾತನಾಡುವ ಪ್ರಸಂಗಗಳು ಒದಗಿಬಂದಾಗ ಅವರ ಭಾಷಾ ಆಯ್ಕೆ ಕನ್ನಡವೇ ಆಗಿದ್ದರೂ ಸಂವಹನದ ಅವಧಿ ದೀರ್ಘವಾದಾಗ ಮಧ್ಯೆ - ಮಧ್ಯೆ ತೆಲುಗು ಭಾಷೆಯ ಅಕ್ಷರಗಳನ್ನೂ, ಪದಗುಚ್ಛಗಳನ್ನೂ ಮಿಶ್ರಗೊಳಿಸಿ ಸಂವಹನದ ಸಂದರ್ಭವೊಂದನ್ನು ಪೂರೈಸುತ್ತಾರೆ. ಏಕೆ ಈ ರೀತಿಯ ಸಂದರ್ಭ ಉಂಟಾಗುತ್ತದೆ ಕನ್ನಡದಲ್ಲಿ ತೆಲುಗು ಭಾಷೆಯನ್ನು ಮಿಶ್ರಗೊಳಿಸಿ ಮಾತನಾಡುತ್ತಿರುವವರು ಯಾರು ಈ ರೀತಿಯ ಮಿಶ್ರಣವನ್ನು ಮಾಡುತ್ತಾರೆ? ಕನ್ನಡ ಭಾಷೆ ಸರಿಯಾಗಿ ಗೊತ್ತಿಲ್ಲದ ಸಮಯದಲ್ಲಿ, ಕನ್ನಡದಲ್ಲೇ ಹೆಚ್ಚು ಹೊತ್ತು ಮಾತನಾಡಲು ಸಾಧ್ಯವಾಗದೇ ಇರುವಂತಹ ಸಂದರ್ಭಗಳಲ್ಲಿ ಕನ್ನಡ ಭಾಷೆಯ ಪದಗಳು ಬೇಗ ಹೊಳೆಯದೆ ಹೋದಾಗ, ಭಾಷೆ ಗೊತ್ತಿಲ್ಲದ ಅಪರಿಚಿತರೊಡನೆ, ಕತೆ, ಸಿನಿಮಾ ಕತೆ ಹೇಳುವ ಸಂದರ್ಭಗಳಲ್ಲಿ ಭಾಷಾ ಮಿಶ್ರಣ ಮಾಡುವ ಅವಶ್ಯಕತೆಗಳು ಒದಗುತ್ತವೆಂದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಾಣಲಾಗಿದೆ. ಇನ್ನು ಕೆಲವು ಕಡೆಗಳಲ್ಲಿ ಕನ್ನಡಿಗರ ಮನೆಗಳಲ್ಲಿ ಕೆಲಸ ಮಾಡುವ ತೆಲುಗು ಭಾಷಿಕರು ಕನ್ನಡಿಗರೊಂದಿಗೆ ಸಂವಹಿಸುವ ಸಂದರ್ಭಗಳಲ್ಲಿ, ವ್ಯಾಪಾರದ ಸಂದರ್ಭಗಳಲ್ಲಿಯೂ ಭಾಷಾ ಮಿಶ್ರಣದ ಸಂದರ್ಭಗಳು ಉಂಟಾಗುತ್ತವೆ. ಕೆಲವು ನುಡಿಮಿಶ್ರಣಕ್ಕೆ ಉದಾಹರಣೆಗಳು

1. ಹೊಸಪೇಟ್ಲಿಂದ ಬಲ್ಲಾರಿಗೆ ದಿನಾ ಓಡಾಡೋದು ಅಲವಾಟಾಗಿದೆ.
2. ಆ ಸ್ಕೂಲ್ ಮಕ್ಕಳು ಬಾಲ ಚಿದುಗು ಟೀಚರ್
3. ಅವಳು ಕರೆಂಟ್ ಬಿಲ್ ಕಟ್ಟಕ್ಕೆ ಹೋಗಾರಿ. ಇನ್ನೇನ್ ಇವಾಗ ಬಂದ್‌ಬಿಡ್ತಾದಿ
4. ನಮ್ಮ್ಮನ್ನನ ಮನೇಗೆ ಬಾಡಿಕ್ಕಿ ಇದಾರೆ
5. ನಮ್ಮ ಸುಜಾತ ಮದಿವಿಕ್ಕಿ ಒಂದು ಪಲ್ಲ ಬೀಮ್ ಬೇಕು
6. ಇವತ್ತು ಬಾನುವಾರ ಅಲ್ವ ಅದಕ್ಕೆ ಚಿಕನ್ ಪುಲ್ಸ್ ಮಾಡಿದೀವಿ

ಭಾಷಾ ದ್ವೀಪಗಳಲ್ಲಿ ನೆಲೆಸಿರುವ ತೆಲುಗು ಭಾಷಿಕ ಮಹಿಳೆಯರಲ್ಲಿ ಈ ರೀತಿಯ ನುಡಿಮಿಶ್ರಣದ ಸಂದರ್ಭಗಳು ಹೆಚ್ಚಾಗಿ ಕಾಣಬಹುದಾಗಿದೆ. ವೈವಾಹಿಕ ಸಂಬಂಧದಿಂದಾಗಿ ಉಂಟಾದ ದ್ವಿಭಾಷಿಕತೆಯಲ್ಲಿ ಮಹಿಳೆಯರಲ್ಲಿ ಈ ರೀತಿಯ ಮಿಶ್ರಣದ ಸಂದರ್ಭಗಳು ಕಾಣಬಹುದಾಗಿದೆ. ಏಕೆಂದರೆ ಔಪಚಾರಿಕವಾಗಿ ಕನ್ನಡವನ್ನು ಕಲಿತು ಬಳಸುತ್ತಿರುವುದರಿಂದ, ಮನೆಭಾಷೆ ಕಲಿತು ಅನೇಕ ವರ್ಷಗಳ ನಂತರದಲ್ಲಿ ಮತ್ತೊಂದು ಭಾಷೆಯನ್ನು ಕಲಿಯುವ ಸಂದರ್ಭ ಇಂತಹ ಮಹಿಳೆಯರಿಗೆ ಒದಗಿಬರುವುದರಿಂದ ಭಾಷಾ ಮಿಶ್ರಣಗಳು ಉಂಟಾಗುತ್ತವೆ. ಪುರುಷ ದ್ವಿಭಾಷಿಕರಲ್ಲಿ ಇಂತಹ ಭಾಷಾ ಮಿಶ್ರಣಗಳು ಬಹುಮಟ್ಟಿಗೆ ಕಡಿಮೆ. ಕೆಲವು ಜನಾಂಗಗಳಲ್ಲಿ ಮಾತ್ರ ಪುರುಷರಲ್ಲಿ ಮತ್ತು ಮಹಿಳೆಯರಲ್ಲಿ ಮತ್ತು ಇಬ್ಬರಲ್ಲೂ ಇಂತಹ ಮಿಶ್ರಣವಿರುವುದು ಕಾಣುತ್ತಿದೆ. ಉದಾಹರಣೆಗೆ ಹೊಸಪೇಟೆ ತಾಲ್ಲೂಕಿನ ಕಮಲಾಪುರದಲ್ಲಿ ನೆಲೆಸಿರುವ ಮ್ಯಾಸ ನಾಯಕರು ಮಾತನಾಡುವ ಸಂದರ್ಭಗಳು ಭಾಷಾ ಮಿಶ್ರಣಕ್ಕೆ ಹೆಚ್ಚು ಉದಾಹರಣೆಗಳಾಗಿವೆ. ಈ ದ್ವಿಭಾಷಿಕರು ಮಾತನಾಡುವ ಭಾಷೆ ಕನ್ನಡವೋ, ತೆಲುಗೋ ಎನ್ನುವ ಅನುಮಾನಗಳಿಗೆ ಎಷ್ಟೋಬಾರಿ ಎಡೆಮಾಡಿಕೊಟ್ಟಿದೆ ಅಂತಹ ಸಂದರ್ಭಗಳಲ್ಲಿ ಅವರು ಮಾತನಾಡುತ್ತಿರುವ ಭಾಷೆ ಕನ್ನಡವೆ ಎಂದು ತಿಳಿದುಬಂದಾಗ ಆ ದ್ವಿಭಾಷಿಕರು ಮಿಶ್ರಿತ ಭಾಷೆಯೊಂದನ್ನು ಬಳಸುತ್ತಾರೆಂಬ ಸಂಗತಿಯೊಂದು ತಿಳಿಯಲಾಯಿತು. ಆ ಭಾಷಿಕರಲ್ಲಿ ಅನೇಕರ ಮನೆಮಾತು ತೆಲುಗು, ಅಂತಹವರೆಲ್ಲಾ ಒಂದೆಡೆ ನೆಲೆಸಿರುವುದರಿಂದ ಹೆಚ್ಚಿನ ತೆಲುಗಿನ ಸಾಮಾಜಿಕ ಸಂದರ್ಭಗಳಿಗೆ ದಿನನಿತ್ಯದ ವ್ಯವಹಾರಗಳಿಗೆ ತೆರೆದುಕೊಳ್ಳುವುದರಿಂದ ಕನ್ನಡ ಬಳಸುವ ಅವಕಾಶ ಹೆಚ್ಚು ಇರುವುದಿಲ್ಲ. ಯಾವಾಗ ಕನ್ನಡವನ್ನು ಬಳಸುವ ಅವಕಾಶ ಭಾಷಿಕರಲ್ಲಿ ಉಂಟಾಯಿತೋ, ಅಂಥ ಸಂದರ್ಭಗಳಲ್ಲಿ ಅವರು ಭಾಷಾ ಕಲಿಕೆಯ ಹಂತವನ್ನು ದಾಟಿದ ಹಂತದಲ್ಲಿದ್ದವರು, ಅವಿದ್ಯಾವಂತರು, ಕೂಲಿ, ಕೃಷಿ ಕೂಲಿಯನ್ನು ಮಾಡುತ್ತಿರುವವರಾದ್ದರಿಂದ ಕನ್ನಡವನ್ನು ಔಪಚಾರಿಕವಾಗಿ ಕಲಿತು ಬಳಸುವ ಸಂದರ್ಭವೊಂದು ಒದಗಿ ಬಂದುದರಿಂದ ಸಹಜವಾಗಿ ಕನ್ನಡವನ್ನು ಕಲಿಯಲು ಆಗದ ಸಂದರ್ಭಗಳಲ್ಲಿ ಭಾಷೆಯನ್ನು ಕಲಿತು ಬಳಸುತ್ತಿರುತ್ತಾರೆ. ಆದ್ದರಿಂದ ತೆಲುಗು - ಮಿಶ್ರಿತ ಭಾಷೆಯನ್ನು ಬಳಸುವವರಾಗಿದ್ದಾರೆ. ಈಗಿನ ತಲೆಮಾರುಗಳಲ್ಲಿ ಕನ್ನಡದ ಸಾಕ್ಷರತೆಯ ಸಂದರ್ಭಗಳಿಗೆ ಒಳಗಾಗಿರುವವರಲ್ಲಿ ಈ ರೀತಿಯ ಮಿಶ್ರ ಭಾಷೆಯೂ ಕಾಣುತ್ತಿಲ್ಲ. ಕೆಲವು ಮಾಹಿತಿಯ ಪ್ರಕಾರ ಬಳ್ಳಾರಿ ಸುತ್ತ - ಮುತ್ತಲ ಪ್ರದೇಶಗಳಲ್ಲಿಯೂ ಪರಿಶಿಷ್ಟ ಪಂಗಡ ಮತ್ತು ಪರಿಶಿಷ್ಟ ಜಾತಿಯ ಭಾಷಿಕರಲ್ಲಿ ಈ ರೀತಿಯ ನುಡಿಮಿಶ್ರಣಗಳು ಇರುವ ಸಂಗತಿಗಳನ್ನು ತಿಳಿಯಲಾಗಿದೆ.

ಕನ್ನಡದ ಸಂದರ್ಭದಲ್ಲಿ ನುಡಿಮಿಶ್ರಣದ ನಿಯೋಗಗಳನ್ನು ಕುರಿತಂತೆ ಎಸ್.ಎನ್.ಶ್ರೀಧರ್ (1995:10) ಅವರು ಚರ್ಚಿಸುವ ಸಂದರ್ಭವೊಂದನ್ನು ಗಮನಿಸಿದರೆ "ಒಬ್ಬ ದ್ವಿಭಾಷಿ ಅನೇಕ ಬಾರಿ ದ್ವಿಸಂಸ್ಕೃತಿಗೂ, ಬಹುಸಂಸ್ಕೃತಿಗೂ ಆಗಿರುವುದರಿಂದ ತನ್ನ ಎರಡು ಅಥವಾ ಹೆಚ್ಚು ಸಂಸ್ಕೃತಿಗಳನ್ನೊಳಗೊಂಡ ಹೆಚ್ಚು ಶ್ರೀಮಂತ, ಹೆಚ್ಚು ಸಂಕೀರ್ಣ ವ್ಯಕ್ತಿತ್ವ ಸಂವೇದನೆಯನ್ನು ಅಭಿವ್ಯಕ್ತಗೊಳಿಸಲು ಒಂದಕ್ಕಿಂತ ಹೆಚ್ಚು ಭಾಷೆಗಳ ಸಂಪನ್ಮೂಲಗಳನ್ನು

ತೊಡಗಿಸಬೇಕಾಗುತ್ತದೆ. ತಾಂತ್ರಿಕ ವಿಷಯಗಳ ಚರ್ಚೆಯಲ್ಲಿ ಅವಶ್ಯಕವಾದ ಪರಿಭಾಷೆಯು ಇಲ್ಲದಿರುವಾಗ ಅಥವಾ ಒಬ್ಬ ಭಾಷಿಕನಿಗೆ ತಾತ್ಕಾಲಿಕವಾಗಿ ಆ ಪರಿಭಾಷೆಯು ಸಿದ್ಧಿಸದೆ ಇರುವಾಗ ನುಡಿಬೆರಕೆ ಉಪಯೋಗಕ್ಕೆ ಬರುತ್ತದೆ. ಒಂದು ಭಾಷೆಯ ಅರ್ಥದ ತೆರಪುಗಳನ್ನು ಅಥವಾ ವೈಯಕ್ತಿಕ ( ತಾತ್ಕಾಲಿಕ) ಮರೆವನ್ನು ಮೀರಲು ಇನ್ನೊಂದು ಭಾಷೆಯನ್ನು ಬೆರೆಸುವುದು ಸಾಮಾನ್ಯ. ಭಾಷಾ ಮರ್ಯಾದೆಯ ದೃಷ್ಟಿಯಿಂದ ನಿಷಿದ್ಧವಾದ ಪದ ಅಥವಾ ಅರ್ಥಗಳನ್ನು ವ್ಯಕ್ತಪಡಿಸಲು ಒಂದು ಭಾಷೆಯಲ್ಲಿನ ರೂಢಿಗತ ಪದಗಳ ಸ್ಥಾನದಲ್ಲಿ ಫ್ಯಾಶನೆಬಲ್ ಪದಗಳನ್ನು ಉಪಯೋಗಿಸಿ ತಮ್ಮ ಆಧುನಿಕತೆಯನ್ನು ಸೂಚಿಸಲು, ಭಾಷಿಕರ ಮಧ್ಯೆ ಇರುವ ಅಂತರವನ್ನು ಕಡಿಮೆ ಮಾಡಲು ನುಡಿಬೆರಕೆಯನ್ನು ಬಳಸುತ್ತಾರೆ. ಹೀಗೆ ನುಡಿಬೆರಕೆಯನ್ನು ದ್ವಿಭಾಷಿಕರು ಉಪಯೋಗಿಸುವಾಗ ಅವರ ಭಾಷೆಗಳ ರಚನಾತ್ಮಕ ಎಲ್ಲೆಗಳು ಸಡಿಲವಾಗತೊಡಗುತ್ತವೆ. ಒಂದು ಭಾಷೆಯ ವಾಕ್ಯಾತ್ಮಕ ಲಕ್ಷಣಗಳು ಇನ್ನೊಂದು ಭಾಷೆಗೆ ವರ್ಗಾಯಿಸಲ್ಪಡುತ್ತವೆ."

ನುಡಿಜಗಿತ ಮತ್ತು ನುಡಿಬೆರಕೆ ಪ್ರಕ್ರಿಯೆಗಳ ಉದ್ದೇಶಗಳನ್ನು ಕುರಿತಂತೆ "ಒಂದು ಭಾಷೆಯಲ್ಲಿ ಕೊರತೆ ಇರುವ ಭಾಷಾಂಶಗಳನ್ನು ಇನ್ನೊಂದು ಭಾಷೆಯಿಂದ ಎರವಲು ಪಡೆದು ತುಂಬಿಕೊಳ್ಳುವುದೇ ಈ ಭಾಷಾ ಪ್ರಕ್ರಿಯೆಗಳ ಉದ್ದೇಶವೆಂದು ಸಾಮಾನ್ಯವಾಗಿ ತಿಳಿಯಲಾಗುತ್ತದೆ. ನುಡಿಬೆರಕೆಗೆ ಇಂಥ ಕಾರಣಗಳಿರುತ್ತವೆ. ಆದರೆ ಇವು ಕನಿಷ್ಠ ನೆಲೆಯ ಕಾರಣಗಳು ಮಾತ್ರ ಭಾಷಾಂಶಗಳ ಕೊರತೆ ಇಲ್ಲದಿರುವ ಸಂದರ್ಭಗಳಲ್ಲೂ ನುಡಿಬೆರಕೆ ಸಾಕಷ್ಟು ಪ್ರಮಾಣದಲ್ಲಿ ನಡೆಯುತ್ತದೆ. ಭಾಷೆಯನ್ನು ಬಳಸುತ್ತಿರುವ ಸಂದರ್ಭ, ಭಾಗಿಗಳಾಗಿರುವ ಜನರು, ಚರ್ಚಿಸುತ್ತಿರುವ ವಿಷಯ, ಚರ್ಚೆಯ ಸಂಭಾಷಣೆಯ ಉದ್ದೇಶ ಇವೆಲ್ಲವೂ ಒಂದಿಲ್ಲೊಂದು ರೀತಿಯಲ್ಲಿ ನುಡಿಬೆರಕೆಗೆ ಕಾರಣವಾಗುತ್ತವೆಂದು ಅಧ್ಯಯನಗಳು ತೋರಿಸಿಕೊಟ್ಟಿವೆ. ಗುಂಪುಗಳಲ್ಲಿ ಸಂಭಾಷಿಸುವಾಗ ಇತರರೊಡನೆ ತಮ್ಮನ್ನು ಗುರುತಿಸಿಗೊಳ್ಳಲು ಮತ್ತು ಇತರರಿಂದ ಬೇರೆ ಎಂದು ತೋರಿಸಿಕೊಳ್ಳಲು ಈ ಭಾಷಾ ಪ್ರಕ್ರಿಯೆಗಳು ನಡೆಯುತ್ತವೆ". (ಕೆ.ವಿ.ನಾರಾಯಣ 1998:20)

ಆದ್ದರಿಂದ ಶ್ರೀಧರ್ (1995:07) ರವರು ಹೇಳುವಂತೆ "ಭಾಷಾ ಮಿಶ್ರಣ ನುರಿತ ದ್ವಿಭಾಷಿಗಳ ಸಹಜವಾದ ವರ್ತನೆಯೇ ಹೊರತು ಭಾಷೆಯ ಅಜ್ಞಾನದ ಪರಿಣಾಮವಲ್ಲ. ಇದು ಏಕಭಾಷಿಕರ ಭಾಷಾ ಜ್ಞಾನಕ್ಕೂ ಮಿಗಿಲಾದ ಸೂಕ್ಷ್ಮ, ಸೃಷ್ಟಿಶೀಲ ಸಂಕೀರ್ಣ ನಿಯಮಬದ್ಧ ವ್ಯಾಪಾರ". "ಪ್ರವರ್ಧಮಾನ ಸಮಾಜಗಳಲ್ಲಿ ಒಂದು ಪ್ರಮುಖ ನಿಯೋಗವನ್ನು ಮಿಶ್ರಭಾಷೆಗಳು ಹೊಂದಿರುತ್ತವೆ. ಮಿಶ್ರಭಾಷೆಗಳು ವ್ಯಕ್ತಿಭಾಷೆಯ ಲಕ್ಷಣಗಳಾಗಿರದೆ ಸಾಮಾಜಿಕ ವರ್ತನೆಯ ಭಾಗವಾಗಿರುತ್ತವೆ. ಈ ಮಿಶ್ರಭಾಷೆಯನ್ನು ಇಡೀ ಸಮಾಜ ಭಾಷಾ ಕಲಿಕೆಯ ಮೂಲಕ ಪಡೆಯುವ ಸಾಮಾಜೀಕರಣದ ಭಾಗವಾಗಿ ತನ್ನ ಭಾಷಾ ಸಾಮರ್ಥ್ಯದ ಅಂಶವನ್ನಾಗಿ ಸೇರಿಸಿಕೊಳ್ಳುತ್ತದೆ".(ಯೂರ್ 1974:227)

ನುಡಿಜಗಿತವೂ ಸಹ ಈ ದ್ವಿಭಾಷಾ ಪರಿಸರದಲ್ಲಿ ಹೆಚ್ಚು - ಹೆಚ್ಚು ಕಾಣತ್ತಿದೆ. ಬಳ್ಳಾರಿಯಂತಹ ಅಧಿಕ ತೆಲುಗು ಬಳಕೆಯ ಆವರಣಗಳಿರುವ ಕಡೆಗಳಲ್ಲಿ ಈ ನುಡಿಜಗಿತ ಪ್ರಕ್ರಿಯೆ ದ್ವಿಭಾಷಿಕರಲ್ಲಿ ಹೆಚ್ಚಿನ ಪ್ರಮಾಣದಲ್ಲಿ

ಕಾಣುತ್ತಿದೆ. ವ್ಯಾಪಾರದ ಸಂದರ್ಭದಲ್ಲಿ ವ್ಯಾಪಾರಿಗಳ ಮೊದಲ ಆಯ್ಕೆ ಕನ್ನಡವೇ ಆಗಿದ್ದರೂ ಎರಡನೆಯ ಆಯ್ಕೆ ತೆಲುಗು, ಅಪರಿಚಿತರನ್ನು ಮಾತನಾಡುವಾಗ ಭಾಷಿಕರ ಮೊದಲ ಆಯ್ಕೆ ಕನ್ನಡ, ಎರಡನೆಯ ಆಯ್ಕೆ ತೆಲುಗು. ಅನ್ಯಭಾಷಿಕರ ಮಾತುಗಳನ್ನು ಅವರ ಭಾಷೆಯಲ್ಲೆ ವಿವರಿಸುವ ಸಂದರ್ಭ, ಸಿನಿಮಾ, ನಾಟಕ, ಇನ್ನಿತರ ಸಂಭಾಷಣೆಗಳನ್ನು ವಿವರಿಸುವ ಸಂದರ್ಭಗಳಲ್ಲಿ ಕನ್ನಡದ ಬಾಷಿಕ ಸಂದರ್ಭಗಳಿಗೆ ತೆರೆದುಕೊಳ್ಳುವಾಗ, ಚುನಾವಣಾ ಪ್ರಚಾರ ಭಾಷಣಗಳನ್ನು ಮಾಡುವಾಗ, ರಾಜಕೀಯ ಭಾಷಣಗಳನ್ನು ಮಾಡುವಾಗ, ಕನ್ನಡದ ಸಾಂಸ್ಥಿಕ ಆವರಣಗಳಲ್ಲಿ, ಬ್ಯಾಂಕ್‌ಗಳಲ್ಲಿ, ಗುಪ್ತವಾದ ಮಾತುಕತೆಗಳನ್ನು ಮಾತನಾಡುವ ಸಂದರ್ಭಗಳಲ್ಲಿ, ಚುನಾವಣೆಯಲ್ಲಿ ಮತಯಾಚಿಸುವ ಸಂದರ್ಭಗಳಲ್ಲಿ, ಜಗಳದ ಸಂದರ್ಭಗಳಲ್ಲಿ, ಆತ್ಮೀಯರೊಡನೆ ಮಾತನಾಡುವ ಸಂದರ್ಭಗಳು, ಶೈಕ್ಷಣಿಕ ವಿಷಯಗಳಿಗೆ ಸಂಬಂಧಿಸಿದ ಚರ್ಚೆಗಳಲ್ಲಿ ಹೀಗೆ ಇನ್ನು ಹಲವು ಸಂದರ್ಭಗಳಲ್ಲಿ ನುಡಿಜಿಗಿತ ಉಂಟಾಗುತ್ತದೆ. ನುಡಿಜಿಗಿತಕ್ಕೆ ಉದಾಹರಣೆಗಳು

1. ಅಕ್ಕ ನಿಂಬೆಹಣ್ಣು ಬೇಕೇನಕ್ಕ ಒಂದು ರೂಪಾಯಿಗೆ ನಾಲಕ್ಕು, ಅಕ ನಿಂಬುಪಂಡು ಕಾವಲ್‌ನ ಒಗ ರೂಪಾಯಿಕಿ ನಾಲ್ಗು
2. ಏನ್ಸಾರ್ ಚೆನ್ನಾಗಿದೀರ ಯಾವಾಗ ಬಂದ್ರಿ ಊರಿಂದ ಮಾಮೋಳ್ಳು ವಚ್ಚಿನ್ರ ಊರಲೊ ಅಂತ ಬಾಗುಂಡಾರಾ
3. ಏಮಕ್ಕ ಬಾಗುಂಡಾರಾ ಆಂಟಿವಾಳ್ಳು ವಚ್ಚಿನ್ರ ಸಾರ್‌ಗೆ ಎಲ್ಲಿಗೆ ಟ್ರಾನ್ಸ್‌ಫರ್ ಆಗಿದೆ ಯಾವಾಗ ಬರ್‍ತಾರೆ

ಬಳ್ಳಾರಿಯಂತಹ ನಗರ ಪ್ರದೇಶದಲ್ಲಿ ದಿನನಿತ್ಯದ ವ್ಯಾಪಾರ - ವ್ಯವಹಾರಗಳಿಗಾಗಿ, ಜೀವನಾವಶ್ಯಕತೆಗಳಿಗಾಗಿ ಆಂಧ್ರಪ್ರದೇಶದ ಹಲವು ಭಾಗಗಳಿಂದ ಬಂದು ಹೋಗುವವರು, ಇಲ್ಲೆ ನೆಲೆ ನಿಂತ ಭಾಷಿಕರನೇಕರು, ಒಬ್ಬರಿಗೊಬ್ಬರು ಸಂಪರ್ಕಿಸುವ ಅವಕಾಶಗಳು ಹೆಚ್ಚು ಇರುವುದರಿಂದ ದಿನನಿತ್ಯದ ಭಾಷಿಕ ಸಂದರ್ಭಗಳಲ್ಲಿ ನುಡಿಜಿಗಿತ ಪ್ರಕ್ರಿಯೆಗಳು ಕಾಣುತ್ತಿರುತ್ತವೆ. ಬೇರೆ ಕಡೆಗಳಲ್ಲಿಯೂ ನುಡಿಜಿಗಿತವು ಕಾಣಿಸಿಕೊಳ್ಳಬಹುದು. ಆದರೆ ಬಳ್ಳಾರಿಯಲ್ಲಿ ಇದರ ಪ್ರಮಾಣ ಹೆಚ್ಚು. ಫಿಶ್‌ಮನ್ ಹೇಳುವಂತೆ "ಯಾರು ಮಾತನಾಡುತ್ತಾರೆ, ಯಾರೊಂದಿಗೆ ಮಾತನಾಡುತ್ತಾರೆ, ಯಾವ ಸಂದರ್ಭದಲ್ಲಿ ಮಾತನಾಡುತ್ತಾರೆ" ಎಂಬ ಅಂಶಗಳು ಆ ಭಾಷಿಕ ಪ್ರಕ್ರಿಯೆಗಳನ್ನು ಆಧರಿಸಿರುತ್ತವೆ, ಅದಕ್ಕೆ ತಕ್ಕಂತೆ ಭಾಷಾ ಆಯ್ಕೆ ನಡೆಯುತ್ತಾ ಭಾಷಿಕ ಪ್ರಕ್ರಿಯೆಗಳು ಉಂಟಾಗುತ್ತಿರುತ್ತವೆ. ಹೆಚ್ಚಿನ ನುಡಿಜಿಗಿತ ಉಂಟಾಗುವುದು ಆಕರ್ಷಣೆಯನ್ನೊಡ್ಡಿ ವ್ಯಾಪಾರ ಮಾಡುವ ಸಂದರ್ಭಗಳಲ್ಲಿ ಕನ್ನಡದ ಔಪಚಾರಿಕ ಸಂದರ್ಭಗಳಿಗೆ ಒಳಗಾಗುವಾಗ,ಆತ್ಮೀಯ ಸಂಭಾಷಣೆಗಳಲ್ಲಿ, ಸಂತೋಷದ ವಿಷಯಗಳನ್ನು ಹಂಚಿಕೊಳ್ಳುವಾಗ, ಕೆಲವೊಮ್ಮೆ ಉದ್ವೇಗಕ್ಕೆ ಒಳಗಾದಾಗ, ಹೀಗೆ ಹಲವು ಸಂದರ್ಭಗಳಲ್ಲಿ ದಿನನಿತ್ಯದ ಭಾಷಿಕರ ವ್ಯವಹಾರಗಳಲ್ಲಿ ಈ ನುಡಿಜಿಗಿತ ಪ್ರಕ್ರಿಯೆಯು ನಡೆಯುತ್ತಿರುತ್ತದೆ.

ದ್ವಿಭಾಷಿಕ ಸಂದರ್ಭಗಳಲ್ಲಿ ಈ ಪ್ರಕ್ರಿಯೆ ಸಾಮಾನ್ಯವಾಗಿ ಕಂಡುಬಂದಿದ್ದರೂ ಸಹ ಅದರ ಭಾಷಾ ವೈಜ್ಞಾನಿಕ ಹಾಗೂ ಸಾಮಾಜಿಕ ಭಾಷಾ ವೈಜ್ಞಾನಿಕ ನೆಲೆಯ ಬಗೆಗೆ ಈಗಷ್ಟೆ ಅಧ್ಯಯನಗಳಾಗುತ್ತಿರುವುದು ಗಮನಾರ್ಹ. ಈ ನಿಟ್ಟಿನಲ್ಲಿ ಅಣ್ಣಾಮಲೈ (1971), ಯೂರ್ (1974) ಮತ್ತು ಕಾಛ್ರು (1978) ಅವರ ಅಧ್ಯಯನಗಳು ಮುಂದಿನ ಅಧ್ಯಯನಗಳಿಗೆ ಹಲವಾರು ಒಳನೋಟಗಳನ್ನು ಕೊಡುತ್ತವೆ.

## ಭಾಷಾ ಮನೋಭಾವ ಮತ್ತು ಭಾಷಾ ನಡವಳಿಕೆ

ಎರಡು ಭಿನ್ನ ಭಾಷೆಗಳ ಸಂಪರ್ಕದಿಂದಾಗಿ ಉಂಟಾದ ದ್ವಿಭಾಷಾ ಸಂದರ್ಭದಲ್ಲಿ ಭಾಷಿಕರಿಗೆ ಎರಡು ಭಾಷೆಗಳ ಬಗೆಗಿರುವ ಮನೋಭಾವ ಭಿನ್ನವಾಗಿರಬಹುದು. ಕೆಲವೊಮ್ಮೆ ಒಂದೇರೀತಿ ಇರಬಹುದು. ಹಾಗೆಯೇ ಎರಡು ಭಾಷೆಗಳ ಸಂವಹನ ಸಂದರ್ಭಗಳಲ್ಲಿನ ಭಾಷಿಕರ ನಡವಳಿಕೆಗಳು ಹಲವು ರೀತಿಯಲ್ಲಿ ಭಿನ್ನವಾಗಿರಲು ಸಾಧ್ಯ. ಇದು ಹೆಚ್ಚಾಗಿ ಮನಶಾಸ್ತ್ರಜ್ಞರಿಗೆ ಆಸಕ್ತಿದಾಯಕವಾದ ವಿಷಯವಾದರೂ ದ್ವಿಭಾಷಿಕರ ಭಾಷಾ ಧೋರಣೆಗಳು, ಭಾಷಾ ಮನೋಭಾವ, ಭಾಷಿಕರ ನಡವಳಿಕೆಗಳ ಅಧ್ಯಯನ ಭಾಷಾಶಾಸ್ತ್ರಜ್ಞರಿಗೂ ಆಸಕ್ತಿದಾಯಕವಾಗಿದೆ. ಕೆಲವೊಮ್ಮೆ ಒಂದು ಭಾಷೆಯ ಬಗೆಗಿರುವ ಮನೋಭಾವ ಭಾಷಾ ಪಲ್ಲಟಗಳಿಗೆ ಕಾರಣವಾಗಬಹುದು. ಭಾಷೆಯ ಬಗೆಗಿರುವ ದುರಭಿಮಾನ ಭಾಷಿಕರ ಮಧ್ಯೆ ಹಲವು ಸಂಘರ್ಷಗಳಿಗೆ ಕಾರಣವಾಗಬಹುದು. ಒಂದು ಭಾಷೆಯ ಬಗೆಗಿನ ಅಭಿಮಾನ ಭಾಷೆಯನ್ನು ಉಳಿಸಿಕೊಳ್ಳುವ ನೆಲೆಗಳಿಗೆ ಹೆಚ್ಚು ಪಕ್ವವಾಗಬಹುದು. ಇದನ್ನು ಮೀರಿ ಅಂತಸ್ತು, ಅಧಿಕಾರ, ಸ್ಥಾನಮಾನಗಳು, ಪ್ರತಿಷ್ಠೆಯ ಪ್ರಶ್ನೆ ಬಂದಾಗ ಭಾಷೆಯ ಸ್ಥಾನಮಾನಗಳಲ್ಲಿ ವ್ಯತ್ಯಾಸ ಉಂಟಾಗಬಹುದು. ಇವೆಲ್ಲವೂ ಭಾಷೆಯನ್ನು ಬಳಸುವವರ ಬಳಕೆಯ ಸಂದರ್ಭಗಳನ್ನು ಕುರಿತಂತೆ ಗಮನಿಸಿದಾಗ ತಿಳಿದುಬರುತ್ತದೆ. ದ್ವಿಭಾಷಾ ಸಂದರ್ಭಗಳನ್ನು ಕುರಿತಂತೆ ನಡೆದಿರುವ ಹಲವು ಅಧ್ಯಯನಗಳಲ್ಲಿ ಬಹುಸಂಖ್ಯಾತರ, ಅಧಿಕಾರಶಾಹಿ ಭಾಷೆಯ ಬಗೆಗಿನ ಮನೋಭಾವದಿಂದಾಗಿ ಸಾಮಾಜಿಕ ಚಲನೆಯಲ್ಲಿ ಮೇಲ್ಮುಖವಾಗಿ ಚಲಿಸಲು ಭಾಷಿಕರಲ್ಲಿ ಪಲ್ಲಟಗಳು ಉಂಟಾಗಿರುವುದನ್ನು ಕಾಣಬಹುದಾಗಿದೆ. ಆದ್ದರಿಂದ ಯಾವುದೇ ಒಂದು ಭಾಷೆಯ ಅಳಿವು - ಉಳಿವಿನಲ್ಲಿ ಭಾಷಿಕರ ಮನೋಭಾವ, ಭಾಷಾ ಧೋರಣೆಗಳೂ ಬಹುಮುಖ್ಯವಾಗಿರುತ್ತವೆ.

ಹೆಚ್ಚಿನ ಸಂದರ್ಭದಲ್ಲಿ ಭಾಷಿಕರು ಸಾಮಾಜಿಕವಾಗಿ ಮೇಲ್ಮುಖ ಚಲನೆ, ಆರ್ಥಿಕ ಸಫಲತೆ ಮತ್ತು ರಾಜಕೀಯ ಸ್ಥಾನಮಾನಗಳನ್ನು ಪಡೆಯುವುದಕ್ಕಾಗಿ ಬಹುಸಂಖ್ಯಾತರ ಭಾಷೆಯನ್ನು ಬಳಸುತ್ತಿರುವುದರಿಂದ ಕೆಲವೆಡೆಗಳಲ್ಲಿ ಅಲ್ಪಸಂಖ್ಯಾತರ ಭಾಷೆಗಳು ಅದೃಶ್ಯ ಭಾಷೆಗಳಾಗಿ ಬಿಡುತ್ತವೆ. ಕೈಗಾರೀಕರಣದಿಂದುಂಟಾದ ಉದ್ಯೋಗಾವಕಾಶಗಳು, ನಗರೀಕರಣ, ಆಧುನೀಕರಣ, ಜಾಗತೀಕರಣ ಪ್ರಕ್ರಿಯೆಗಳಿಂದಾಗಿ ವ್ಯಕ್ತಿಗಳು ಹೆಚ್ಚು ಹೆಚ್ಚು ದ್ವಿಭಾಷಿಗಳು ಮತ್ತು ಬಹುಭಾಷಿಗಳಾಗುವ ಅವಶ್ಯಕತೆಗಳು ಹೆಚ್ಚಾಗುತ್ತಿದ್ದಂತೆ, ಅಧಿಕಾರಶಾಹಿ ಭಾಷೆ ಅಥವಾ ಆಡಳಿತ ಭಾಷೆಯಲ್ಲಿನ

ಗೌರವ, ಸ್ಥಾನಮಾನ, ಸಾಮಾಜಿಕ, ಆರ್ಥಿಕ ಸಫಲತೆಯನ್ನು ಪಡೆಯುವಲ್ಲಿ ಭಾಷಿಕರು ತಮ್ಮ ಚಹರೆಯನ್ನು ದ್ವಿ-ಬಹುಭಾಷಿಗಳಾಗುವುದರಿಂದ ತೋರಿಸಿಕೊಳ್ಳಲು ಪ್ರಯತ್ನಿಸುತ್ತಿತ್ತಾರೆ. ಆದ್ದರಿಂದ ಬಳ್ಳಾರಿ ಪರಿಸರದ ದ್ವಿಭಾಷಾ ಸಂದರ್ಭದಲ್ಲಿ ಭಾಷಿಕರ ಭಿನ್ನ ನಡವಳಿಕೆಗಳನ್ನು ಕುರಿತಂತೆ ಕ್ಷೇತ್ರಕಾರ್ಯದಲ್ಲಿ ಪಡೆಯಲಾದ ಮಾಹಿತಿಯ ಮೂಲಕ ಕೆಲವು ಸಂಗತಿಗಳನ್ನು ಇಲ್ಲಿ ವಿವರಿಸಲು ಪ್ರಯತ್ನಿಸಲಾಗಿದೆ.

ಕನ್ನಡ ಭಾಷೆಯ ಬಗೆಗೆ ತೆಲುಗು ಭಾಷಿಕರಲ್ಲಿ ಇರುವ ಮನೋಭಾವ ಹೆಚ್ಚಿನ ಸಂದರ್ಭಗಳಲ್ಲಿ ಆರೋಗ್ಯಪೂರ್ಣವಾಗಿದೆ. ಅಲ್ಲದೆ ಭಾಷೆಯ ಬಗೆಗೆ ದುರಭಿಮಾನವಿರುವ ಅಂಶಗಳು ವ್ಯಕ್ತವಾಗಿಲ್ಲ. ತೆಲುಗು ಭಾಷಿಕರು ಅನೇಕರು ಕನ್ನಡವನ್ನು ಕಲಿತಿರುವುದು ಔಪಚಾರಿಕವಾಗಿ, ಅದೂ ಅಕ್ಕ - ಪಕ್ಕದ ಮನೆಯಲ್ಲಿ, ಸ್ನೇಹಿತರ ಬಳಿ, ಕೆಲಸ ಮಾಡುವ ಕಡೆಗಳಲ್ಲಿ, ಟಿ.ವಿ., ಸಿನಿಮಾ ಇತ್ಯಾದಿಗಳನ್ನು ನೋಡುವುದರ ಮೂಲಕ. ಆದ್ದರಿಂದ ಕನ್ನಡ ಭಾಷೆ ಕಲಿಯುವುದರಲ್ಲಿ ಹೆಚ್ಚೇನೂ ಕಷ್ಟವಿದ್ದಂತೆ ತೋರಿಲ್ಲ. ಅರ್ಥಮಾಡಿಕೊಳ್ಳುವ ನೆಲೆಯಲ್ಲೂ ಅಷ್ಟೆ. ಬಹಳಷ್ಟು ಭಾಷಿಕರ ಅಭಿಪ್ರಾಯ ತೆಲುಗು ಭಾಷೆಗೆ ಕನ್ನಡ ಭಾಷೆ ಹತ್ತಿರವಿದೆ. ಹೋಲಿಕೆಗಳು ತುಂಬಾ ಇವೆ. ಸುಲಭವಾಗಿ ಅರ್ಥಮಾಡಿಕೊಳ್ಳಬಹುದು. ಎಂಬುದರ ಬಗೆಗಿದ್ದರೆ, ಕನ್ನಡ ಭಾಷೆ ಕಲಿಯಲು ಕಷ್ಟ. ಅದರಲ್ಲಿ ಒತ್ತಕ್ಷರಗಳು ಜಾಸ್ತಿ, ಕೇಳಿಸಿಕೊಳ್ಳಲು ಆಗಲ್ಲ. ಭಾಷೆ ಒರಟಾಗಿದೆ ಎಂಬ ಅಭಿಪ್ರಾಯಗಳು ಬಹಳ ಕಡಿಮೆ ಪ್ರಮಾಣದಲ್ಲಿ ದೊರೆತಿವೆ.

ಒಂದೆಡೆ ಕರ್ನಾಟಕದಲ್ಲಿರುವುದರಿಂದ ಕನ್ನಡಕ್ಕೆ ಬೆಲೆ ಹೆಚ್ಚು, ಇದರಿಂದ ಲಾಭವಿದೆ. ತೆಲುಗು ಮಾಧ್ಯಮದಲ್ಲಿ ಓದಿದರೆ ಉಪಯೋಗವಿಲ್ಲ ಎಂಬ ಮನೋಭಾವಗಳಿಂದಾಗಿ ಭಾಷಿಕರಲ್ಲಿ ಕನ್ನಡ ಭಾಷೆಯ ಸಾಕ್ಷರತೆಯ ಕಡೆಗೆ ಪಲ್ಲಟಗಳು ಉಂಟಾಗಿವೆ. ಔಪಚಾರಿಕ ಆವರಣಗಳಲ್ಲಿ ತೆಲುಗು ಭಾಷೆಯನ್ನು ಬಳಸುವ ಹಿಂಜರಿಕೆಯಿರುವುದರಿಂದ ತಮ್ಮ ಸ್ಥಾನಮಾನಗಳನ್ನು ಭಾಷೆಯ ಮೂಲಕ ತೋರಿಸಲು ಕನ್ನಡವನ್ನು ಕಲಿತು ಬಳಸುತ್ತಿದ್ದಾರೆ. ಕನ್ನಡದ ಭಾಷಿಕ ಸಂದರ್ಭಗಳಿಗೆ ಒಳಗಾಗುವಾಗ ಹೆಚ್ಚು ಪ್ರಜ್ಞಾಪೂರ್ವಕವಾಗಿರುತ್ತಾರೆ. ತೆಲುಗು ಭಾಷಿಕರಲ್ಲೆ ಉನ್ನತ ವರ್ಗದಲ್ಲಿರುವವರಿಗೆ ತೆಲುಗು ಪ್ರತಿಷ್ಠಿತ ಭಾಷೆಯಾಗಿರುವಂತೆ ಕನ್ನಡ ಭಾಷೆ ಪ್ರತಿಷ್ಠೆ ಎಂದು ಕಾಣುವುದಿಲ್ಲ. ರಾಜಕೀಯ ಸ್ಥಾನಮಾನಗಳಿಗಾಗಿ, ಆತ್ಮೀಯ ಸ್ನೇಹಕ್ಕಾಗಿ ಮಾತ್ರ ಅವರು ಭಾಷೆಯನ್ನು ಹೆಚ್ಚಿನ ಸಂದರ್ಭದಲ್ಲಿ ಬಳಸಬಹುದು. ಅದೇ ಒಬ್ಬ ಕೆಲಸಗಾರನ ಬಳಿ ಕೆಲಸವನ್ನು ಮಾಡಿಸುವಂತಹ ಸನ್ನಿವೇಶಗಳಲ್ಲಿ ಯಜಮಾನನೇ ಕೆಲಸಗಾರನ ಭಾಷೆಗೆ ಪಲ್ಲಟಗೊಳ್ಳಬಹುದು. ಆಗ ಭಾಷೆಗೆ ಅಧಿಕಾರದ ಸ್ಥಾನಮಾನಗಳು ಇರುವುದಿಲ್ಲ. ಇಂತಹ ಸನ್ನಿವೇಶಗಳಲ್ಲಿ ಆರ್ಥಿಕ ಸ್ಥಾನಮಾನವನ್ನೂ ಮೀರಿ ಭಾಷೆಯ ಸ್ಥಾನ ಮೇಲಿರುತ್ತದೆ. ಅದೇ ಭಾಷೆಯ ಬಗೆಗೆ ಎಷ್ಟೇ ಭಾವನಾತ್ಮಕವಾಗಿ ಮಾತನಾಡಿದರೂ ವೈವಾಹಿಕ ಸಂಬಂಧಗಳ ವಿಷಯಕ್ಕೆ ಬಂದಾಗ ಅಧಿಕಾರ, ಅಂತಸ್ತುಗಳೇ ಮುಖ್ಯವಾಗಿ ಭಾಷೆಯ ಸ್ಥಾನಮಾನ ಕೆಳಮಟ್ಟಕ್ಕೆ ಹೋಗಬಹುದು. ಹೆಣ್ಣನ್ನು ಮದುವೆ ಮಾಡಿಕೊಡುವ ಸಂದರ್ಭಗಳಲ್ಲಿ

ಭಾಷೆ ಮುಖ್ಯವೋ, ಅಂತಸ್ತು ಮುಖ್ಯವೋ ಎಂದು ಕೇಳಲಾದ ಪ್ರಶ್ನೆಗೆ ಬಹಳಷ್ಟು ಭಾಷಿಕರು ಉನ್ನತ ವರ್ಗಗಳಲ್ಲಿ ಅಂತಸ್ತು, ಅಧಿಕಾರ ಮುಖ್ಯವೆಂದರೆ, ಕೆಳವರ್ಗದ ಅವಿದ್ಯಾವಂತ ಭಾಷಿಕರು ಭಾಷೆಯೇ ಮುಖ್ಯ ಎಂದು ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಇಂತಹ ಸಂದರ್ಭಗಳಲ್ಲಿ ಅಂತಸ್ತು, ಅಧಿಕಾರ ಮುಖ್ಯವಾಗಿ ಭಾಷೆಯ ಸ್ಥಾನ ಕೆಳಮಟ್ಟಕ್ಕೆ ಹೋಗುತ್ತದೆ. ಇವೆಲ್ಲಾ ಅಭಿಪ್ರಾಯಗಳು ತೆಲುಗರಿಗೆ ಕನ್ನಡ ಭಾಷೆಯ ಬಗೆಗಿನ ಮನೋಭಾವವನ್ನು ತೋರಿಸುತ್ತಿದೆ. ಕೆಳವರ್ಗದ ತೆಲುಗು ಭಾಷಿಕರಿಗೆ, ಉನ್ನತವರ್ಗದ ತೆಲುಗು ಭಾಷಿಕರು ಬಳಸುವ ತೆಲುಗು ಭಾಷೆ ಮತ್ತು ಟ.ವಿ.ಚಾನೆಲ್‌ಗಳಲ್ಲಿ ಬರುವ ತೆಲುಗು ಭಾಷೆಯೇ ಶ್ರೇಷ್ಠವೆಂಬ ಅಭಿಪ್ರಾಯದ ಜೊತೆಗೆ ತಾವು ಬಳಸುವ ಭಾಷೆ ಕೀಳೆಂದು, ತಮ್ಮ ಭಾಷೆ ಮಿಶ್ರ ಭಾಷೆಯೆಂದು ಬಹಳಷ್ಟು ಭಾಷಿಕರು ಅಭಿಪ್ರಾಯಪಟ್ಟಿದ್ದಾರಲ್ಲದೆ, ಔಪಚಾರಿಕ ಸಂದರ್ಭಗಳಿಗೆ ತಮ್ಮ ಭಾಷೆಯನ್ನು ಬಳಸಲು ಹಿಂಜರಿಕೆಗೂ ಇದೇ ಭಾವನೆ ಕಾರಣವೆನ್ನುತ್ತಾರೆ.

ಈ ಪ್ರದೇಶದಲ್ಲಿನ ಬಹುಸಂಖ್ಯಾತ ಕನ್ನಡಿಗರು ತೆಲುಗು ಭಾಷೆಯನ್ನು ಗ್ರಹಿಕೆಯ ನೆಲೆಗಳಲ್ಲಿಯೇ ಹೆಚ್ಚಾಗಿ ಪಡೆದಿದ್ದಾರೆ. ಆದರೆ ಮೌಖಿಕ ನೆಲೆಗಳಲ್ಲಿ ಬಳಸುವವರು ತೀರಾ ಕಡಿಮೆ. ಬಳ್ಳಾರಿಯಂತಹ ನಗರ ಸಂದರ್ಭಗಳಲ್ಲಿ, ಇತರೆ ತೆಲುಗು ಭಾಷಿಕರಿರುವ ಕಡೆಗಳಲ್ಲಿ ಆತ್ಮೀಯತೆಗಾಗಿ ಹಿಂದಿನ ತಲೆಮಾರಗಳವರು ತೆಲುಗಿನಲ್ಲಿ ಸಂಭಾಷಿಸಬಹುದೇ ವಿನಃ ಹೆಚ್ಚಿನ ನುಡಿಪಲ್ಲಟವನ್ನು ಕನ್ನಡಿಗರು ತೆಲುಗಿಗೆ ಮಾಡುವುದಿಲ್ಲ. ವ್ಯಾಪಾರದ ಸಂದರ್ಭಗಳಲ್ಲಿ ಮಾತ್ರ ಆಕರ್ಷಣೆಯನ್ನೊಡ್ಡಿ ಲಾಭಗಳಿಸುವ ಮನೋಭಾವದಿಂದ ತೆಲುಗು ಭಾಷೆಗೆ ನುಡಿಪಲ್ಲಟವಾಗಬಹುದಷ್ಟೆ. ತೆಲುಗು ಭಾಷೆಯನ್ನು ಹೆಚ್ಚು ಗ್ರಹಿಕೆಯ ನೆಲೆಯಲ್ಲಿ ಹೊಂದಿರುವುದರಿಂದ ಕನ್ನಡದ ಕಾರ್ಯಕ್ರಮಗಳಿಗಿಂತ ತೆಲುಗು ಭಾಷೆಯ ಧಾರವಾಹಿಗಳನ್ನು, ಸಿನಿಮಾಗಳನ್ನು ಹೆಚ್ಚು ಹೆಚ್ಚು ನೋಡುತ್ತಾರೆ. ಕನ್ನಡಿಗರಿಗೆ ತೆಲುಗು ಭಾಷೆಯ ಬಗೆಗಿರುವ ಮನೋಭಾವವನ್ನು ಕುರಿತಂತೆ ಕೇಳಿದಾಗ, ಬಹಳಷ್ಟು ಭಾಷಿಕರು ಕನ್ನಡದ ಕಾರ್ಯಕ್ರಮಗಳು ಕಳಪೆ, ಚಿತ್ರಕತೆ ಚೆನ್ನಾಗಿರುವುದಿಲ್ಲ, ಹಾಸ್ಯ ಇರುವುದಿಲ್ಲ, ಡ್ರೆಸ್, ಸೀನರಿ, ಸಂಭಾಷಣೆಗಳು ಚೆನ್ನಾಗಿರುವುದಿಲ್ಲವೆಂದೂ ಕನ್ನಡ ಸಿನಿಮಾ, ಧಾರವಾಹಿಗಳು ಬಯಲಾಟ - ದೊಡ್ಡಾಟದಂತೆ ಇರುತ್ತವೆಂದೂ ತೆಲುಗು ಭಾಷೆಯಲ್ಲಿನ ಸಿನಿಮಾ, ಧಾರವಾಹಿಗಳು ಚಿತ್ರಕತೆ, ಸೀನರಿ, ಡ್ರೆಸ್, ಸೀನರಿ, ಸಂಭಾಷಣೆ ಎಲ್ಲವೂ ಚೆನ್ನಾಗಿದ್ದು, ಪ್ರತಿ ಸಿನಿಮಾದಲ್ಲಿನ ಹಾಸ್ಯಪ್ರಜ್ಞೆ, ಜೋಕುಗಳು, ಮನಸ್ಸಿಗೆ ಹೆಚ್ಚಿನ ಮನರಂಜನೆಯನ್ನು ನೀಡುತ್ತವೆ ಎಂಬ ಅಭಿಪ್ರಾಯಗಳನ್ನು ತೆಲುಗರು, ಕನ್ನಡಿಗರಿಬ್ಬರೂ ವ್ಯಕ್ತಪಡಿಸಿದ್ದಾರೆ. ಕನ್ನಡ ಏಕಭಾಷಿಕರು ಮಾತ್ರವೇ ಕನ್ನಡದ ಮನರಂಜನಾ ಕಾರ್ಯಕ್ರಮಗಳ ಬಗೆಗೆ ಒಲವು ತೋರಿರುವುದು, ಆದರೆ ತೆಲುಗರಿಗೆ ಕನ್ನಡದ ಕಾರ್ಯಕ್ರಮಗಳನ್ನು ನೋಡುವಲ್ಲಿ ಆಸಕ್ತಿ ಇಲ್ಲ. ತೆಲುಗು ಬಿಟ್ಟರೆ ಹಿಂದಿಯೇ ಅವರ ಆಯ್ಕೆ ಇದಕ್ಕೆ ಸಾಕ್ಷಿ ಎನ್ನುವಂತೆ ಬಳ್ಳಾರಿಯ 12 ಚಿತ್ರಮಂದಿರಗಳಲ್ಲಿ ತೆಲುಗು ಭಾಷೆಯ ಸಿನಿಮಾಗಳೇ ರಾರಾಜಿಸುತ್ತಿರುತ್ತವೆ. ಹೊಸಪೇಟೆ, ಕಂಪ್ಲಿ, ಕಮಲಾಪುರ, ಮುಂತಾದೆಡೆಗಳಲ್ಲೂ ಅಷ್ಟೆ. ಕನ್ನಡಿಗರು - ತೆಲುಗರು ಎಲ್ಲಾ ಭಾಷಿಕರು ಹೆಚ್ಚು ಹೆಚ್ಚು ತೆಲುಗು ಸಿನಿಮಾಗಳನ್ನು

ನೋಡುತ್ತಿರುವುದು. ಕೆಲವು ಕನ್ನಡಿಗರಲ್ಲಿ ಇದರ ಬಗೆಗೆ ಆಕ್ರೋಶಗಳಿವೆ. ಇದನ್ನು ಆಗಾಗ ಪತ್ರಿಕೆಗಳಲ್ಲಿ "ಅನ್ನಾ ರೇಪು ಮಾ ಕಾಲೇಜುಲೊ ಕನ್ನಡ ಫಂಕ್ಷನ್ ಉಂದಿ ಅನ್ನಾ ..." "ಎನ್ನಡಾ, ಕಮಲಾಪುರದಲ್ಲಿ ಕನ್ನಡ ಎಕ್ಕಡಾ" (ವಿಜಯ ಕರ್ನಾಟಕ ದಿನಪತ್ರಿಕೆ) ಎನ್ನುವ ಶೀರ್ಷಿಕೆಗಳಡಿ ತೆಲುಗು ಭಾಷೆಯ ಬಳಕೆಯಿಂದಾಗಿ ಕನ್ನಡದ ಸ್ಥಿತಿಗತಿಗಳನ್ನು ಕುರಿತು ಬರೆದಿದ್ದಾರೆ. ಕನ್ನಡಿಗರಲ್ಲಿ ಕೆಲವು ಜಾತಿಯ ಭಾಷಿಕರು ತೆಲುಗು ಭಾಷಿಕರ ಬಳಿಯಲ್ಲಿ ಎಷ್ಟೇ ವರ್ಷಗಳು ನೆಲೆಸಿದ್ದರೂ ಅವರ ಭಾಷೆಯನ್ನು ಕಲಿಯದೇ ಕನ್ನಡವನ್ನು ಕಲಿಯುವಂತಹ ಅವಶ್ಯಕತೆಯನ್ನು ಉಂಟುಮಾಡುತ್ತಾರೆ. ತೆಲುಗನ್ನು ಕಲಿಯುವ ಆಸಕ್ತಿ ತೋರುವುದಿಲ್ಲ. ಗೃಹಿಕೆಯ ನೆಲೆಯಲ್ಲಿ ತೆಲುಗು ಭಾಷೆಯನ್ನು ಪಡೆದಿರುತ್ತಾರೆ. ತೆಲುಗು ಬರುತ್ತಾ ಅಥವಾ ಗೊತ್ತ ಎಂದು ಕನ್ನಡಿಗರಿಗೆ ಕೇಳಿದಾಗ ತೆಲುಗು - ಪಿಲುಗು ಗೊತ್ತಿಲ್ಲ ಎಂದು ನಿರಾಳವಾಗಿ ಯಾವುದೇ ಹಿಂಜರಿಕೆಗಳಿಲ್ಲದಂತೆ ಉತ್ತರಿಸುವವರು ಇಂಗ್ಲಿಶ್ ಗೊತ್ತಿಲ್ಲ ಎಂದು ಹೇಳುವಲ್ಲಿ ಹಲವು ರೀತಿಯ ಹಿಂಜರಿಕೆಗಳಿವೆ. ಆದರೆ ಭಾಷಾ ವಿಷಯದಲ್ಲಿ ತಮಿಳು - ಕನ್ನಡಿಗರಿಗಿರುವಂತಹ ಮನೋಭಾವಗಳು, ಕನ್ನಡ - ತೆಲುಗರಿಗಿಲ್ಲ. ಬಹಳಷ್ಟು ಪ್ರಮಾಣದಲ್ಲಿ ತುಂಬಾ ಆರೋಗ್ಯಕರವಾದ ಮನೋಭಾವಗಳು ಇರುವುದರಿಂದಲೇ ಅಂತಸ್ತು, ಅಧಿಕಾರ, ಪ್ರತಿಷ್ಠೆ ಎಲ್ಲವನ್ನೂ ಮೀರಿ ಜೀವನದ ಅವಶ್ಯಕತೆಗಳಿಗಾಗಿ ಅವರ ಭಾಷೆಯನ್ನು ಇವರು, ಇವರ ಭಾಷೆಯನ್ನು ಅವರು ಕಲಿತು ಸಹಬಾಳ್ವೆ, ಸಹಜೀವನ ನಡೆಸುತ್ತಿದ್ದಾರೆ. ರಾಜಕೀಯ ಗಡಿಗಳನ್ನು ಮೀರಿ ಭಾಷೆಯೂ ಭಾಷಿಕರಲ್ಲಿ ನೆಲೆಗೊಂಡಿರುವುದಕ್ಕೆ ಇಂತಹ ಮನೋಭಾವಗಳೇ ಕಾರಣವೆಂದರೆ ತಪ್ಪಾಗಲಾರದು.

ಇವಿಷ್ಟು ದ್ವಿಭಾಷಿಕರಿಗಿರುವ ಭಾಷೆಗಳ ಮೇಲಿನ ಮನೋಭಾವವನ್ನು ಕುರಿತಾದರೆ, ಭಾಷಿಕರ ನಡವಳಿಕೆಗಳು ದ್ವಿಭಾಷಾ ಸಂದರ್ಭಗಳಲ್ಲಿ ಬಹಳ ಭಿನ್ನವಾಗಿರುತ್ತದೆ. ಕ್ಷೇತ್ರಕಾರ್ಯದ ಸಂದರ್ಭದಲ್ಲೆ ಪ್ರಶ್ನಾವಳಿಯನ್ನು ಮುಂದಿಟ್ಟು ಸಂದರ್ಶನ ಮಾಡುವಾಗ ತೆಲುಗು ಭಾಷಿಕರು ತುಂಬಾ ಪ್ರಜ್ಞಾಪೂರ್ವಕವಾಗಿ ವಾಸ್ತವ ಸಂಗತಿಗಳನ್ನು ತಿರುಚಿ ಹೇಳಲು ಪ್ರಯತ್ನಿಸಿದ್ದರು. ತಮ್ಮ ಮನೆಮಾತುಗಳು ಯಾವುದೆಂಬ ಪ್ರಶ್ನೆಗಳಿಗೆ ಹಲವರ ಉತ್ತರ ಕನ್ನಡ ಎಂದೇ ಆಗಿತ್ತು. ಏಕೆಂದರೆ ತಮ್ಮ ಭಾಷೆ ತೆಲುಗು ಎಂದು ಹೇಳಿದರೆ ಕರ್ನಾಟಕ ಸರ್ಕಾರದ ಆಡಳಿತ ಸೌಲಭ್ಯಗಳು ತಮಗೆಲ್ಲಿ ದೊರಕುವುದಿಲ್ಲವೋ ಎಂಬ ಅನುಮಾನಗಳೇ ಇದಕ್ಕೆ ಕಾರಣವೆಂದು ಭಾಷಿಕರೊಬ್ಬರಿಂದ ತಿಳಿದುಬಂದಿತು. ನಂತರದಲ್ಲಿ ಪ್ರಶ್ನಾವಳಿ ಬಳಸದೇ ಧ್ವನಿಮುದ್ರಣ ಯಂತ್ರದಿಂದ ತೆಲುಗು ಭಾಷಿಕರಿಗೆ ಗೊತ್ತಿಲ್ಲದಂತೆ ಅವರುಗಳು ಹೇಳುವ ವಿವರಗಳನ್ನು ದಾಖಲು ಮಾಡಿಕೊಳ್ಳಬೇಕಾಯಿತು. ಇಂತಹ ನಡವಳಿಕೆಗಳು ಹೆಚ್ಚಾಗಿ ಕೆಳವರ್ಗ, ಕೆಳಮಧ್ಯಮವರ್ಗದ ಭಾಷಿಕರಲ್ಲಿ ಹೆಚ್ಚಾಗಿ ಕಂಡುಬಂದಿದೆ. ಕಾರಣ ಈ ವರ್ಗದ ಭಾಷಿಕರು ಭಾಷಿಕ ನಡುವಳಿಕೆಗಳಿಂದ ಸಮಾಜದಲ್ಲಿನ ತಮ್ಮ ಸ್ಥಾನಮಾನವನ್ನು ಉತ್ತಮಪಡಿಸಿಕೊಳ್ಳುವ ಅಥವಾ ತೋರ್ಪಡಿಸಿಕೊಳ್ಳುವ ಅಗತ್ಯವಿದೆಯೆಂದು ಭಾವಿಸುತ್ತಾರೆ. ಮೇಲ್ವರ್ಗದ ಭಾಷಿಕರು ಕನ್ನಡಿಗರ ಬಳಿ ಮಾತನಾಡುವಾಗ, ಕಛೇರಿಗಳಿಗೆ ಹೋದಾಗ, ಮತ ಕೇಳುವ ಸಂದರ್ಭದಲ್ಲಿ, ವ್ಯಾಪಾರದ ಸಂದರ್ಭಗಳಲ್ಲಿ ಹೆಚ್ಚಾಗಿ ಕನ್ನಡಿಗರ ಬಳಿ ಮಾತನಾಡುವಾಗ ಬೇಗ ಕನ್ನಡಕ್ಕೆ ಪಲ್ಲಟಗೊಳ್ಳುತ್ತಾರೆ.

ತೆಲುಗು ಭಾಷಿಕರ ಬಳಿ ಮತಯಾಚಿಸಲು ಹೋದಾಗ ಅವರ ಭಾಷೆಯಲ್ಲಿ ಮಾತನಾಡುವುದು, ಚುನಾವಣಾ ಪ್ರಚಾರ ಭಾಷಣಗಳನ್ನು ಮಾಡಲು ಆಂಧ್ರದಿಂದ ತೆಲುಗು ನಟನಟಿಯರನ್ನು ಕರೆತರುವುದು, ಇಂತಹ ಭಾಷಿಕ ನಡವಳಿಕೆಗಳ ಮೂಲಕ ಅಧಿಕಾರದ ಸ್ಥಾನಮಾನವನ್ನು ಪಡೆಯುವುದು, ಅದನ್ನು ನಿರ್ವಹಿಸುವ ನೆಲೆಯಲ್ಲೂ ತಮ್ಮ ನಡವಳಿಕೆಗಳಿಂದಲೇ ಸ್ಥಾನಮಾನಗಳನ್ನು ಉಳಿಸಿಕೊಳ್ಳಲು ಯತ್ನಿಸುವುದು, ಖಾಸಗಿ ಕ್ಷೇತ್ರಗಳಲ್ಲಿ ಇಂತಹ ಭಾಷಿಕ ನಡವಳಿಕೆಗಳು ಹೆಚ್ಚು ಕಾಣುತ್ತವೆ. ಖಾಸಗಿ ಬಸ್ಸುಗಳಲ್ಲಿ ಪ್ರಯಾಣಿಸುವಾಗ, ಕನ್ನಡದ ಪ್ರದೇಶಗಳಲ್ಲಿ ಸಂಚರಿಸುವಾಗ ಕನ್ನಡದ ಹಾಡುಗಳು, ತೆಲುಗು ಪ್ರದೇಶಗಳು ಬಂದ ತಕ್ಷಣ ತೆಲುಗು ಹಾಡುಗಳನ್ನು ಬಸ್ಸಿನಲ್ಲಿ ಹಾಕುವುದರ ಮೂಲಕ ಪ್ರಯಾಣಿಕರನ್ನು ಆಕರ್ಷಿಸುವುದು, ಜೊತೆಗೆ ವಾಹನ ಚಾಲಕ ಮತ್ತು ನಿರ್ವಾಹಕರು ತೆಲುಗು - ಕನ್ನಡದಲ್ಲೇ ಮಾತನಾಡುವುದು, ವ್ಯಾಪಾರ ಸಂದರ್ಭಗಳಲ್ಲಿ ತೆಲುಗು ಭಾಷಿಕರು ಕನ್ನಡಿಗರನ್ನು ಕಂಡ ತಕ್ಷಣ ಅವರ ಮೊದಲ ಆಯ್ಕೆ ಕನ್ನಡ. ಮಾರುವವರೂ ಅಷ್ಟೇ ಮೊದಲ ಆಯ್ಕೆ ಕನ್ನಡ, ಆದಕ್ಕೆ ಪ್ರತಿಕ್ರಿಯೆ ಇಲ್ಲದಾಗ ಎರಡನೆಯ ಆಯ್ಕೆ ತೆಲುಗು ಆಗಿರುತ್ತದೆ. ಸಂತೆಗಳಲ್ಲಿ, ಜಾತ್ರೆಗಳಲ್ಲಿ, ಮಾರುಕಟ್ಟೆಗಳಲ್ಲಿ, ವ್ಯಾಪಾರಸ್ಥರು ಕೊಳ್ಳುವವರನ್ನು ಕೂಗಿಕೊಳ್ಳುವುದು ಮೊದಲು ಕನ್ನಡ ನಂತರ ತೆಲುಗು. ತರಕಾರಿ, ಹಣ್ಣು ಇತ್ಯಾದಿಗಳನ್ನು ಮಾರಲು ಬರುವ ತೆಲುಗು ಭಾಷಿಕ ಮಹಿಳೆಯರನ್ನು ತೆಲುಗಿನಲ್ಲಿ ಮಾತನಾಡಿಸಿದರೆ ಹೆಚ್ಚು ಆತ್ಮೀಯರಾಗುತ್ತಾರೆ. ಮನೆ ಕೆಲಸಗಳಿಗೆ, ಕೂಲಿಕೆಲಸ, ಇತ್ಯಾದಿ ಸಣ್ಣ - ಪುಟ್ಟ ಕೆಲಸಗಳಿಗೆ ಬರುವ ಮಹಿಳೆಯರೂ ಅಷ್ಟೆ ತೆಲುಗಿನಲ್ಲಿ ಮಾತನಾಡಿದ ತಕ್ಷಣ ಅವರ ನಡವಳಿಕೆಯೇ ಬದಲಾಗುತ್ತದೆ. ಎಷ್ಟೋ ದಿನದಿಂದ ಪರಿಚಿತರಂತೆ ವರ್ತಿಸಲು ಪ್ರಾರಂಭಿಸುತ್ತಾರೆ. ಅಂಗಡಿ ಮುಗ್ಗಟ್ಟುಗಳು, ಬಳೆ ಅಂಗಡಿಗಳು, ಮೀನು, ಮಾಂಸ ಮಾರುಕಟ್ಟೆಯ ಸಾಲುಗಳಲ್ಲಿ ತೆಲುಗಿನಲ್ಲಿ ಮಾತನಾಡಿದರೆ ಬೆಲೆ ಕಡಿಮೆ ಮಾಡುವುದು, ಸಾಮಾನುಗಳನ್ನು ಬೇಗ ಕಟ್ಟಿಕೊಡುವುದು, ಒಳ್ಳೆಯ ಪದಾರ್ಥಗಳನ್ನು ನ್ಯಾಯಯುತವಾದ ಬೆಲೆಗೆ ಕೊಡುವುದರ ಮೂಲಕ ಭಾಷಿಕ ನಡವಳಿಕೆಗಳನ್ನು ತೋರಿಸುತ್ತಿರುತ್ತಾರೆ. ಭಾಷೆ ಬಹಳ ಹತ್ತಿರದಲ್ಲಿ ಆತ್ಮೀಯರನ್ನಾಗಿ ಮಾಡುತ್ತದೆ ಎನ್ನುವುದಕ್ಕೆ ಇಂತಹ ಭಾಷಿಕ ನಡವಳಿಕೆಗಳೇ ಉತ್ತಮ ಉದಾಹರಣೆಗಳಾಗಿವೆ. ಇನ್ನು ಕೆಲವು ಸಂದರ್ಭಗಳಲ್ಲಿ ಸಂವಹನವೇ ಮುಖ್ಯವಾಗಿರುತ್ತದೆ. ಭಾಷೆ ಮುಖ್ಯವಾಗಿರುವುದಿಲ್ಲ. ಆಗ ಮನುಷ್ಯ ಸಂಬಂಧಗಳು ಕೇವಲ ವ್ಯಾವಹಾರಿಕ ನೆಲೆಯಲ್ಲಷ್ಟೆ ಬೆಳೆದಿರುತ್ತವೆ.

ಹೀಗೆ ಭಾಷಾ ವ್ಯವಹಾರ ಒಂದಕ್ಕೊಂದು ಸಂಬಂಧವಿರುವ ಒಂದು ಮಾನಸಿಕ ಕ್ರಿಯೆ. ಸಾಮಾಜಿಕ ಅಂಶಗಳು ದಿನನಿತ್ಯದ ಭಾಷಾ ಬಳಕೆಯನ್ನು ನಿಯಂತ್ರಿಸುತ್ತಿರುತ್ತವೆ. ಸಾಮಾಜಿಕ ಗುಂಪು ಭಾಷೆಯನ್ನು ಪಡೆಯುವ (ಕಲಿಯುವ) ಕ್ರಿಯೆ ಜೀವನ ಪೂರ್ತಿ ನಡೆಯುತ್ತಿರುತ್ತದೆ; ಕೊನೆಯಿರುವುದಿಲ್ಲ. ಭಾಷೇತರ ಉಪಕರಣಗಳು ಭಾಷೆ ಜೊತೆಗೆ ಸಮ್ಮಿಲನವಾಗಿ ಭಾಷಾ ಪ್ರಕ್ರಿಯೆ ನಡೆಯುತ್ತಿರುತ್ತದೆ. ಉದ್ದೇಶಿತ ಭಾಷೆಯ ನಿಯಮಗಳಿಗೆ ಅನುಸಾರವಾಗಿ ಭಾಷೆ ಬಳಕೆಯಾಗುತ್ತಿರುವುದಿಲ್ಲ. ಸಂದರ್ಭಕ್ಕೆ ತಕ್ಕಂತೆ ಭಾಷಿಕರು ಭಾಷೆಯನ್ನು ಬಳಸುತ್ತಿರುತ್ತಾರೆ. ದಿನನಿತ್ಯದ ಜೀವನ

ಕ್ರಮದಲ್ಲಿ ಇದು ಒಪ್ಪಿತವಾದದ್ದು ಎನ್ನುವ ನಿಯಮಗಳೇನೂ ಇರುವುದಿಲ್ಲ. ಕ್ರಿಯೆಯ ಉದ್ದೇಶಕ್ಕೆ ಅನುಗುಣವಾಗಿ ಭಾಷೆ ಸಮಾಜದಲ್ಲಿ ಬಳಕೆಯಾಗುತ್ತಿರುತ್ತದೆ. ಒಂದು ಸಮುದಾಯದಲ್ಲಿ ಬಳಕೆಯಾಗುವ ಭಾಷೆ ಸಂಕೀರ್ಣ. ಅದು ಹಲವಾರು ಭಾಷಾ ವೈವಿಧ್ಯತೆ ಹಾಗೂ ವಿವಿಧ ವ್ಯವಸ್ಥೆಗಳ ಸಂಗಮವಾಗಿರುತ್ತದೆ.



ಅಧ್ಯಾಯ : ಒಂಭತ್ತು

# ಸಮಾರೋಪ

ಭಾಷೆ ವೈಯಕ್ತಿಕ ಅಭಿವ್ಯಕ್ತಿಯ ಸಂವಹನ ಕ್ರಿಯೆಯಾಗಿರುವಂತೆ ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂದರ್ಭಗಳಲ್ಲಿ ಪ್ರಕಟವಾಗುವ ವಿಧಾನವನ್ನು ಸಾಮಾಜಿಕ ಭಾಷಾಶಾಸ್ತ್ರಜ್ಞರು ಅಧ್ಯಯನ ಮಾಡುತ್ತ ಬಂದಿದ್ದಾರೆ. ಈ ಅಧ್ಯಯನದ ದಿಕ್ಕಿನಲ್ಲಿ ದ್ವಿ - ಬಹುಭಾಷಿಕತೆಗಳು ಭಾಷೆಯ ಸಾಮಾಜಿಕ ಮತ್ತು ಸಾಮೂಹಿಕ ಅಭಿವ್ಯಕ್ತಿಯ ಮುಖಗಳಾಗಿವೆ. ಆದ್ದರಿಂದ ದ್ವಿಭಾಷಿಕತೆ ಮತ್ತು ಭಾಷಾ ಸಂಪರ್ಕಕ್ಕೆ ಸಂಬಂಧಿಸಿದ ಅಧ್ಯಯನ ಸಾಮಾಜಿಕ ಭಾಷಾಶಾಸ್ತ್ರದ ಒಂದು ಪ್ರಮುಖ ಭಾಗವಾಗಿದೆ. ದಕ್ಷಿಣ ಭಾರತದಲ್ಲಿ ದ್ರಾವಿಡ ಭಾಷೆಗಳಿಗೆ ಸಂಬಂಧಿಸಿದಂತೆ ಹಲವು ಅಧ್ಯಯನಗಳು ನಡೆದಿವೆಯಾದರೂ ಕನ್ನಡದ ಸಂದರ್ಭದಲ್ಲಿ ಈ ಕುರಿತಂತೆ ನಡೆದ ಅಧ್ಯಯನಗಳು ಕಡಿಮೆ. ಕನ್ನಡದಲ್ಲಿ ಸಾಮಾಜಿಕ ಭಾಷಾಶಾಸ್ತ್ರದ ನೆಲೆಯಲ್ಲಿ ಅಧ್ಯಯನ ಮಾಡಲು ಬೇಕಾದ ಅಧ್ಯಯನ ಸಿದ್ಧ ಮಾದರಿಗಳು, ಸಮಾಜೋಭಾಷಿಕ ಅಧ್ಯಯನದ ವಿಧಿವಿಧಾನಗಳು, ಸೈದ್ಧಾಂತಿಕ ಚೌಕಟ್ಟು ಇಲ್ಲದಂತಹ ಸಂದರ್ಭದಲ್ಲಿ ಬಳ್ಳಾರಿ ಪರಿಸರದ ಕನ್ನಡ - ತೆಲುಗು ದ್ವಿಭಾಷಾ ಸಂದರ್ಭವೊಂದನ್ನು ಕುರಿತಂತೆ ಅಧ್ಯಯನವನ್ನು ಕೈಗೊಂಡಾಗ ಪ್ರಾರಂಭದಲ್ಲಿ ಕೆಲವು ಸಮಸ್ಯೆಗಳನ್ನು ಎದುರಿಸಬೇಕಾಯಿತು. ಆದಕಾರಣ ದ್ವಿಭಾಷಾ ಸಂದರ್ಭವೊಂದನ್ನು ಸಾಮಾಜಿಕ ಭಾಷಾಶಾಸ್ತ್ರದ ನೆಲೆಯಲ್ಲಿ ಅಧ್ಯಯನ ಮಾಡುವ ಉದ್ದೇಶದಿಂದ ಅಧ್ಯಯನ ಶಿಸ್ತಿಗೆ ಅವಶ್ಯವಾದ ವಿಧಿವಿಧಾನವೊಂದನ್ನು ರೂಪಿಸುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ. ಬಳ್ಳಾರಿ ಪರಿಸರದ ತೆಲುಗು - ಕನ್ನಡ ದ್ವಿಭಾಷಿಕತೆಯನ್ನು ಕುರಿತಂತೆ ದ್ವಿಭಾಷಿಕರ ಭಾಷಾ ಕಲಿಕೆ - ಬಳಕೆಯ ನೆಲೆಗಳನ್ನು ಶೋಧಿಸುವ ಕೇಂದ್ರದಿಂದ ಹೊರಟ ಪ್ರಸ್ತುತ ಅಧ್ಯಯನವು ಕ್ಷೇತ್ರಕಾರ್ಯವನ್ನು ಆಧರಿಸಿದ ಅಧ್ಯಯನವಾಗಿದೆ. ಬಳ್ಳಾರಿ ಪರಿಸರದ ತೆಲುಗು - ಕನ್ನಡ ದ್ವಿಭಾಷಾ ಸಂದರ್ಭವು ಗತಿಶೀಲ ಚಾರಿತ್ರಿಕ ಪ್ರಕ್ರಿಯೆಗಳು ಹಾಗೂ ಪ್ರಸ್ತುತ ವಿದ್ಯಮಾನಗಳಿಂದಾಗಿ ಚಲನಶೀಲವಾಗುತ್ತಿರುವ ಸಂಗತಿಯನ್ನು ಗಮನಿಸಲಾಗಿದೆ.

ಕ್ಷೇತ್ರಕಾರ್ಯದಲ್ಲಿ ದೊರೆತ ಮಾಹಿತಿಯ ಆಧಾರದಿಂದ ಸಮಾಜೋಭಾಷಿಕ ಅಂಶಗಳು ದ್ವಿಭಾಷಿಕರ ಭಾಷಾ ಕಲಿಕೆ - ಬಳಕೆಯ ನೆಲೆಗಳ ಮೇಲೆ ಬೀರುವ ಪರಿಣಾಮದಿಂದಾಗಿ ದ್ವಿಭಾಷಿಕರ ಭಾಷಾ ಕಲಿಕೆ - ಬಳಕೆಯ ನೆಲೆಗಳು ಭಿನ್ನವಾಗಿರುವುದನ್ನು ಗುರುತಿಸಲಾಗಿದೆ. ಬಳ್ಳಾರಿ ದ್ವಿಭಾಷಾ ಪರಿಸರದಲ್ಲಿ ಪ್ರತಿಯೊಂದು ತಾಲ್ಲೂಕಿನಿಂದ ತಾಲ್ಲೂಕಿಗೆ ದ್ವಿಭಾಷಿಕತೆಯ ಪ್ರಮಾಣ ಭಿನ್ನವಾಗಿದ್ದು; ಬಳ್ಳಾರಿ ಉತ್ತರ ಮತ್ತು ಪೂರ್ವದ ತಾಲ್ಲೂಕುಗಳಲ್ಲಿ ದ್ವಿಭಾಷಿಕತೆಯ ಪ್ರಮಾಣ ಹೆಚ್ಚು ನೆಲೆಗೊಂಡಿದೆ. ಬಳ್ಳಾರಿ ನಗರ ಸಂದರ್ಭವು ಹೆಚ್ಚು ತೆಲುಗು ಭಾಷೆಯ ಬಳಕೆಯ ಆವರಣಗಳನ್ನು ಹೊಂದಿದ್ದು, ಇನ್ನಿತರ ಪ್ರದೇಶಗಳಲ್ಲಿ ಅದರ ಪ್ರಮಾಣ ಭಿನ್ನವಾಗಿದೆ. ಈ ದ್ವಿಭಾಷಾ ಸಂದರ್ಭದಲ್ಲಿ ಕನ್ನಡಿಗರಿಗಿಂತ ತೆಲುಗು ಭಾಷಿಕರಿಗೆ ಕನ್ನಡವನ್ನು ಕಲಿತು ದ್ವಿಭಾಷಿಕರಾಗುವ ಅವಶ್ಯಕತೆಗಳು ಇದ್ದಂತೆ, ಕನ್ನಡಿಗರಿಗೆ ತೆಲುಗು ಭಾಷೆಯನ್ನು ಕಲಿತು ದ್ವಿಭಾಷಿಕರಾಗುವ ಹೆಚ್ಚಿನ ಅವಶ್ಯಕತೆಗಳಿಲ್ಲ. ಯಾವುದೇ ದ್ವಿಭಾಷಾ ಪ್ರದೇಶದಲ್ಲಿ ಇರುವ ಎಲ್ಲರೂ ದ್ವಿಭಾಷಿಕರಾಗಿರಲು ಸಾಧ್ಯವಿಲ್ಲ. ಹಾಗೆಯೇ ಇಲ್ಲಿಯೂ ದ್ವಿಭಾಷಿಕರಾಗುವ ಹೆಚ್ಚಿನ ಅವಶ್ಯಕತೆಗಳು ಎಲ್ಲರಿಗೂ ಇಲ್ಲ. ಕನ್ನಡಿಗರಲ್ಲಿ ಏಕ ಭಾಷಿಕರು ಹೆಚ್ಚಿನ ಸಂಖ್ಯೆಯಲ್ಲಿ ಕಾಣುತ್ತಿದ್ದು, ಲಿಂಗಾಯತ, ಕುರುಬ, ಜಾತಿಗಳಲ್ಲೆ ಇದು ಅಧಿಕವಾಗಿದೆ. ಕನ್ನಡಿಗರು ಏಕಭಾಷಿಕರಾಗಿರುವ ಪ್ರಮಾಣದಲ್ಲಿ ಪುರುಷರಿಗಿಂತ ಮಹಿಳೆಯರ ಪ್ರಮಾಣ ಹೆಚ್ಚು ಇದೆ. ಹಾಗೆಯೇ ತೆಲುಗು ಭಾಷಿಕರಲ್ಲಿಯೂ ಏಕಭಾಷಿಕರಿದ್ದು, ಇವರಲ್ಲಿ ಪುರುಷರಿಗಿಂತ ಮಹಿಳೆಯರಲ್ಲೆ ಏಕಭಾಷಿಕರು ಹೆಚ್ಚಿನ ಪ್ರಮಾಣದಲ್ಲಿರುವುದನ್ನು ಗಮನಿಸಲಾಗಿದೆ. ಕನ್ನಡಿಗರಲ್ಲಿ ಏಕಭಾಷಿಕರು ಇರುವುದಕ್ಕೆ ಕಾರಣ ಕೃಷಿಯನ್ನು ಅವಲಂಬಿಸಿರುವ ಕನ್ನಡ ಮನೆಭಾಷೆಯ ಕುಟುಂಬಗಳು ಅಧಿಕವಾಗಿವೆ. ಇವುಗಳಲ್ಲಿ ಅವಿಭಕ್ತ ಕುಟುಂಬಗಳು ಹೆಚ್ಚಿನ ಸಂಖ್ಯೆಯಲ್ಲಿ ಕಾಣುತ್ತಿರುವುದಲ್ಲದೆ ಸಾಕ್ಷರತೆಯ ಪ್ರಮಾಣ ಕಡಿಮೆ ಇದೆ. ಮೊದಲ ತಲೆಮಾರುಗಳಲ್ಲಿ ಸಾಕ್ಷರತೆಯ ಪ್ರಮಾಣವು ಕಡಿಮೆ ಇದ್ದು, ಈಗಿನ ತಲೆಮಾರುಗಳಲ್ಲಿ ಸಾಕ್ಷರತೆಯ ಪ್ರಮಾಣ ಹೆಚ್ಚಾಗುತ್ತಿದೆ. ಕುಟುಂಬದ ಯಜಮಾನ್ಯವನ್ನು ಹೆಚ್ಚಾಗಿ ಪುರುಷರೆ ನಿರ್ವಹಿಸುವುದರಿಂದ ಮಹಿಳೆಯರಿಗೆ ಹೊರ ಆವರಣಗಳಲ್ಲಿ ಅನ್ಯಭಾಷಿಕರೊಡನೆ ವ್ಯವಹರಿಸುವ ಅವಶ್ಯಕತೆ ಇಲ್ಲ. ಜೊತೆಗೆ ಬಹುಸಂಖ್ಯಾತ ಕನ್ನಡಿಗರೇ ನೆಲೆಸಿರುವುದರಿಂದ ಕೊಡು - ಕೊಳ್ಳುವಿಕೆಯು ಕನ್ನಡಿಗ - ಕನ್ನಡಿಗರ ನಡುವೆಯೇ ಹೆಚ್ಚಾಗಿ ನಡೆಯುತ್ತಿರುವದರಿಂದಲೂ, ಗ್ರಾಮೀಣ ಪ್ರದೇಶಗಳಲ್ಲೆ ಹೆಚ್ಚಿನ ಕನ್ನಡಿಗರು ನೆಲೆಸಿರುವದರಿಂದಲೂ ಅನ್ಯಭಾಷೆಯನ್ನು ಕಲಿಯುವ ಅವಕಾಶ ಕನ್ನಡಿಗರಿಗೆ ಇದ್ದಂತೆ ಕಂಡುಬಂದಿಲ್ಲ.

ತೆಲುಗು ಭಾಷಿಕರಲ್ಲಿ ಹೆಚ್ಚಿನ ಭಾಷಿಕರು ವಲಸಿಗರಾಗಿದ್ದು, ಕೆಳವರ್ಗ, ಕೆಳಮಧ್ಯಮ ವರ್ಗಗಳಲ್ಲಿ ಇರುವವರು, ಭಾಷಾ ದ್ವೀಪಗಳಲ್ಲಿ ವಾಸಿಸುತ್ತಿದ್ದು, ಅವಿದ್ಯಾವಂತರೂ, ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ಹಿಂದುಳಿದವರೂ ಆಗಿದ್ದಾರೆ. ವಯಸ್ಕ ಭಾಷಾ ಕಲಿಕೆಯ ಹಂತವನ್ನು ದಾಟಿದ ಮಹಿಳೆಯರು, ಹೊರ ಆವರಣಗಳಲ್ಲಿ ಕೂಲಿ ಮಾಡುವ ಸಂದರ್ಭಗಳಿಗೆ ಒಳಗಾಗದವರು, ಅವಿಭಕ್ತ ಕುಟುಂಬಗಳಲ್ಲಿ ನೆಲೆಸಿರುವವರು, ತಾಯ್ನಾಡಿನೊಂದಿಗೆ

ಹೆಚ್ಚಿನ ಸಂಪರ್ಕವನ್ನು ಹೊಂದಿರುವವರು, ದಿನನಿತ್ಯದ ವ್ಯವಹಾರಕ್ಕೆ ತೆಲುಗಿನ ಸಾಮಾಜಿಕ ಸಂದರ್ಭಗಳಿಗೆ ಒಳಗಾಗುವುದರಿಂದಲೂ, ಘೋರವಾದ ಜಾತಿಪದ್ಧತಿಗೆ ಒಳಗಾದವರಲ್ಲಿಯೂ ತೆಲುಗು ಏಕಭಾಷಿಕರು ಮಹಿಳೆಯರಲ್ಲಿದ್ದಾರೆ. ಪುರುಷರಲ್ಲಿ ವೃದ್ಧರು, ತೆಲುಗಿನ ಸಾಮಾಜಿಕ ಸಂದರ್ಭಗಳಿಗೆ ಹೆಚ್ಚಾಗಿ ಒಳಗಾಗಿರುವ ಕೂಲಿ ಕಾರ್ಮಿಕರು, ಅವಿದ್ಯಾವಂತರು, ತೀವ್ರವಾದ ಬಡತನ, ಜಾತಿಪದ್ಧತಿಗೆ ಒಳಗಾಗಿರುವವರು ತೆಲುಗು ಏಕಭಾಷಿಕರಾಗಿ ಉಳಿದಿದ್ದಾರೆ. ಉನ್ನತ ವರ್ಗದ ತೆಲುಗು ಭಾಷಿಕರಲ್ಲಿಯೂ ಮಹಿಳೆಯರಲ್ಲಿ ಏಕಭಾಷಿಕರಿರುವುದನ್ನು ಕಾಣಲಾಗಿದೆ. ಇವರಲ್ಲಿ ಆಂಧ್ರದ ವೈವಾಹಿಕ ಸಂಬಂಧದಿಂದಾಗಿ ಬಂದಿರುವ ಮಹಿಳೆಯರು ಕೃಷಿ ಆಧರಿಸಿದ ಅವಿಭಕ್ತ ಕುಟುಂಬಗಳಲ್ಲಿ ನೆಲೆಸಿರುವುದರಿಂದ ಕನ್ನಡದ ಸಾಮಾಜಿಕ ಸಂದರ್ಭಗಳಿಗೆ ಹೆಚ್ಚು ತೆರೆದುಕೊಳ್ಳುವ ಅವಶ್ಯಕತೆಗಳು ಇವರಿಗೆ ಇಲ್ಲ. ತೆಲುಗು ಸ್ನೇಹಿತರು, ಸಂಬಂಧಿಕರನ್ನು ಒಳಗೊಂಡಂತೆ ತೆಲುಗು ಭಾಷೆಯ ಸಾಮಾಜಿಕ ಸಂದರ್ಭಗಳಿಗೇ ಒಳಗಾಗುವ ಅವಶ್ಯಕತೆಗಳು ಇರುವುದರಿಂದ, ಸಾಕ್ಷರತೆಯ ಕೌಶಲಗಳನ್ನು ತೆಲುಗಿನಲ್ಲೆ ಪಡೆದುಕೊಂಡಿರುವುದರಿಂದ, ಮನೆ ಆವರಣಗಳಲ್ಲಿ ತೆಲುಗು ಭಾಷೆಯ ಮೌಖಿಕ ಕೌಶಲಗಳ ಜೊತೆಗೆ ಸಾಕ್ಷರತೆಯ ಕೌಶಲಗಳನ್ನೂ ಇವರು ಉಳಿಸಿಕೊಂಡಿರುವುದರಿಂದಲೂ, ತಾವು ಬಳಸುವ ಭಾಷೆ ಪ್ರತಿಷ್ಠೆ ಎನ್ನುವ ಕಾರಣದಿಂದಲೂ ಇವರಲ್ಲಿ ಏಕಭಾಷಿಕರಿರುವುದು ಕಾಣುತ್ತಿದೆ. ಪುರುಷರಲ್ಲಿ ಇದರ ಪ್ರಮಾಣ ಕಡಿಮೆ ಇದೆ. ವೃದ್ಧರಲ್ಲಿ, ಮೊದಲ ತಲೆಮಾರಿನ ಕೃಷಿಕರಲ್ಲಿ ಮಾತ್ರ ಏಕಭಾಷಿಕರಿದ್ದಾರೆ.

ದ್ವಿಭಾಷಿಕರಾಗುವ ಅವಶ್ಯಕತೆಗಳು ಲಿಂಗಾಯತ, ಕುರುಬ, ಬ್ರಾಹ್ಮಣ ಜಾತಿಗಳಲ್ಲಿ ಭಿನ್ನವಾಗಿದ್ದು, ತೆಲುಗು ಕಲಿಯುವ ಅವಶ್ಯಕತೆಗಳು ಈ ಜಾತಿಗಳಲ್ಲಿ ಹೆಚ್ಚಿಗೆ ಇಲ್ಲ. ವ್ಯಾಪಾರದ ಸಂದರ್ಭಗಳಿಗೆ ಒಳಗಾದವರು, ಗಡಿ ಪ್ರದೇಶಗಳಲ್ಲಿ ನೆಲೆಸಿರುವ ಕೆಲವರಲ್ಲಿ, ಬಳ್ಳಾರಿ ನಗರ ಸಂದರ್ಭದಲ್ಲಿ ಮಾತ್ರ ಆಂಶಿಕ ಪಲ್ಲಟವನ್ನು ತೆಲುಗು ಭಾಷೆಗೆ ಮಾಡುವುದನ್ನು ಕಾಣಲಾಗಿದೆ. ಅದರಲ್ಲೂ ಪುರುಷರಲ್ಲೆ ದ್ವಿಭಾಷಿಕರಾಗಿರುವುದು ಈ ಜಾತಿಗಳಲ್ಲಿ ಕಾಣುತ್ತಿದ್ದು, ಮಹಿಳೆಯರಲ್ಲಿ ದ್ವಿಭಾಷಿಕರ ಪ್ರಮಾಣ ಬೆರಳೆಣಿಕೆಯಷ್ಟು ಮಾತ್ರ. ಆಂಧ್ರದಿಂದ ವಲಸೆ ಬಂದವರಿಗೆ ಮಾತ್ರ ಈ ಜಾತಿಗಳಲ್ಲಿ ದ್ವಿಭಾಷಿಕರಾಗಿರುವ ಅವಶ್ಯಕತೆಗಳಿರುವುದನ್ನು ಕಾಣಲಾಗಿದೆ. ಉಳಿದಂತೆ ತೆಲುಗನ್ನು ಮನೆಭಾಷೆಯನ್ನಾಗಿ ಬಳಸುತ್ತಿರುವ ಎಲ್ಲಾ ಜಾತಿಯಲ್ಲಿನ ಭಾಷಿಕರಿಗೂ ಕನ್ನಡ ಕಲಿಯುವ ಅವಶ್ಯಕತೆಗಳಿವೆ. ಪರಿಶಿಷ್ಟ ಜಾತಿಗಳಲ್ಲಿ ಮತ್ತು ಪರಿಶಿಷ್ಟ ಪಂಗಡದ ಕೆಲವು ಕುಟುಂಬಗಳಲ್ಲಿ ಕನ್ನಡ - ತೆಲುಗು ಎರಡೂ ಭಾಷೆಗಳನ್ನು ಮನೆಭಾಷೆಯಾಗಿ ಬಳಸುತ್ತಿದ್ದಾರೆ. ಇದಕ್ಕೆ ಕಾರಣ ವೈವಾಹಿಕ ಸಂಬಂಧದಿಂದ ಉಂಟಾದ ದ್ವಿಭಾಷಿಕತೆಯಲ್ಲಿ ತಾಯಿ ಮತ್ತು ಅವರ ಸಂಬಂಧಿಕರಿಂದ ಒಂದು ಭಾಷೆಯನ್ನು, ತಂದೆ ಮತ್ತು ಅವರ ಸಂಬಂಧಿಕರಿಂದ ಮತ್ತೊಂದು ಭಾಷೆಯನ್ನು ಮಕ್ಕಳು ಕಲಿತಿರುವುದರಿಂದ ಎರಡೂ ಭಾಷೆಗಳೂ ಪ್ರಥಮ ಭಾಷೆಗಳೇ ಆಗಿವೆ. ಆದರೆ ಶೈಕ್ಷಣಿಕ ಸಂದರ್ಭಗಳಿಗೆ ಒಳಗಾಗುವಾಗ ಶಾಲಾ ದಾಖಲಾತಿಯಲ್ಲಿ ಕನ್ನಡವನ್ನೆ ಮನೆಭಾಷೆಯೆಂದು ದಾಖಲಿಸಿರುವುದು ಕೆಲವೆಡೆಗಳಲ್ಲಿ ಕಾಣುತ್ತಿದೆ. ಮನೆ

ಆವರಣಗಳಲ್ಲಿ ತೆಲುಗು ಭಾಷೆಯನ್ನು ಪ್ರಧಾನವಾಗಿ ಬಳಸುತ್ತಿದ್ದರು. ಹೊರ ಆವರಣಗಳಲ್ಲಿ ಕನ್ನಡವೇ ಪ್ರಧಾನ ಭಾಷೆಯಾಗಿ ಕಾಣುತ್ತಿದೆ (ಬಳ್ಳಾರಿ ನಗರ ಸಂದರ್ಭವನ್ನು ಹೊರತುಪಡಿಸಿ).

ಕನ್ನಡಿಗರು ತೆಲುಗು ಭಾಷೆಯಲ್ಲಿ ಗ್ರಹಿಕೆಯ ಕೌಶಲಗಳನ್ನು ಹೆಚ್ಚು ಪಡೆದಿದ್ದಾರೆ. ಆದ್ದರಿಂದ ಅರೆದ್ವಿಭಾಷಿಕತೆಯ ಸಂದರ್ಭವೊಂದು ಈ ದ್ವಿಭಾಷಾ ಸಂದರ್ಭದಲ್ಲಿರುವುದನ್ನು ಗಮನಿಸಲಾಗಿದೆ. ಕನ್ನಡ ಏಕಭಾಷಿಕರಿಗೆ ತೆಲುಗು ಏಕಭಾಷಿಕರ ಬಳಿ ಸಂವಹಿಸುವಂತ ಸನ್ನಿವೇಶಗಳಲ್ಲಿ ಇರುವ ಕಷ್ಟವನ್ನು ಕಾಣಲಾಗಿದೆ. ಇದು 'ಶಿಕ್ಷಣ'ದ ಆವರಣದಲ್ಲಿ ಹೆಚ್ಚಾಗಿದ್ದು, ಕನ್ನಡದ ಔಪಚಾರಿಕ ಆವರಣಗಳಲ್ಲಿಯೂ ಸ್ವಲ್ಪಮಟ್ಟಿಗೆ ಇದೆ. ಎಲ್ಲಿ ಸಂವಹನದ ಅವಧಿ ದೀರ್ಘವಾಗಿರುತ್ತದೆಯೋ ಅಲ್ಲಿ ದ್ವಿಭಾಷಿಕತೆಯ ಕಷ್ಟವಿದೆ. ಎಲ್ಲಿ ಸಂವಹನದ ಅವಧಿ ಕಡಿಮೆ ಇರುತ್ತದೆಯೋ ಅಲ್ಲಿ ದ್ವಿಭಾಷಾ ಸಂಪರ್ಭವೊಂದು ಕಷ್ಟಕರವಲ್ಲ. ಇಂತಹ ಸಂದರ್ಭಗಳಲ್ಲಿ ಎರಡೂ ಭಾಷೆಗಳನ್ನು ಬಲ್ಲವರು ಸನ್ನಿವೇಶವೊಂದರ ಸಂವಹನ ಸಂದರ್ಭಗಳನ್ನು ನಿರ್ವಹಿಸುವುದನ್ನು ಕಾಣಲಾಗಿದೆ.

ಬಳ್ಳಾರಿ ಪರಿಸರದಲ್ಲಿ ಏಕೀಕರಣಕ್ಕೆ ಮುಂಚಿನ ದಿನಗಳಲ್ಲಿ ಇದ್ದ ಶೈಕ್ಷಣಿಕ ಸನ್ನಿವೇಶಗಳು ಏಕೀಕರಣೋತ್ತರದಲ್ಲಿ ಬದಲಾವಣೆಗೆ ಒಳಗಾಗುತ್ತಿವೆ. ಪ್ರಸ್ತುತ ಕನ್ನಡ ಭಾಷೆಯ ಪರವಾಗಿ ಕರ್ನಾಟಕ ಸರ್ಕಾರದ ಆಡಳಿತಾತ್ಮಕ ನಿರ್ಧಾರಗಳಿಂದಾಗಿ ಸಾಮಾಜಿಕವಾಗಿ ಮೇಲ್‌ಮುಖ ಚಲನೆಯ ಕಡೆಗೆ ಚಲಿಸುವ ಕೆಳವರ್ಗದ ತೆಲುಗು ಭಾಷಿಕರಲ್ಲಿ ಕನ್ನಡ ಭಾಷೆಯ ಕಡೆಗೆ ಪಲ್ಲಟಗಳು ಉಂಟಾಗುತ್ತಿವೆ. ಉನ್ನತ ವರ್ಗದ ತೆಲುಗು ಭಾಷಿಕರಲ್ಲಿ ಇಂಗ್ಲಿಶ್ ಭಾಷೆಯ ಕಡೆಗೆ ಸಾಕ್ಷರತೆಯ ಪಲ್ಲಟಗಳು ಉಂಟಾಗಿ, ಕನ್ನಡ ಮತ್ತು ತೆಲುಗು ಭಾಷೆಗಳು ಮೌಖಿಕ ನೆಲೆಗಳಲ್ಲಿ ಹೆಚ್ಚು ಉಳಿಯುವಂತೆ ಆಗಿವೆ. ವಲಸಿಗ ತೆಲುಗು ಭಾಷಿಕರು ಕನ್ನಡದಲ್ಲಿ ಶಿಕ್ಷಣವನ್ನು ಪಡೆಯುವುದು ಹೆಚ್ಚಾಗಿದೆ. ಅವರ ಶೈಕ್ಷಣಿಕ ಸಾಧನೆಗಳನ್ನು ಗಮನಿಸಿದಾಗ ಸಮಾಜೋಭಾಷಿಕ ಅಂಶಗಳು ಬೀರುವ ಪರಿಣಾಮದಿಂದಾಗಿ ಅವರ ಶೈಕ್ಷಣಿಕ ಸಾಧನೆಯು ಭಿನ್ನವಾಗಿದೆ. ಕನ್ನಡ ಭಾಷೆಯ ಮಕ್ಕಳಿಗಿಂತ ಮಂದಗತಿಯ ಕಲಿಕೆಯಲ್ಲಿರುವುದು ಗುರುತಿಸಲಾಗಿದೆ. ಹಾಗೆಯೇ ಪ್ರಾಥಮಿಕ ಹಂತದಲ್ಲಿ ಇರುವ ಕಲಿಕೆ - ಗ್ರಹಿಕೆಯ ಸಮಸ್ಯೆಗಳು ಹೈಸ್ಕೂಲ್ ಹಂತದಲ್ಲಿ ಹೆಚ್ಚಾಗಿ ಕಾಣುತ್ತಿಲ್ಲ. ಕೆಳವರ್ಗ ಮತ್ತು ಕೆಳಮಧ್ಯಮವರ್ಗದ ವಲಸಿಗ ವರ್ಗದಲ್ಲೆ ಕನ್ನಡ ಭಾಷೆಯ ಸಾಕ್ಷರತೆಯ ಕಡೆಗೆ ಹೆಚ್ಚಿನ ಪಲ್ಲಟಗಳಾಗುತ್ತಿದ್ದು, ಮನೆ ಆವರಣ, ಸ್ನೇಹಿತರು, ಸಂಬಂಧಿಕರು, ಒಟ್ಟಿಗೆ ಒಂದೇ ಪ್ರದೇಶದಲ್ಲಿ ನೆಲೆಸಿರುವುದರಿಂದ, ಅಂತಹ ಸ್ಥಳಗಳಲ್ಲಿ ತೆಲುಗು ಭಾಷೆಯನ್ನು ಪ್ರಧಾನವಾಗಿ ಸಂವಹನದ ಸಂದರ್ಭಗಳಿಗೆ ಒಳಗುಂಪುಗಳಲ್ಲಿ ಬಳಸುತ್ತಿರುವುದಲ್ಲದೆ, ತೆಲುಗು ಚಿತ್ರಗೀತೆಗಳನ್ನು ಕೇಳುವುದು, ತೆಲುಗು ಸಿನಿಮಾ, ಧಾರವಾಹಿಗಳನ್ನು ನೋಡುವುದರ ಮೂಲಕ, ಗುಂಪು - ಗುಂಪಾದ ಆಟಗಳು, ಹರಟೆ, ಹಾಡು ಇತ್ಯಾದಿಗಳನ್ನು ತೆಲುಗಿನಲ್ಲೆ ಬಳಸುವುದರ ಮೂಲಕ ಭಾಷೆಯನ್ನು ಸಂಗೋಪನೆ ಮಾಡುತ್ತಿದ್ದಾರೆ. ಈಗಿನ ತಲೆಮಾರುಗಳಲ್ಲಿ ಕನ್ನಡದ ಸಾಕ್ಷರತೆಯ ಸಂದರ್ಭಗಳಿಗೆ ಒಳಗಾದವರಲ್ಲಿ ಕನ್ನಡ ಭಾಷೆಯ ಕಡೆಗೆ ಹೆಚ್ಚು ಪಲ್ಲಟಗೊಳ್ಳುತ್ತಿದ್ದಾರೆ.

ನುಡಿಮಿಶ್ರಣ ಮತ್ತು ನುಡಿ ಪಲ್ಲಟದ ಸಂದರ್ಭಗಳು ಈ ದ್ವಿಭಾಷಾ ಸಂದರ್ಭದಲ್ಲಿ ಕಾಣುತ್ತಿವೆ. ವಯಸ್ಕ ಭಾಷಾ ಕಲಿಕೆಯ ಹಂತವನ್ನು ದಾಟಿದ ತೆಲುಗು ಭಾಷಿಕರಲ್ಲಿ, ಅದರಲ್ಲೂ ಕೆಳವರ್ಗ, ಕೆಳಮಧ್ಯಮವರ್ಗದ ಅವಿದ್ಯಾವಂತರಲ್ಲಿ ತೆಲುಗಿನ ಸಾಮಾಜಿಕ ಸಂದರ್ಭಗಳಿಗೆ ಒಳಗಾದವರಲ್ಲಿ, ಭಾಷಾ ಕೌಶಲಗಳು ಸರಿಯಾಗಿ ಗೊತ್ತಿಲ್ಲದ ಸಂದರ್ಭಗಳಲ್ಲಿ, ಕನ್ನಡದ ಸಾಮಾಜಿಕ ಸಂದರ್ಭಗಳಿಗೆ ಒಳಗಾಗುವಾಗ ಉಂಟಾಗುವ ನುಡಿಮಿಶ್ರಣದ ಪ್ರಕ್ರಿಯೆಯನ್ನು ಗುರುತಿಸಲಾಗಿದೆ. ಇದು ಮಹಿಳೆಯರಲ್ಲಿ ಮತ್ತು ಪುರುಷರಿಬ್ಬರಲ್ಲಿಯೂ ಮೇಲಿನ ಸಂದರ್ಭಗಳಲ್ಲಿ ಕಾಣುತ್ತದೆ. ನುಡಿಜಗಿತವು ಆಕರ್ಷಣೆಯನ್ನೊಡ್ಡಿ ವ್ಯಾಪಾರ ಮಾಡುವ ಸಂದರ್ಭಗಳಲ್ಲಿ, ಕನ್ನಡದ ಔಪಚಾರಿಕ ಸಂದರ್ಭಗಳಲ್ಲಿ, ಶೈಕ್ಷಣಿಕ ಸಂದರ್ಭಗಳಲ್ಲಿ, ಚುನಾವಣಾ ಪ್ರಚಾರ ಭಾಷಣಗಳಲ್ಲಿ, ಮುಂತಾದ ಹಲವು ಸಂದರ್ಭಗಳಲ್ಲಿ ಗುರುತಿಸಲಾಗಿದ್ದು, ತೆಲುಗು ಭಾಷಿಕರೆ ಬೇಗ ಕನ್ನಡಕ್ಕೆ ನುಡಿಪಲ್ಲಟವಾಗುತ್ತಾರೆಯೇ ಹೊರತು ಕನ್ನಡಿಗರು ತೆಲುಗಿಗೆ ನುಡಿಪಲ್ಲಟವಾಗುವ ಸಂದರ್ಭಗಳು ಕಡಿಮೆ ಎನ್ನುವ ಅಂಶವನ್ನು ಕಾಣಲಾಗಿದೆ. ತೆಲುಗನ್ನು ಔಪಚಾರಿಕ ಸಂದರ್ಭಗಳಿಗೆ ಬಳಸಲು ಇರುವ ಹಿಂಜರಿಕೆಯೂ ಇದಕ್ಕೆ ಕಾರಣವಾಗಿರಬಹುದು. ಕನ್ನಡಿಗರಿಗೆ ಮತ್ತು ತೆಲುಗರಿಬ್ಬರಿಗೂ ಹೆಚ್ಚಿನ ಸಂದರ್ಭಗಳಲ್ಲಿ ಆರೋಗ್ಯಕರವಾದ ಭಾಷಾ ಧೋರಣೆಗಳು, ಸಂಬಂಧಗಳು ಎರಡೂ ಭಾಷೆಯ ಬಗೆಗೆ ಇರುವುದನ್ನು ಕಾಣಲಾಗಿದೆ. ತೆಲುಗು ಭಾಷಿಕರಿಗೆ ಕನ್ನಡ ಭಾಷೆಯ ಬಗೆಗಿರುವ ಮನೋಭಾವ ಒಂದೆಡೆ ಭಾಷಿಕರಲ್ಲಿ ಭಾಷಾ ಪಲ್ಲಟವನ್ನುಂಟು ಮಾಡುತ್ತಿದ್ದರೆ, ಇನ್ನು ಕೆಲವರಲ್ಲಿ ತೆಲುಗು ಪ್ರತಿಷ್ಠಿತ ಭಾಷೆಯಾಗಿದೆಯಲ್ಲದೆ, ರಾಜಕೀಯವಾಗಿ 'ರಹದಾರಿ'ಯಾಗಿದೆ.

ಭಾಷಿಕರ ಭಾಷಾ ಆಯ್ಕೆಗಳು ಬಹುಮಟ್ಟಿಗೆ ನಿರ್ದಿಷ್ಟಗೊಂಡಂತಿವೆ. ಭಾಷಿಕ ಸಂದರ್ಭಗಳು ಬದಲಾದಂತೆ ಭಾಷಿಕರ ಆಯ್ಕೆ ಮತ್ತು ನಡವಳಿಕೆಗಳು ಕೆಲವೊಂದು ಸಂದರ್ಭಗಳಲ್ಲಿ ಭಿನ್ನವಾಗಿರುವುದನ್ನು ಗುರುತಿಸಲಾಗಿದೆ. ಅನೇಕ ಸಂದರ್ಭಗಳಲ್ಲಿ ದ್ವಿಭಾಷಿಕರಲ್ಲಿ ಅಧಿಕಾರ, ಅಂತಸ್ತುಗಳ ಮುಂದೆ ಭಾಷೆಯ ಸ್ಥಾನ ಕೆಳಮಟ್ಟಕ್ಕೆ ಹೋದರೆ, ಕೆಲವು ಸಂದರ್ಭಗಳಲ್ಲಿ ಆರ್ಥಿಕ ಸ್ಥಾನಮಾನ, ಅಧಿಕಾರದ ಸ್ಥಾನಮಾನಗಳನ್ನು ಮೀರಿ ಭಾಷೆಯ ಸ್ಥಾನಮಾನ ಮೇಲಿರುವುದನ್ನು ಗುರುತಿಸಲಾಗಿದೆ.

ಒಟ್ಟಾರೆಯಾಗಿ ಬಳ್ಳಾರಿ ಪರಿಸರದ ದ್ವಿಭಾಷಾ ಸಂದರ್ಭದ ಮೊದಲ ತಲೆಮಾರುಗಳಲ್ಲಿ ಮತ್ತು ಎರಡನೆಯ ತಲೆಮಾರುಗಳಲ್ಲಿ ತೆಲುಗರು ಕನ್ನಡವನ್ನು ಕಲಿತು ದ್ವಿಭಾಷಿಕರಾಗಿರುವುದು ಹೆಚ್ಚಾಗಿ ಸಾಮಾಜೀಕರಣದಿಂದಲೆ. ಈಗಿನ ತಲೆಮಾರುಗಳಲ್ಲಿನ ತೆಲುಗು ಭಾಷಿಕರು ಕನ್ನಡದ ಸಾಕ್ಷರತೆಯ ಕೌಶಲಗಳನ್ನು ಪಡೆಯುವುದರ ಮೂಲಕ ಮೌಖಿಕ ಕೌಶಲಗಳ ಜೊತೆ ಸಾಕ್ಷರತೆಯ ಕೌಶಲಗಳನ್ನು ಪಡೆದುಕೊಳ್ಳುತ್ತಿರುವುದರಿಂದ ದ್ವಿಭಾಷಾ ಸಂದರ್ಭವೊಂದು ಚಲನಶೀಲ ಪ್ರಕ್ರಿಯೆಗೆ ಒಳಗಾಗುತ್ತಿರುವುದನ್ನು ಗಮನಿಸಲಾಗಿದೆ. ಹೀಗೆ ಶಿಕ್ಷಣದಿಂದ ಉಂಟಾಗಿರುವ ದ್ವಿಭಾಷಿಕತೆಯಲ್ಲಿ ಮೌಖಿಕ

ಕೌಶಲಗಳ ಜೊತೆಗೆ ಸಾಕ್ಷರತೆಯ ಕೌಶಲಗಳು ಗಟ್ಟಿಗೊಳ್ಳುತ್ತಾ ಹೋದಂತೆ ಮನೆಭಾಷೆಯು ಮಿತವಾದ ಬಳಕೆಯಿಂದಾಗಿ ಸೀಮಿತ ಆವರಣದಲ್ಲಿ ಉಳಿಯಬಹುದು. ಆಧುನಿಕೋತ್ತರ ಪ್ರಕ್ರಿಯೆಗಳಿಂದಾಗಿ ಉಂಟಾಗಿರುವ ಬಳ್ಳಾರಿ ತೆಲುಗು - ಕನ್ನಡ ದ್ವಿಭಾಷಾ ಸಂದರ್ಭದ ಚಲನಶೀಲತೆಯು ಸಾಮುದಾಯಿಕ ನೆಲೆಯಲ್ಲಿ ಹೆಚ್ಚು ಬದಲಾವಣೆಗೆ ಒಳಗಾಗಿ, ವ್ಯಕ್ತಿಗತ ನೆಲೆಯಲ್ಲಿ ದ್ವಿಭಾಷಿಕತೆ ಉಳಿಯಬಹುದು. ಈ ದ್ವಿಭಾಷಿಕತೆಯ ಅಧ್ಯಯನ ಇಲ್ಲಿಗೆ ನಿಂತಿದೆ. ದ್ವಿಭಾಷಿಕತೆಯ ಅಧ್ಯಯನಗಳು ಒಂದಕ್ಕೊಂದು ಕೊಂಡಿಯಂತಿರುವುದರಿಂದ ಈ ಕ್ಷೇತ್ರದಲ್ಲಿ ಆಸಕ್ತಿ ಇರುವ ಸಂಶೋಧಕರು ದ್ವಿಭಾಷಿಕತೆಯ ಅಧ್ಯಯವನ್ನು ಭಿನ್ನವಾದ ನೆಲೆಗಳಲ್ಲಿ ಮುಂದುವರೆಸಿಕೊಂಡು ಹೋಗಬಹುದು.

## ಮುಂದಿನ ಅಧ್ಯಯನದ ಸುಳಿವು

ಪ್ರಸ್ತುತ ಕನ್ನಡ - ತೆಲುಗು ದ್ವಿಭಾಷಾ ಸಂದರ್ಭವನ್ನು ಅಧ್ಯಯನ ಮಾಡುವಾಗ ಹೆಚ್ಚು ದ್ವಿಭಾಷಿಕ ಕುಟುಂಬಗಳನ್ನು ಸೂಕ್ಷ್ಮವಾದ ಅಧ್ಯಯನಕ್ಕೆ ಒಳಪಡಿಸಲು ಆಗಿಲ್ಲ. ಸಮಗ್ರವಾಗಿ ದ್ವಿಭಾಷಾ ಸಂದರ್ಭದಲ್ಲಿನ ದ್ವಿಭಾಷಿಕರ ಭಾಷಾ - ಕಲಿಕೆ - ಬಳಕೆಯ ನೆಲೆಗಳನ್ನು ಗುರುತಿಸಲು ಮಾಡಿರುವ ಪ್ರಯತ್ನವಷ್ಟೆ. ಮುಂದಿನ ಅಧ್ಯಯನಗಳಲ್ಲಿ ದ್ವಿಭಾಷಿಕ ಕುಟುಂಬಗಳನ್ನು ಸೂಕ್ಷ್ಮ ಅಧ್ಯಯನಕ್ಕೆ ಒಳಪಡಿಸಿ ಅಧ್ಯಯನ ಮಾಡಿದರೆ ಇನ್ನಷ್ಟು ಸಂಗತಿಗಳನ್ನು ಕಾಣಬಹುದಾಗಿದೆ.

ಎರಡು ದ್ವಿಭಾಷಾ ಸಂದರ್ಭಗಳನ್ನು ತೌಲನಿಕವಾಗಿ ಅಧ್ಯಯನ ಮಾಡುವುದರಿಂದ ಭಾರತದಲ್ಲಿನ ದ್ವಿಭಾಷಾ ಸಂದರ್ಭಗಳ ದ್ವಿಭಾಷಿಕತೆಯ ಪ್ರಮಾಣ, ಸ್ವರೂಪ, ಭಾಷೆಯ ಕಲಿಕೆ - ಬಳಕೆಯ ನೆಲೆಗಳನ್ನು ವಿಭಿನ್ನವಾಗಿ ಗುರುತಿಸಬಹುದಾಗಿದೆ. ಹಾಗೆಯೇ ಎರಡು ವರ್ಗ ಅಥವಾ ಎರಡು ಜಾತಿಗಳನ್ನು ತೌಲನಿಕವಾಗಿ ನೋಡುವುದರ ಮೂಲಕವೂ ಹಲವು ಭಿನ್ನತೆಗಳನ್ನು ದ್ವಿಭಾಷಾ ಸಂದರ್ಭದಲ್ಲಿ ಗುರುತಿಸಬಹುದಾಗಿದೆ.

ದ್ವಿಭಾಷಿಕತೆಯು ನೆಲೆಗೊಂಡಿರುವ ಪ್ರದೇಶದಲ್ಲಿ ಶಿಕ್ಷಣದ ಸಂದರ್ಭಗಳಲ್ಲಿ ಆಗುತ್ತಿರುವ ಪರಿಣಾಮಗಳನ್ನೆ ಪ್ರತ್ಯೇಕ ಅಧ್ಯಯನವನ್ನು ಕೈಗೊಳ್ಳುವ ಅವಶ್ಯಕತೆ ಇದೆ. ಇದಕ್ಕೆ ಬೇಕಾದ ವಿಧಿ - ವಿಧಾನಗಳು ಕನ್ನಡದ ಸಂದರ್ಭದಲ್ಲಿ ಇಲ್ಲವಾದರೂ, ಅದನ್ನು ರೂಪಿಸಿಕೊಂಡು ಸೂಕ್ಷ್ಮ ಅಧ್ಯಯನಕ್ಕೆ ಒಳಪಡಿಸಿ ದ್ವಿಭಾಷಿಕತೆಯು ಮಕ್ಕಳ ಶೈಕ್ಷಣಿಕ ಸಾಧನೆಯ ಮೇಲೆ ಬೀರುವ ಪರಿಣಾಮವನ್ನು ತಿಳಿಯಬಹುದಾಗಿದೆ.

ದ್ವಿಭಾಷಿಕತೆಯು ನೆಲೆಗೊಂಡಿರುವ ಪ್ರದೇಶದಲ್ಲಿ ಯಾವುದಾದರೂ ಒಂದೇ ಒಂದು ಗ್ರಾಮ ಅಥವಾ ನಗರವನ್ನು ತೆಗೆದುಕೊಂಡು ಅಧ್ಯಯನ ಮಾಡುವುದರಿಂದ ದ್ವಿಭಾಷಿಕತೆಯ ಬಗೆಗೆ ಇನ್ನಷ್ಟು ಸೂಕ್ಷ್ಮವಾದ ಸಂಗತಿಗಳನ್ನು ತಿಳಿಯಲು ಸಾಧ್ಯ. (ಗುಂಫರ್ಜ್‌ರವರು ಮಹಾರಾಷ್ಟ್ರದ ಕುಪ್‌ವಾರ್ ಗ್ರಾಮದಲ್ಲಿ ಮಾಡಿರುವ ಅಧ್ಯಯನದ ಹಾಗೆ)

ಎರಡು ಬಿನ್ನ ಭಾಷೆಗಳ ಸಂಪರ್ಕದಿಂದಾಗಿ ಉಂಟಾಗುವ ಭಾಷಿಕ ಸನ್ನಿವೇಶಗಳು, ಭಾಷಿಕ ಪ್ರಕ್ರಿಯೆಗಳಲ್ಲಿನ ಫಿಜಿನ್, ಕ್ರಿಯೋಲ್, ದ್ವೈಗ್ಲಾಸಿಯಾ, ನುಡಿಮಿಶ್ರಣ, ನುಡಿಪಲ್ಲಟ, ಭಾಷಾ ಸಂಗೋಪನೆ ಮತ್ತು ಭಾಷಾ ಪಲ್ಲಟ, ಭಾಷಾ ಮನೋಶಾಸ್ತ್ರ, ಭಾಷಾ ನಡವಳಿಕೆಗಳು, ಭಾಷಾ ಆಯ್ಕೆ - ಇವುಗಳಲ್ಲಿ ಒಂದೊಂದರ ಬಗೆಗೂ ಹೆಚ್ಚಿನ ಸೂಕ್ಷ್ಮ ಅಧ್ಯಯನವನ್ನು ಕನ್ನಡದ ಸಂದರ್ಭದಲ್ಲಿ ಮಾಡುವ ಅಗತ್ಯವಿದೆ. ಇದರಿಂದಾಗಿ ದ್ವಿಭಾಷಾ ಪರಿಸರಗಳ ಸ್ವರೂಪ ಮತ್ತು ಪರಿಣಾಮಗಳನ್ನು ಹಲವು ನೆಲೆಗಳಲ್ಲಿ ಗುರುತಿಸಬಹುದಾಗಿದೆ.



# ಅನುಬಂಧಗಳು

1. ಕೋಲಾರ ಮತ್ತು ಬಳ್ಳಾರಿ ಪರಿಸರದ ಕನ್ನಡ - ತೆಲುಗು ದ್ವಿಭಾಷಾ ಅಂಶಗಳ ತೌಲನಿಕ ಸಮೀಕ್ಷೆ
2. ಸೂಕ್ಷ್ಮ ಅಧ್ಯಯನಕ್ಕೆ ಒಳಪಡಿಸಿರುವ ತೆಲುಗು - ಕನ್ನಡ ದ್ವಿಭಾಷಾ ಕುಟುಂಬಗಳ ವಿವರಗಳು
3. ಪ್ರಶ್ನಾವಳಿಗಳು
4. ಉಲ್ಲೇಖಿತ ಗ್ರಂಥಗಳು ಮತ್ತು ಪರಾಮರ್ಶನ ಗ್ರಂಥಗಳು

# ಅನುಬಂಧ

## ಕೋಲಾರ ಮತ್ತು ಬಳ್ಳಾರಿ ಪರಿಸರದ ಕನ್ನಡ - ತೆಲುಗು ದ್ವಿಭಾಷಾ ಸಂದರ್ಭದಲ್ಲಿನ ತೌಲನಿಕ ಅಂಶಗಳನ್ನು ಕುರಿತಂತೆ

ಭಾರತದಲ್ಲಿ ದ್ವಿಭಾಷಿಕತೆ ಮತ್ತು ಬಹುಭಾಷಿಕತೆ ಸಹಜವಾದದ್ದು. ಆದರೆ ಭಾರತದಲ್ಲಿನ ಎಲ್ಲಾ ದ್ವಿಭಾಷಿಕ ಸಂದರ್ಭಗಳೂ ಸ್ವರೂಪದಲ್ಲಿ ಪರಿಣಾಮದಲ್ಲಿ ಒಂದೇ ರೀತಿ ಇರುವುದಿಲ್ಲ. ಇದಕ್ಕೆ ಪ್ರತಿಯೊಂದು ದ್ವಿಭಾಷಾ ಸಂದರ್ಭಗಳಲ್ಲಿನ ಚಾರಿತ್ರಿಕ ಕಾರಣಗಳು, ಪ್ರಸ್ತುತ ವಿದ್ಯಮಾನಗಳು ಕಾರಣವಾಗುವುದರ ಜೊತೆಗೆ, ದ್ವಿಭಾಷಾ ಪರಿಸರದಲ್ಲಿ ಬಳಕೆಯಾಗುವ ಭಾಷೆಗಳ ಸಮಾಜೋಭಾಷಿಕ ಕಾರ್ಯಗಳು, ಬಹುಸಂಖ್ಯಾತ ಭಾಷಿಕರ ಸ್ಥಾನ - ಮಾನಗಳು, ಸಮಾಜದ ಸಂರಚನೆಯ ಸ್ವರೂಪ, ಶೈಕ್ಷಣಿಕ ಸಂದರ್ಭಗಳು ಹೀಗೆ ಹಲವು ಕಾರಣಗಳು ಪ್ರತಿಯೊಂದು ದ್ವಿಭಾಷಾ ಸಂದರ್ಭಗಳಲ್ಲಿನ ಭಾಷಿಕರ ಕಲಿಕೆ - ಬಳಕೆಯನ್ನು ನಿಯಂತ್ರಿಸುತ್ತಿರುತ್ತದೆ ಮತ್ತು ನಿರ್ದೇಶಿಸುತ್ತಿರುತ್ತದೆ. ಜೊತೆಗೆ ಪ್ರತಿಯೊಂದು ದ್ವಿಭಾಷಿಕ ಸಂದರ್ಭಗಳಲ್ಲಿ. ಭಾಷಿಕರ ನಡವಳಿಕೆಗಳು, ಭಾಷಾಧೋರಣೆ, ಭಾಷಾ ಮನೋಭಾವಗಳು ಭಿನ್ನವಾಗಿರುತ್ತವೆ. ದ್ವಿಭಾಷಾ ಸಂದರ್ಭಗಳು ಚಲನಶೀಲವಾದ್ದರಿಂದ ಬದಲಾವಣೆಗೆ ಒಳಗಾಗುತ್ತಿರುತ್ತವೆ, ಸ್ಥಿರವಾಗಿರುವುದಿಲ್ಲ. ಈ ಬದಲಾವಣೆ ವ್ಯಕ್ತಿಯಲ್ಲಿ ಮತ್ತು ಸಮುದಾಯದಲ್ಲಿ ಭಿನ್ನವಾಗಿರಬಹುದು. ಕೆಲವೊಮ್ಮೆ ಒಂದೇ ಆಗಿರಬಹುದು. ಇಲ್ಲಿ ಕನ್ನಡ - ತೆಲುಗು ದ್ವಿಭಾಷಾ ಸಂದರ್ಭಗಳಿರುವ ಎರಡು ಜಿಲ್ಲೆಗಳಲ್ಲಿ ಹೇಗೆ ದ್ವಿಭಾಷಿಕತೆ ಭಿನ್ನವಾಗಿದೆ ಎಂದು ನೋಡುವುದರ ಮೂಲಕ ಯಾವುದೇ ದ್ವಿಭಾಷಾ ಸಂದರ್ಭಗಳು ಭಿನ್ನವಾಗಿರಲು ಸಾಧ್ಯ. ಒಂದು ದ್ವಿಭಾಷಾ ಸಂದರ್ಭವಿದ್ದಂತೆ ಮತ್ತೊಂದು ದ್ವಿಭಾಷಾ ಸಂದರ್ಭವಿರಲಾರದು ಎನ್ನುವುದನ್ನು ತೌಲನಿಕವಾಗಿ ನೋಡುವುದರ ಮೂಲಕ ಕೆಲವು ಸಂಗತಿಗಳಿರುವುದನ್ನು ಕಾಣಬಹುದಾಗಿದೆ.

ಕೋಲಾರ ದ್ವಿಭಾಷಾ ಪರಿಸರದಲ್ಲಿ ಹುಟ್ಟಿ ಬೆಳೆದು, ಬಳ್ಳಾರಿ ದ್ವಿಭಾಷಿಕ ಪರಿಸರದಲ್ಲಿ ಬದುಕು ಮಾಡುತ್ತಿರುವ ಸಂದರ್ಭದಲ್ಲಿ ಎರಡೂ ಜಿಲ್ಲೆಗಳ ಕನ್ನಡ - ತೆಲುಗು ದ್ವಿಭಾಷಾ ಪರಿಸರಗಳಲ್ಲಿನ ತೌಲನಿಕವಾದ ಕೆಲವು ಸಂಗತಿಗಳನ್ನು ಮುಂದಿಡಲಾಗಿದೆ.

ಬೀದರ್ ಜಿಲ್ಲೆಯಿಂದ - ಕೋಲಾರ ಜಿಲ್ಲೆಯವರೆಗೆ ಕರ್ನಾಟಕದ ಗಡಿಭಾಗವನ್ನು ಸಂಧಿಸುವ ಆಂಧ್ರಪ್ರದೇಶದ ಗಡಿಭಾಗವು ಕನ್ನಡ - ತೆಲುಗು ದ್ವಿಭಾಷಾ ಸಂದರ್ಭಗಳು ಉಂಟಾಗಲು ಕಾರಣವಾಗಿದೆ. ಈ ಗಡಿಭಾಗದ ಪ್ರಾಂತ್ಯಗಳಲ್ಲಿ ಉಂಟಾಗಿರುವ ದ್ವಿಭಾಷಿಕತೆಯು ಪ್ರತಿಯೊಂದು ಪ್ರಾಂತ್ಯ ಚರಿತ್ರೆಯ ಹಿನ್ನೆಲೆಯಲ್ಲಿ ಭಿನ್ನವಾಗಿರುವುದಲ್ಲದೆ, ಭಾಷಿಕರ ಕಲಿಕೆ - ಬಳಕೆಗಳೂ ಭಿನ್ನವಾಗಿರುವಂತಿದೆ. ಆದ್ದರಿಂದ ಬಳ್ಳಾರಿ ಮತ್ತು ಕೋಲಾರದ ದ್ವಿಭಾಷಾ ಸಂದರ್ಭಗಳನ್ನು ತೌಲನಿಕವಾಗಿ ನೋಡುವುದರ ಮೂಲಕ ಈ ಭಿನ್ನತೆ ಏನು ಎಂದು ಅರಿಯುವುದೇ ಆಗಿದೆ. ಜೊತೆಗೆ ಪ್ರತಿಯೊಂದು ದ್ವಿಭಾಷಾ ಸಂದರ್ಭದ ಅಧ್ಯಯನವನ್ನು ಕೈಗೊಳ್ಳುವಾಗ ಒಂದು ದ್ವಿಭಾಷಾ ಸಂದರ್ಭವಿದ್ದಂತೆ ಮತ್ತೊಂದು ದ್ವಿಭಾಷಾ ಸಂದರ್ಭವಿರುತ್ತದೆಂದು ಭಾವಿಸಲಾಗದು. ಕೋಲಾರ ಜಿಲ್ಲೆಯ ಶ್ರೀನಿವಾಸಪುರ, ಮುಳಬಾಗಿಲು, ಚಿಂತಾಮಣಿ, ಚಿಕ್ಕಬಳ್ಳಾಪುರ, ಶಿಡ್ಲಘಟ್ಟ, ಗುಡಿಬಂಡೆ, ಬಾಗೆಪಲ್ಲಿ, ಗೌರಿಬಿದನೂರು, ಕೋಲಾರ, ಮಾಲೂರು ತಾಲ್ಲೂಕುಗಳ ಹೆಚ್ಚು ಭಾಗ ಆಂಧ್ರದ ತೆಲುಗು ಭಾಷಿಕ ಪ್ರದೇಶಗಳೊಡನೆ ತಾಗಿಕೊಂಡಿದೆ. ಕೆ.ಜಿ.ಎಫ್ ಮತ್ತು ಬಂಗಾರಪೇಟೆ ಔದ್ಯೋಗಿಕ ಕಾರಣದಿಂದಾಗಿ ಬಹುಸಂಖ್ಯೆಯ ತಮಿಳರಿಂದ ಕೂಡಿದ್ದು, ಕೆಲವರಷ್ಟೇ ತೆಲುಗು ಭಾಷಿಕರಿದ್ದಾರೆ. ಆಂಧ್ರಪ್ರದೇಶದ ಗಡಿಭಾಗಕ್ಕೆ ಹೊಂದಿಕೊಂಡಿರುವ ಹನ್ನೊಂದು ತಾಲ್ಲೂಕುಗಳಲ್ಲೇ ಹೆಚ್ಚು - ಕಡಿಮೆ ವ್ಯಾಪಾರ - ವಹಿವಾಟು ಹೆಚ್ಚಾಗಿ ನಡೆಯುತ್ತಿದ್ದು, ಕೆಲವೊಂದು ತಾಲ್ಲೂಕುಗಳು ಮುಖ್ಯ ವ್ಯಾಪಾರ ಕೇಂದ್ರಗಳೇ ಆಗಿವೆ. ದಿನನಿತ್ಯದ ವ್ಯವಹಾರಗಳಿಗಾಗಿ, ಪ್ರಾಥಮಿಕ ಅವಶ್ಯಕತೆಗಳ ಪೂರೈಕೆಗಾಗಿ, ಗಡಿಭಾಗದ ಭಾಷಿಕರು ಒಬ್ಬರನ್ನೊಬ್ಬರು ಅವಲಂಬಿಸಿರುವುದಲ್ಲದೆ, ವೈವಾಹಿಕ ಸಂಬಂಧಗಳು, ಶಿಕ್ಷಣ, ಉದ್ಯೋಗ ಹೀಗೆ ಹಲವಾರು ಕಾರಣಗಳಿಗಾಗಿ ಒಬ್ಬರಿಗೊಬ್ಬರು ಸಂಪರ್ಕಿಸಬೇಕಿದೆ. ಆದ್ದರಿಂದ ಬಹುಸಂಖ್ಯಾತ ತೆಲುಗು ಭಾಷಿಕರು ಇರುವುದು ಕಂಡುಬರುತ್ತಿದೆ. ಕನ್ನಡಿಗರು ಅಲ್ಪಸಂಖ್ಯೆಯ ಭಾಷಿಕರಾಗಿದ್ದು, ಕರ್ನಾಟಕದ ರಾಜಧಾನಿಗೆ ಹತ್ತಿರವಿರುವ ತಾಲ್ಲೂಕುಗಳಲ್ಲಿ, ಕೋಲಾರದಂತಹ ನಗರ ಪ್ರದೇಶದಲ್ಲಿ ಹೆಚ್ಚಾಗಿ ವಾಸಿಸುವಂತಿದೆ. ಮಿಕ್ಕಂತೆ ಎಲ್ಲಾ ತಾಲ್ಲೂಕುಗಳಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಕನ್ನಡಿಗರ ಜೊತೆಗೆ ತೆಲುಗರೂ ಹೆಚ್ಚಿನ ಸಂಖ್ಯೆಯಲ್ಲಿ ವಾಸಿಸುತ್ತಾರೆ. ಇದರಿಂದ ಈ ದ್ವಿಭಾಷಾ ಸಂದರ್ಭವನ್ನು ಅಧ್ಯಯನ ಮಾಡಿದ ಡಾ. ಕೃಷ್ಣ ಪರಮೇಶ್ವರ ಭಟ್ಟರು ಹೇಳುವಂತೆ "ತೆಲುಗು ಭಾಷಿಕರು ಕನ್ನಡ ಕಲಿಯುವ ಅವಶ್ಯಕತೆಗಿಂತ ಕನ್ನಡ ಭಾಷಿಕರು ತೆಲುಗನ್ನು ಕಲಿಯುವಂತೆ ಒತ್ತಾಯಿಸುವ ಸನ್ನಿವೇಶವಿದೆಯೆಂದೋ ಕನ್ನಡ ಭಾಷಿಕರ ಒಲವು ಹೆಚ್ಚಾಗಿ ತೆಲುಗಿನ ಕಡೆಗಿದೆ" ಎಂದಿದ್ದಾರೆ. ಅದೇ ಬಳ್ಳಾರಿ ದ್ವಿಭಾಷಾ ಸಂದರ್ಭವನ್ನು ನೋಡಿದರೆ ಈ ಪರಿಸ್ಥಿತಿ ಭಿನ್ನವಾಗಿದೆ.

ಬಳ್ಳಾರಿ ಜಿಲ್ಲೆಯ ಸಿರುಗುಪ್ಪ, ಬಳ್ಳಾರಿ, ಸಂಡೂರು, ಹೊಸಪೇಟೆ, ಹಗರಿಬೊಮ್ಮನಹಳ್ಳಿ, ಹಡಗಲಿ, ಕೂಡ್ಲಿಗಿ ತಾಲ್ಲೂಕುಗಳಲ್ಲಿ ಬಳ್ಳಾರಿಯ ಉತ್ತರ ಮತ್ತು ಪೂರ್ವಭಾಗದ ತಾಲ್ಲೂಕುಗಳಾದ ಸಿರುಗುಪ್ಪ, ಬಳ್ಳಾರಿ, ಸಂಡೂರು ಮತ್ತು ಹೊಸಪೇಟೆ ತಾಲ್ಲೂಕುಗಳಲ್ಲಿ ಮಾತ್ರ ತೆಲುಗು ಭಾಷಿಕರು ಹೆಚ್ಚು ನೆಲೆಸಿರುವುದು ಕಂಡುಬರುತ್ತಿದೆ. ಬಳ್ಳಾರಿ ಜಿಲ್ಲೆಯ ಪಶ್ಚಿಮ ಭಾಗದ ತಾಲ್ಲೂಕುಗಳಾದ ಹಡಗಲಿ, ಹಗರಿಬೊಮ್ಮನಹಳ್ಳಿ, ಕೂಡ್ಲಿಗಿ ತಾಲ್ಲೂಕುಗಳಲ್ಲಿ ತೆಲುಗು ಭಾಷಿಕರು ನೆಲೆಸಿರುವರಾದರೂ, ಪೂರ್ವದ ತಾಲ್ಲೂಕುಗಳಷ್ಟಿಲ್ಲ. ಜೊತೆಗೆ ಬಳ್ಳಾರಿಯೇ ತೆಲುಗು ಭಾಷಿಕರಿಗೆ ಹೆಚ್ಚಿನ ಸಂದರ್ಭದಲ್ಲಿ ವ್ಯಾಪಾರ, ವಾಣಿಜ್ಯ, ವ್ಯವಹಾರಗಳಿಗಾಗಿ, ರಾಜಕೀಯ ಚಟುವಟಿಕೆಗಳಿಗಾಗಿ ಕೇಂದ್ರ ಪ್ರದೇಶದಂತಿರುವುದರಿಂದ ಬಹಳಷ್ಟು ತೆಲುಗರು ಬಳ್ಳಾರಿ ಪಟ್ಟಣದಲ್ಲೇ ನೆಲೆನಿಂತಿದ್ದಾರೆ. ಬಳ್ಳಾರಿ ಜಿಲ್ಲೆಯಲ್ಲಿ ಉಂಟಾದ ಔದ್ಯಮಿಕ ಪ್ರಕ್ರಿಯೆ, ಗಣಿಗಾರಿಕೆ, ತುಂಗಭದ್ರ ಆಣೆಕಟ್ಟು ನಿರ್ಮಾಣದಿಂದಾಗಿ ಸೃಷ್ಟಿಯಾದ ಉದ್ಯೋಗಾವಕಾಶಗಳಿಗೆ ತೆಲುಗರ ವಲಸೆಯೆ ದೊಡ್ಡ ಪ್ರಮಾಣದಲ್ಲಿ ಹರಿದುಬಂದಿದೆ. ಇವರೆಲ್ಲ ಹೆಚ್ಚಿನ ಸಂಖ್ಯೆಯ ಭಾಷಿಕರು ಒಂದೇ ಪ್ರದೇಶಗಳಲ್ಲಿ ನೆಲೆನಿಂತಿರುವುದರಿಂದ ಅಂತಹ ಪ್ರದೇಶಗಳನ್ನು ತೆಲುಗು ಕ್ಯಾಂಪ್‌ಗಳೆಂದು ಕರೆಯಲಾಗುತ್ತದೆ. ಬಹಳಷ್ಟು ಭಾಷಿಕರಿಗೆ ಕೂಲಿಯೇ ಜೀವನಾಧಾರವಾಗಿರುವುದರಿಂದ ಇಲ್ಲಿ ಬಹುಸಂಖ್ಯಾತ ಕನ್ನಡಿಗರ ಭಾಷೆಯನ್ನು ಕಲಿಯುವ ಅವಶ್ಯಕತೆಗಳು ತೆಲುಗು ಭಾಷಿಕರಿಗೆ ಉಂಟಾಗಿವೆ. ಆದರೆ ಅದಕ್ಕೆ ವಿರುದ್ಧವಾಗಿ ಕನ್ನಡಿಗರು ತೆಲುಗು ಕಲಿಯುವ ಅವಶ್ಯಕತೆಗಳು ಇಲ್ಲ. ಬಹುಸಂಖ್ಯಾತ ಕನ್ನಡಿಗರು ಕೃಷಿಕರಾಗಿದ್ದು, ಇವರ ಮನೆ ಭಾಷೆಗಳು ಕನ್ನಡವೇ ಆಗಿರುವುದರಿಂದ ಬಹುಸಂಖ್ಯಾತ ಕನ್ನಡಿಗರೊಂದಿಗೆ ವ್ಯವಹರಿಸಲು ಕನ್ನಡವನ್ನು ಕಲಿತು - ಬಳಸುವ ಅವಶ್ಯಕತೆ ಇದೆ.

ಬಳ್ಳಾರಿ ಪರಿಸರದಲ್ಲಿ ತೆಲುಗು ಭಾಷಿಕರನೇಕರು ಮನೆ, ಸಂಬಂಧಿಕರು, ಸ್ನೇಹಿತರು, ಮುಂತಾದ ಆವರಣಗಳಲ್ಲಿ ಒಳಗುಂಪುಗಳಲ್ಲಿ ತೆಲುಗು ಭಾಷೆಯನ್ನು ಹೆಚ್ಚಿನ ಸಂದರ್ಭದಲ್ಲಿ ಉಳಿಸಿಕೊಂಡಿದ್ದಾರೆ. ಔಪಚಾರಿಕ ಸಂದರ್ಭಗಳಲ್ಲಿ ಹೆಚ್ಚು ತೆಲುಗು ಭಾಷೆಯನ್ನು ಬಳಸುವುದಿಲ್ಲ. ಆದರೆ ಕೋಲಾರದ ದ್ವಿಭಾಷಾ ಪರಿಸರದಲ್ಲಿ ಕನ್ನಡಿಗರು ಮನೆಯಲ್ಲಿ ಕನ್ನಡ ಮಾತನಾಡಿದರೂ ಹೊರಗೆ ತೆಲುಗು ಬಳಸುವ ಸಂದರ್ಭಗಳೆ ಹೆಚ್ಚು. ಔಪಚಾರಿಕ ಸಂದರ್ಭಗಳಲ್ಲಿ ತೆಲುಗು ಭಾಷೆಯನ್ನು ಬಳಸುವುದರಲ್ಲಿ ಯಾವುದೇ ಹಿಂಜರಿಕೆಗಳು ಭಾಷಿಕರಿಗಿಲ್ಲ. ಹೊರ ಆವರಣಗಳಲ್ಲಿ ತೆಲುಗು ಭಾಷೆಯ ಬಳಕೆ ಸಾರ್ವಜನಿಕ ಒಪ್ಪಂದ ಎನ್ನುವಂತೆ ಬಳಕೆಯಾಗುತ್ತಿದೆ.

ಕೋಲಾರದ ದ್ವಿಭಾಷಾ ಸಂದರ್ಭದಲ್ಲಿ ದ್ವಿಭಾಷಿಕತೆ ಉಂಟಾಗಿರುವುದು ಸಾಮಾಜೀಕರಣದಿಂದಲೆ ಹೆಚ್ಚಿನ ಸಂದರ್ಭಗಳಲ್ಲಿ ಕಾಣುವಂತದ್ದು. ಅಲ್ಲಿ ತೆಲುಗು ಭಾಷೆಯನ್ನು ಶಿಕ್ಷಣ ಮಾಧ್ಯಮವಾಗಿ ಓದುವವರು ಇಲ್ಲ. ತೆಲುಗು ಮಾಧ್ಯಮಶಾಲೆಗಳು ಇದ್ದಂತೆ ಕಾಣುವುದಿಲ್ಲ. ಆದರೆ ಬಳ್ಳಾರಿ ದ್ವಿಭಾಷಾ ಪರಿಸರದಲ್ಲಿ ದ್ವಿಭಾಷಿಕತೆ ಉಂಟಾಗಿರುವ

ನೆಲೆಗಳು ಭಿನ್ನವಾಗಿವೆ. ಮೊದಲ ತಲೆಮಾರುಗಳಲ್ಲಿ ಉಂಟಾಗಿರುವ ದ್ವಿಭಾಷಿಕತೆಯು ಸಾಮಾಜೀಕರಣದಿಂದಲೇ ಹೆಚ್ಚು ಉಂಟಾಗಿದ್ದರೆ, ಈಗಿನ ತಲೆಮಾರುಗಳಲ್ಲಿ ಸಾಕ್ಷರತೆಯೂ ಸೇರಿ ದ್ವಿಭಾಷಿಕತೆ ಉಂಟಾಗುತ್ತಿದೆ. ಕೋಲಾರದ ದ್ವಿಭಾಷಾ ಪರಿಸರದಲ್ಲಿ ಶಾಲೆಗಳಲ್ಲಿ ತೆಲುಗು ಮಾಧ್ಯಮ ಇಲ್ಲದೆ ಇದ್ದರೂ ಪಠ್ಯವನ್ನು ಅರ್ಥೈಸುವಾಗ ತೆಲುಗು ಭಾಷಿಕ ಮಕ್ಕಳಿಗೆ ತೆಲುಗು ಮೂಲಕ ಕನ್ನಡ, ಇಂಗ್ಲಿಶ್ ಮತ್ತು ಇತರೆ ವಿಷಯಗಳನ್ನು ಶಿಕ್ಷಕರು ಅರ್ಥೈಸುತ್ತಾರೆ. ಇದು ಹೆಚ್ಚು ಗಡಿಭಾಗದ ಎಲ್ಲಾ ತಾಲ್ಲೂಕುಗಳಲ್ಲಿಯೂ ಕಾಣುತ್ತದೆ. ಆದರೆ ಬಳ್ಳಾರಿ ಪರಿಸರದಲ್ಲಿ ಅಷ್ಟೊಂದು ಕಾಣುತ್ತಿಲ್ಲ. ಬಹುಶಃ ಕನ್ನಡ ಶಿಕ್ಷಕರಿಗೆ ತೆಲುಗು ಗೊತ್ತಿಲ್ಲದಿರುವುದೇ ಇದಕ್ಕೆ ಕಾರಣವಿರಬಹುದು.

ಬಳ್ಳಾರಿ ಪರಿಸರದಲ್ಲಿ ಕೃಷಿಯನ್ನು, ವ್ಯಾಪಾರವನ್ನು ಅವಲಂಬಿಸಿರುವವರು, ಬಹುಸಂಖ್ಯಾತ ಕನ್ನಡಿಗರು. ಜೊತೆಗೆ ಕನ್ನಡಿಗರು ಜನಸಂಖ್ಯೆ ದೃಷ್ಟಿಯಿಂದಲೂ ಮೊದಲ ಸ್ಥಾನದಲ್ಲಿದ್ದು ತೆಲುಗರು ಮೂರನೇ ಸ್ಥಾನದಲ್ಲಿರುವುದರಿಂದಲೂ ತೆಲುಗರಿಗೆ ಕನ್ನಡ ಕಲಿಯುವ ಒತ್ತಾಯವಿರುವಂತೆ, ಕನ್ನಡಿಗರಿಗೆ ತೆಲುಗು ಕಲಿಯುವ ಒತ್ತಾಯಗಳು ಇಲ್ಲದಿರುವುದಕ್ಕೆ ಇದೊಂದು ಕಾರಣ. ಅದೇ ಕೋಲಾರದ ಪರಿಸರದಲ್ಲಿ ಕನ್ನಡಿಗರಿಗಿಂತ ತೆಲುಗರೇ ಬಹುಸಂಖ್ಯಾತರಾಗಿದ್ದು, ಕೃಷಿ, ವ್ಯಾಪಾರ ಇತ್ಯಾದಿಗಳನ್ನು ತೆಲುಗರೇ ಅವಲಂಬಿಸಿರುವುದರಿಂದ ಕನ್ನಡಿಗರಿಗೆ ತೆಲುಗು ಕಲಿಯುವ ಒತ್ತಾಯವಿದ್ದಂತೆ ತೆಲುಗರಿಗೆ ಕನ್ನಡ ಕಲಿಯುವ ಒತ್ತಾಯವೂ ಇದೆ. ಹೆಚ್ಚಾಗಿ ಏಕಭಾಷಿಕರು ಇರುವಂತೆ ತೋರುತ್ತಿಲ್ಲ. ಅಷ್ಟರಮಟ್ಟಿಗೆ ಕೋಲಾರ ಪರಿಸರದಲ್ಲಿ ದ್ವಿಭಾಷಿಕತೆಯು ಹೆಚ್ಚು ಉಂಟಾಗಿರುವಂತಿದೆ. ಕನ್ನಡಿಗರು ತೆಲುಗು ಭಾಷೆಯನ್ನು, ತೆಲುಗರು ಕನ್ನಡ ಭಾಷೆಯನ್ನು ಮೌಖಿಕ ನೆಲೆಗಳಲ್ಲಿ ಕಲಿತು ಬಳಸುತ್ತಾರೆ. ಹಾಗೆಯೇ ತೆಲುಗರು ಭಾಷಾದ್ವೀಪಗಳೆಂದು ಗುರ್ತಿಸುವ ರೀತಿಯಲ್ಲಿ ಬದುಕು ಮಾಡಿಲ್ಲ. ಕನ್ನಡಿಗರ ಒಟ್ಟಿಗೆಯೇ ತೆಲುಗರು ಬದುಕು ಮಾಡಿರುವುದರಿಂದ ಸಹಜವಾಗಿ ಎರಡೂ ಭಾಷೆಗಳು ಕನ್ನಡಿಗರು ಮತ್ತು ತೆಲುಗರಿಗೆ ಲಭಿಸಿರುತ್ತವೆ. ಆದ್ದರಿಂದ ಕನ್ನಡ ಭಾಷೆಯ ಮೇಲೆ ತೆಲುಗಿನ ಪ್ರಭಾವ ಹೆಚ್ಚಾಗಿದೆ. ಕನ್ನಡ ಭಾಷಿಕರ ಸಂಭಾಷಣೆಗಳನ್ನೋ, ಯಾವುದೋ ವಿಷಯಕ್ಕೆ ಸಂಬಂಧಿಸಿದಂತಹ ದೀರ್ಘವಾದ ಮಾತುಕತೆಯನ್ನೋ ಕೇಳಿದರೆ ಮಧ್ಯೆ - ಮಧ್ಯೆ ತೆಲುಗಿನ ಗಾದೆಗಳು, ಜನಪ್ರಿಯ ಮಾತುಗಳು ಕನ್ನಡಕ್ಕೆ ಅನುವಾದಿಸದೆ ಹಾಗೇ ಬಳಸಲಾಗುತ್ತಿರುತ್ತದೆ. ಇಂತಹ ಸಂಗತಿಯನ್ನು ಕೃಷ್ಣ ಪರಮೇಶ್ವರ ಭಟ್ಟ ಅವರು ತಮ್ಮ ಸಂಶೋಧನೆಯಲ್ಲಿ ಕಂಡುಕೊಂಡಿದ್ದಾರೆ. ಇದಕ್ಕೆ ಕಾರಣ, ಬಹುಶಃ ಕೋಲಾರದ ದ್ವಿಭಾಷಾ ಪರಿಸರದಲ್ಲಿ ಮೌಖಿಕವಾಗಿಯೇ ಹೆಚ್ಚು ದ್ವಿಭಾಷಿಕರು ಎರಡು ಭಾಷೆಗಳನ್ನು ಬಳಸುತ್ತಿರುವುದರಿಂದಲೂ, ಕನ್ನಡ ಭಾಷೆಯ ಮೌಖಿಕ ಕೌಶಲಗಳ ಮೇಲೆ ತೆಲುಗಿನ ಪ್ರಭಾವ ಹೆಚ್ಚಾಗಿರುವುದು ಕಾಣುತ್ತದೆ. ಹಾಗೆಯೇ ಮನೆಯಲ್ಲಿ ಕನ್ನಡಿಗರಿಗೆ ಬಹಳಷ್ಟು ಕಡೆಗಳಲ್ಲಿ ಕನ್ನಡ ಭಾಷೆ ಪ್ರಧಾನವಾದರೆ ಹೊರಗಡೆ ತೆಲುಗು ಭಾಷೆಯೇ ಪ್ರಧಾನ. ತೆಲುಗರಿಗೆ ತೆಲುಗು ಮನೆಯಲ್ಲಿ ಪ್ರಧಾನವಾದರೆ, ಹೊರ ಆವರಣಗಳಲ್ಲಿಯೂ ಹೆಚ್ಚಾಗಿ ತೆಲುಗು, ಅಲ್ಪ ಪ್ರಮಾಣದಲ್ಲಿ ಕನ್ನಡ ಭಾಷೆಯನ್ನು ಬಳಸುತ್ತಾರೆ. ಮೊದಲ ಮತ್ತು ಎರಡನೆ ತಲೆಮಾರುಗಳಲ್ಲಿ ಕನ್ನಡಿಗರೇ ತೆಲುಗಿಗೆ ಬೇಗ

ನುಡಿಪಲ್ಲಟವಾದರೆ, ತೆಲುಗರು ಈಗಿನ ತಲೆಮಾರಿನವರನ್ನು ಮಾತಾಡುವ ಸಂದರ್ಭಗಳಲ್ಲಿ ಕನ್ನಡಕ್ಕೆ ನುಡಿಪಲ್ಲಟವಾಗುತ್ತಾರೆ. ಆದರೆ ಬಳ್ಳಾರಿ ಪರಿಸರದಲ್ಲಿ ತೆಲುಗರೇ ಬೇಗ ಕನ್ನಡಕ್ಕೆ ನುಡಿಪಲ್ಲಟವಾಗುತ್ತಾರೆ. ಕನ್ನಡಿಗರು ಬಹಳ ಕಡಿಮೆ ಪ್ರಮಾಣದಲ್ಲಿ ಮಾತ್ರ ತೆಲುಗಿಗೆ ನುಡಿಪಲ್ಲಟವಾಗುತ್ತಾರೆ.

ಕೋಲಾರ ಪರಿಸರದಲ್ಲಿ ತೆಲುಗು ಮನೆಮಾತನಾಡುವ ಭಾಷಿಕರಲ್ಲಿ ಬಲಿಜ, ನಾಯ್ಡು, ವೈಶ್ಯ, ರೆಡ್ಡಿ, ಒಕ್ಕಲಿಗೆ, ಪರಿಶಿಷ್ಟ ಜಾತಿ ಮತ್ತು ಇತರೆ ಜಾತಿಗಳಲ್ಲಿ ಹೆಚ್ಚಿನವರಿದ್ದು, ಇವರೇ ಎಲ್ಲೆಡೆಗಳಲ್ಲಿ ಪ್ರಧಾನವಾಗಿ ಕಾಣುವುದರಿಂದಲೂ, ವೈವಾಹಿಕ ಸಂಬಂಧಗಳು, ವ್ಯಾಪಾರದ ಸಂಬಂಧಗಳೂ, ಹತ್ತಿರದ ಪ್ರದೇಶಗಳಲ್ಲಿ ನೆಲೆಸಿರುವುದರಿಂದಲೂ, ಕೃಷಿ ಕುಟುಂಬಗಳು ಹೆಚ್ಚಾಗಿ ಇರುವುದರಿಂದಲೂ ತೆಲುಗು ಭಾಷೆಯು ಮೌಖಿಕ ನೆಲೆಗಳಲ್ಲೇ ಬಳಕೆಯಾಗುತ್ತಿದ್ದರೂ ಹೆಚ್ಚಿನ ಸಂದರ್ಭದಲ್ಲಿ ಉಳಿದಿದೆ. ಆದರೆ ಬಳ್ಳಾರಿ ಪರಿಸರದಲ್ಲಿ ಕನ್ನಡ ಮನೆಮಾತಾಗಿರುವ ಜಾತಿಗಳೇ ಲಿಂಗಾಯತ, ಕುರುಬ, ನಾಯಕ, ಹೆಚ್ಚಿನ ಸಂಖ್ಯೆಯಲ್ಲಿ ಕಾಣುತ್ತಿರುವುದಲ್ಲದೆ, ಕೃಷಿ, ವ್ಯಾಪಾರ, ಶಿಕ್ಷಣ ಸಂಸ್ಥೆಗಳು, ಇತ್ಯಾದಿಗಳನ್ನು ಹೆಚ್ಚಾಗಿ ಹೊಂದಿದ್ದು, ರಾಜಕೀಯದಲ್ಲೂ ಮುಂದಿರುವುದರಿಂದ, ಅಣು ಕುಟುಂಬಗಳಲ್ಲಿ ವಾಸಿಸುತ್ತಿರುವುದರಿಂದ, ಹೆಚ್ಚಿನ ಸಾಮಾಜಿಕ ಸಂಪರ್ಕ ಕನ್ನಡಿಗರು - ಕನ್ನಡಿಗರ ನಡುವೆಯೇ ನಡೆಯುವುದರಿಂದ (ಬಳ್ಳಾರಿ ನಗರವನ್ನು ಹೊರತುಪಡಿಸಿ) ಕನ್ನಡ ಭಾಷೆಯೇ ಅಧಿಕವಾಗಿ ಬಳಕೆಯಾಗುತ್ತದೆ.

ಬಳ್ಳಾರಿ ಮತ್ತು ಕೋಲಾರ ಎರಡೂ ದ್ವಿಭಾಷಾ ಸಂದರ್ಭಗಳಲ್ಲೂ ತೆಲುಗು ಭಾಷೆಯನ್ನು ಕನ್ನಡಿಗರು ಗ್ರಹಿಕೆಯ ನೆಲೆಗಳಲ್ಲಿ ಹೆಚ್ಚು ಪಡೆದಂತಿದೆ. ಕಾರಣ ತೆಲುಗು ಸಿನಿಮಾ, ಟಿ.ವಿ.ಚಾನಲ್‌ಗಳನ್ನು ಹೆಚ್ಚು ನೋಡುವುದರಿಂದ ಗ್ರಹಿಕೆ ನೆಲೆಗಳಲ್ಲಿ ತೆಲುಗು ಭಾಷೆ ಕನ್ನಡಿಗರಲ್ಲಿದೆ. ಆದ್ದರಿಂದ ಅರೆ ದ್ವಿಭಾಷಿಕತೆಯ ಸಂದರ್ಭಗಳನ್ನು ಗಮನಿಸಬಹುದಾಗಿದೆ. ಭಾಷಾ ಧೋರಣೆ ಎರಡೂ ಪ್ರಾಂತ್ಯಗಳಲ್ಲಿನ ಭಾಷಿಕರಲ್ಲಿ ಎರಡೂ ಭಾಷೆಗಳ ಬಗೆಗೆ ಆರೋಗ್ಯಪೂರ್ಣವಾಗಿದೆ. ಭಾಷಿಕರ ನಡವಳಿಕೆಗಳು ಸ್ವಲ್ಪ ಭಿನ್ನವಾಗಿವೆ. ಬಳ್ಳಾರಿ ಪರಿಸರದ ಭಾಷಿಕರ ಮನೋಭಾವಗಳಲ್ಲಿ ಕೆಳವರ್ಗ ಮತ್ತು ಕೆಳಮಧ್ಯಮ ವರ್ಗದ ವಲಸಿಗ ಕುಟುಂಬಗಳು ಸಾಮಾಜಿಕವಾಗಿ ಮೇಲ್‌ಮುಖ ಚಲನೆಯ ಕಡೆ ಚಲಿಸಲು ಕನ್ನಡಕ್ಕೆ ಹೆಚ್ಚಿನ ಪಲ್ಲಟ ವಾಗುತ್ತಿದ್ದರೆ, ಮೇಲ್‌ವರ್ಗದ ವಲಸಿಗ ತೆಲುಗು ಕುಟುಂಬಗಳು ಇಂಗ್ಲಿಶ್ ಭಾಷೆ ಸಾಕ್ಷರತೆಯ ಪಲ್ಲಟವನ್ನು ಹೊಂದಿದ್ದಾರೆ. ಕೋಲಾರ ಪರಿಸರದಲ್ಲಿ ತೆಲುಗು ಭಾಷಿಕರು ಮೊದಲಿನಿಂದಲೂ ಸಾಕ್ಷರತೆಯನ್ನು ಕನ್ನಡ ಮತ್ತು ಇಂಗ್ಲಿಶ್‌ನಲ್ಲೇ ಪಡೆಯುತ್ತಿರುವುದರಿಂದ, ತೆಲುಗು ಸಾಕ್ಷರತೆ ಇಳಿಮುಖವಾಗುವ ಪ್ರಶ್ನೆಯೇ ಇಲ್ಲ. ಸಮಾಜದಲ್ಲಾಗುತ್ತಿರುವ ಪ್ರಸ್ತುತ ವಿದ್ಯಮಾನಗಳಿಗೆ ಮುಖಾಮುಖಿಯಾಗಿ ದ್ವಿಭಾಷಾ ಸಂದರ್ಭಗಳು ಹೆಚ್ಚು ಚಲನಶೀಲ ಪ್ರಕ್ರಿಯೆಗೆ ಒಳಗಾಗುತ್ತಿವೆ. ಶಿಕ್ಷಣದಿಂದ ಉಂಟಾಗುತ್ತಿರುವ ದ್ವಿಭಾಷಾ ಸಂದರ್ಭಗಳು ಹೆಚ್ಚು ಚಲನಶೀಲ ಪ್ರಕ್ರಿಯೆಗೆ ಒಳಗಾಗುತ್ತಿವೆ. ಶಿಕ್ಷಣದಿಂದ ಉಂಟಾಗುತ್ತಿರುವ ದ್ವಿಭಾಷಿಕತೆಯು ಭಾರತದ ದ್ವಿಭಾಷಾ ಸಂದರ್ಭಗಳಲ್ಲಿ ಹೆಚ್ಚಿನ ಬದಲಾವಣೆಯನ್ನುಂಟು ಮಾಡುತ್ತಿದೆ. ಅಲ್ಲದೆ

ಜಾಗತೀಕರಣ ಸಂದರ್ಭದಲ್ಲಿ ಇಂಗ್ಲಿಶ್ ಭಾಷೆಯು ಇತರ ಭಾರತೀಯ ಭಾಷೆಗಳ ಮೇಲೆ ಉಂಟುಮಾಡುತ್ತಿರುವ ಪರಿಣಾಮವು ಪ್ರತಿಯೊಂದು ದ್ವಿಭಾಷಾ ಸಂದರ್ಭವೂ ಭಿನ್ನ ರೀತಿಯಲ್ಲಿ ಬದಲಾವಣೆಗೆ ಒಳಗಾಗುತ್ತಿದೆ.ಆದ್ದರಿಂದ ಪ್ರತಿಯೊಂದು ದ್ವಿಭಾಷಾ ಪರಿಸರವು ಪ್ರಾಂತ್ಯ ಚರಿತ್ರೆಯ ಹಿನ್ನೆಲೆಯಿಂದಲೂ, ಸಮಾಜದ ಸಂರಚನೆಯ ಸ್ವರೂಪದಿಂದಲೂ ಸಮಾಜೋಭಾಷಿಕ ಅಂಶಗಳು ಭಾಷಿಕರ ಕಲಿಕೆ - ಬಳಕೆಯ ಮೇಲೆ ಬೀರುವ ಪರಿಣಾಮದಿಂದಲೂ ಹೀಗೆ ಹಲವು ನೆಲೆಗಳಲ್ಲಿ ಭಿನ್ನವಾಗಿದೆ.

## ತೆಲುಗು - ಕನ್ನಡ ದ್ವಿಭಾಷಿಕ ಕುಟುಂಬ - 1

ಜಾತಿ - ಅಗಸ, ವರ್ಗ - ಕೆಳಮಧ್ಯಮ, ಕುಟುಂಬ - ಅಣುಕುಟುಂಬ

| ಸಮಾಜೋಭಾಷಿಕ ಅಂಶಗಳು | | | | ಭಾಷಾ ಬಳಕೆ ಆವರಣಗಳು | | | | | | | | | | ಭಾಷಾ ಕೌಶಲಗಳು | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|
| | | | | | | | | | | | | | | ಮಾತು | | ಅರ್ಥ | | ಓದು | | ಬರೆ | |
| ಲಿಂಗ | ವಯಸ್ಸು | ಶಿಕ್ಷಣ | ವೃತ್ತಿ | 1 | 2 | 3 | 4 | 5 | 6 | 7 | 8 | 9 | 10 | ಕ | ತೆ | ಕ | ತೆ | ಕ | ತೆ | ಕ | ತೆ |
| ಬಾಲಮ್ಮ | 48 | ಅವಿದ್ಯಾವಂತೆ | ಮನೆಕೆಲಸ | ತೆ | ಕ | ತೆ | ತೆ/ಕ | - | ಕ | ಕ | ತೆ | ಕ | ತೆ | ✓ | ✓ | ✓ | ✓ | x | x | x | x |
| ರಾಮುಲು | 52 | 7ನೇ ತರಗತಿ | ಇಸ್ತ್ರಿ ಮಾಡುವುದು | ತೆ | ಕ | ತೆ | ತೆ/ಕ | ಕ | ಕ | ಕ | ತೆ | ಕ | ತೆ | ✓ | ✓ | ✓ | ✓ | ✓ | x | ✓ | x |
| ಮುರಳಿ | 18 | 9ನೇ ತರಗತಿ | ಇಸ್ತ್ರಿ ಮಾಡುವುದು | ತೆ | ಕ | ತೆ | ತೆ/ಕ | ಕ | ಕ | ಕ | ತೆ | ಕ | ತೆ | ✓ | ✓ | ✓ | ✓ | ✓ | x | ✓ | x |
| ಸುಜಾತ | 15 | 5ನೇ ತರಗತಿ | ಮನೆಕೆಲಸ | ತೆ | ಕ | ತೆ | ತೆ/ಕ | ಕ | ಕ | ಕ | ತೆ | ಕ | ತೆ | ✓ | ✓ | ✓ | ✓ | ✓ | x | ✓ | x |

1. ಮನೆ, 2. ಅಕ್ಕ - ಪಕ್ಕದ ಮನೆ, 3. ಸಂಬಂಧಿಕರು, 4. ಸ್ನೇಹಿತರು, 5. ಶಾಲೆಯಲ್ಲಿ, 6. ಕೆಲಸ ಮಾಡುವ ಕಡೆ, 7. ಮಾರುಕಟ್ಟೆ, 8. ಪ್ರಾರ್ಥನೆ - ಹಾಡು, 9. ಅಪರಿಚಿತರನ್ನು ಕಂಡಾಗ, 10. ಟಿ.ವಿ.ನೋಡುವಾಗ

ಹೊಸಪೇಟೆಯ ಪಂಡರಾಪುರದಲ್ಲಿ ಈ ದ್ವಿಭಾಷಿಕ ಕುಟುಂಬವು ನೆಲೆಸಿದೆ. ಇವರ ಸ್ವಂತ ಸ್ಥಳ ಬಳ್ಳಾರಿ. ಅನೇಕ ತಲೆಮಾರುಗಳ ಹಿಂದೆ ಈ ಕುಟುಂಬದ ಹಿರಿಯರು ಆಂಧ್ರಪ್ರದೇಶದ ಕಡಪದಿಂದ ಬಳ್ಳಾರಿಗೆ ಬಂದು ನೆಲೆಸಿದ್ದಾರೆ. ಈ ಕುಟುಂಬದವರು ಗುಂತಕಲ್ಲು, ಬಳ್ಳಾರಿ, ಹುಬ್ಬಳ್ಳಿ, ಹೊಸಪೇಟೆ, ಬೆಂಗಳೂರುಗಳಲ್ಲಿ ಸಂಬಂಧಿಕರನ್ನು ಹೊಂದಿದ್ದಾರೆ. ಇವರಿರುವ ಪರಿಸರದಲ್ಲಿ ಕನ್ನಡ - ತೆಲುಗು ಭಾಷೆಗಳನ್ನು ಸಹಜವಾಗಿ ಬಳಸುವ ಸಂದರ್ಭಗಳು ಒದಗಿವೆ. ಇವರು ಸ್ವಂತ ಮನೆಯನ್ನು ಹೊಂದಿದ್ದು, ಬಟ್ಟೆ ಒಗೆಯುವುದು, ಇಸ್ತ್ರಿ ಮಾಡುವುದು, ಮನೆಕೆಲಸ ಮಾಡುವುದು ಇವರ ದಿನಿತ್ಯದ ಉದ್ಯೋಗವಾಗಿದೆ. ಇವರಿಗೆ ಮನೆ ಆವರಣ, ಸಂಬಂಧಿಕರಲ್ಲಿ ತೆಲುಗು ಪ್ರಧಾನ ಭಾಷೆಯಾಗಿದ್ದರೆ, ಹೊರ ಆವರಣಗಳಲ್ಲಿ ಕನ್ನಡವೇ ಪ್ರಧಾನ ಭಾಷೆಯಾಗಿದೆ. ಕಾರಣ ಕನ್ನಡದ ಸಾಮಾಜಿಕ ಸಂದರ್ಭಗಳಲ್ಲಿ ಬದುಕು ಮಾಡಿರುವುದರಿಂದ ನೆರೆಹೊರೆ, ಸ್ನೇಹಿತರು, ಕೆಲಸ ಮಾಡುವ ಕಡೆಗಳಲ್ಲಿ, ಮಾರುಕಟ್ಟೆ ಇತ್ಯಾದಿ ಆವರಣಗಳಲ್ಲಿ ಕನ್ನಡವನ್ನು ಬಳಸುವ ಅವಶ್ಯಕತೆ ಇರುವುದರಿಂದ ಔಪಚಾರಿಕ ಸಂದರ್ಭಗಳೆಲ್ಲ ಕನ್ನಡವೇ ಇವರಿಗೆ ಪ್ರಧಾನ ಭಾಷೆಯಾಗಿದೆ. ಕನ್ನಡಿಗರ ನಡುವೆಯೇ ಹೆಚ್ಚಿನ ಉದ್ಯೋಗದ ಸಂದರ್ಭಗಳು ಇರುವುದರಿಂದ ತೆಲುಗನ್ನು ದಿನನಿತ್ಯದಲ್ಲಿ ಬಳಸುವುದು ಕೇವಲ ಕೆಲವೇ ಕೆಲವು ಅವಧಿ ಮಾತ್ರ. ಇನ್ನು ಮಕ್ಕಳಿಗೆ ಕನ್ನಡ ಮಾಧ್ಯಮದಲ್ಲಿ ಕೆಲವು ಹಂತದವರೆಗೂ ಶಿಕ್ಷಣವನ್ನು ಕೊಡಿಸಿದ್ದರಿಂದ ತಂದೆ - ತಾಯಿಗಿಂತ ಮಕ್ಕಳು ಹೆಚ್ಚಾಗಿ ಕನ್ನಡವನ್ನು ಬಳಸುತ್ತಾರೆ.

ಕುಟುಂಬದ ಯಜಮಾನ ಸಹ ಕನ್ನಡ ಮಾಧ್ಯಮದಲ್ಲೆ ಓದಿ, ಕನ್ನಡದ ಸಂದರ್ಭದಲ್ಲೆ ಕುಲಕಸುಬನ್ನು ಮಾಡುತ್ತಿರುವುದರಿಂದ ಕನ್ನಡವನ್ನು ಬಳಸುವ ಸಂದರ್ಭಗಳು ಹೆಚ್ಚಾಗಿವೆ. ಕುಟುಂಬದ ಯಜಮಾನಿ ವಿವಾಹಾನಂತರದಲ್ಲಿ ಕನ್ನಡವನ್ನು ಕಲಿಯುವ ಸಂದರ್ಭಗಳಿಗೆ ಒಳಗಾಗಿರುವುದು, ಈಕೆ ಅನೌಪಚಾರಿಕವಾಗಿ ಕನ್ನಡವನ್ನು ಕಲಿತಿರುವುದರಿಂದಲೂ, ಪ್ರಥಮ ಭಾಷೆಯೊಂದು ಕಲಿತ ಅನೇಕ ವರ್ಷಗಳ ನಂತರದಲ್ಲಿ ಎರಡನೆ ಭಾಷೆಯೊಂದನ್ನು ಕಲಿತದ್ದರಿಂದಲೂ ಈಕೆಯಲ್ಲಿ ನುಡಿಮಿಶ್ರಣ, ನುಡಿಜಿಗಿತದ ಪ್ರಕ್ರಿಯೆಗಳು ಹೆಚ್ಚಾಗಿ ಕಾಣುತ್ತವೆ. ಈಕೆ ಕೆಲಸ ಮಾಡುವ ಕಡೆಗಳಲ್ಲಿ ಕನ್ನಡವನ್ನು ಬಳಸಿದರೂ, ಸ್ನೇಹಿತರು, ಮನೆ ಮಾಲೀಕರು, ಕುಟುಂಬದ ಸದಸ್ಯರೊಂದಿಗೆ ಮಾತನಾಡುವಾಗ ತೆಲುಗಿಗೆ ಪಲ್ಲಟಗೊಳ್ಳುತ್ತಾಳೆ. ಈ ಮಹಿಳೆಯು ದೀರ್ಘವಾಗಿ ಕನ್ನಡದಲ್ಲಿ ಮಾತನಾಡುವ ಸಂದರ್ಭದಲ್ಲಿ ತಕ್ಷಣಕ್ಕೆ ಹೊಳೆಯದೇ ಹೋದ ಕನ್ನಡದ ಪದಗಳನ್ನು ತೆಲುಗು ಮಿಶ್ರಮಾಡಿ ಬೆರಸುವುದನ್ನು ಕಾಣಲಾಗಿದೆ. ಈಕೆ ಅವಿದ್ಯಾವಂತೆಯಾಗಿದ್ದು, ವಿವಾಹಿತಳಾದ ನಂತರದಲ್ಲಿ ಕನ್ನಡವನ್ನು ಕಲಿತು ಬಳಸುತ್ತಿರುವುದರಿಂದ ಕನ್ನಡ ಭಾಷೆಯ ವಿಸ್ತಾರ ಕಡಿಮೆ. ಅದೇ ಈಕೆಯ ಗಂಡ, ಮಕ್ಕಳು, ಸಾಕ್ಷರತೆಯನ್ನು ಕನ್ನಡದಲ್ಲಿ ಪಡೆದಿರುವುದರಿಂದ, ಕನ್ನಡದ ಸಾಮಾಜಿಕ ಸಂದರ್ಭಗಳಲ್ಲಿ ದಿನನಿತ್ಯದ ವ್ಯವಹಾರಗಳಿರುವುದರಿಂದ ಕನ್ನಡವನ್ನು ಬಳಸುವಲ್ಲಿ ಇವರಿಗೆ ಹೆಚ್ಚಿನ ತೊಡಕುಗಳಿಲ್ಲ. ಮಕ್ಕಳ ವೈವಾಹಿಕ ಸಂದರ್ಭಗಳಲ್ಲಿ ಇವರ ಆಯ್ಕೆಯಲ್ಲಿ ಭಾಷೆಗೆ ಪ್ರಾಧಾನ್ಯತೆ. ವಿವಾಹ ಪತ್ರಿಕೆಯನ್ನು ಕನ್ನಡ - ತೆಲುಗು ಎರಡೂ ಭಾಷೆಗಳಲ್ಲಿಯೂ ಮುದ್ರಿಸುತ್ತಾರೆ. ಇವರುಗಳು ತೆಲುಗು ಭಾಷೆಯನ್ನು ಬಳಸುವ ಅವಶ್ಯಕತೆಗಳು ಹೊಸಪೇಟೆಗಿಂತ ಬಳ್ಳಾರಿಯ ಸಂದರ್ಭಗಳಲ್ಲಿ ಹೆಚ್ಚಾಗಿವೆ ಎನ್ನುತ್ತಾರೆ. ಕುಲಕಸುಬನ್ನು ಮಾಡುತ್ತಿರುವುದರಿಂದ, ಹತ್ತಿರದಲ್ಲೆ ಸಂಬಂಧಿಕರನ್ನು ಹೊಂದಿರುವುದರಿಂದ, ವೈವಾಹಿಕ ಸಂಬಂಧಗಳನ್ನು ಅವರ ಭಾಷಿಕರಲ್ಲೆ ನಡೆಸುವುದರಿಂದ, ತಮ್ಮ ಸ್ವಭಾಷೆಯನ್ನು ಕೆಲವೇ ಕೆಲವು ಆವರಣಗಳಲ್ಲಿ ಉಳಿಸಿಕೊಂಡಿದ್ದಾರೆ. ಅಲ್ಲದೆ, ಟಿ.ವಿ., ಸಿನಿಮಾ, ಧಾರವಾಹಿಗಳನ್ನು ತೆಲುಗು ಭಾಷೆಯಲ್ಲೆ ಹೆಚ್ಚಾಗಿ ನೋಡುವುದರಿಂದ ತೆಲುಗು ಭಾಷೆಯನ್ನು ಗೃಹಿಕೆಯ ನೆಲೆಯಲ್ಲಿ ಇನ್ನು ಹೆಚ್ಚಾಗಿ ಸಂಗೋಪನೆ ಮಾಡುತ್ತಿದ್ದಾರೆ. ಇವರ ಬಳಿ ತೆಲುಗು ಭಾಷೆಯಲ್ಲಿ ಮಾತನಾಡಿದರೆ ಆತ್ಮೀಯ ಭಾವವನ್ನು ತಮ್ಮ ನಡವಳಿಕೆಗಳಿಂದ ವ್ಯಕ್ತಪಡಿಸುತ್ತಾರೆ. ಕನ್ನಡ ಭಾಷೆಯ ಬಗೆಗೆ ಉತ್ತಮವಾದ ಮನೋಭಾವವನ್ನು ವ್ಯಕ್ತಪಡಿಸುವ ಇವರು ತೆಲುಗು ಭಾಷೆಯನ್ನು ಹೆಚ್ಚಾಗಿ ಇಷ್ಟಪಡುತ್ತಾರೆ. ಅಪರಿಚಿತರನ್ನು ಕಂಡಾಗ ಇವರ ಮೊದಲ ಆಯ್ಕೆ ಕನ್ನಡ, ಎರಡನೆಯ ಆಯ್ಕೆ ತೆಲುಗು.

## ತೆಲುಗು - ಕನ್ನಡ ದ್ವಿಭಾಷಿಕ ಕುಟುಂಬ - 2

ಜಾತಿ - ಆದಿದ್ರಾವಿಡ, ವರ್ಗ - ಮೇಲ್‌ಮಧ್ಯಮ, ಕುಟುಂಬ - ಅಣುಕುಟುಂಬ

| ಸಮಾಜೋಭಾಷಿಕ ಅಂಶಗಳು | | | | ಭಾಷಾ ಬಳಕೆ ಆವರಣಗಳು | | | | | | | | | | ಭಾಷಾ ಕೌಶಲಗಳು | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|
| | | | | | | | | | | | | | | ಮಾತು | | ಅರ್ಥ | | ಓದು | | ಬರೆ | |
| ಲಿಂಗ | ಮಯಸ್ಸು | ಶಿಕ್ಷಣ | ವೃತ್ತಿ | 1 | 2 | 3 | 4 | 5 | 6 | 7 | 8 | 9 | 10 | ಕ | ತೆ | ಕ | ತೆ | ಕ | ತೆ | ಕ | ತೆ |
| ನಿರ್ಮಲ | 41 | ಎ.ಎ | ಬ್ಯಾಂಕ್ ಉದ್ಯೋಗಿ | ತೆ/ಕ | ಕ | ತೆ | ಕ/ತೆ | ತೆ/ಕ | ಕ/ತೆ | ಕ/ತೆ | ತೆ | ಕ | ತೆ | ✓ | ✓ | ✓ | ✓ | ✓ | ✓ | ✓ | ✓ |
| ಮನೋಹರ | 43 | ಎ.ಎ | ರೈಲ್ವೆ ಉದ್ಯೋಗಿ | ತೆ/ಕ | ಕ | ತೆ | ಕ/ತೆ | ತೆ/ಕ | ಕ/ತೆ | ಕ/ತೆ | ತೆ | ಕ | ತೆ | ✓ | ✓ | ✓ | ✓ | ✓ | ✓ | ✓ | ✓ |
| ಜೀವನ್ | 16 | ಪದವಿಪೂರ್ವ | ವಿದ್ಯಾರ್ಥಿ | ತೆ/ಕ | ಕ | ತೆ | ಕ | ಇ | - | ಕ | ಕ | ಕ | ಹಿ/ತೆ | ✓ | ✓ | ✓ | ✓ | ✓ | x | ✓ | x |
| ನವೀನ್ | 12 | 7ನೇ ತರಗತಿ | ವಿದ್ಯಾರ್ಥಿ | ಕ | ಕ | ತೆ | ಕ | ಇ | - | ಕ | ಕ | ಕ | ಹಿ | ✓ | ✓ | ✓ | ✓ | ✓ | x | ✓ | x |

1. ಮನೆ, 2. ಅಕ್ಕ - ಪಕ್ಕದ ಮನೆ, 3. ಸಂಬಂಧಿಕರು, 4. ಸ್ನೇಹಿತರು, 5. ಶಾಲೆಯಲ್ಲಿ, 6. ಕೆಲಸ ಮಾಡುವ ಕಡೆ, 7. ಮಾರುಕಟ್ಟೆ, 8. ಪ್ರಾರ್ಥನೆ - ಹಾಡು, 9. ಅಪರಿಚಿತರನ್ನು ಕಂಡಾಗ, 10. ಟಿ.ವಿ.ನೋಡುವಾಗ

ಹೊಸಪೇಟೆಯ ಬಸವೇಶ್ವರ ಬಡಾವಣೆಯಲ್ಲಿ ಈ ದ್ವಿಭಾಷಿಕ ಕುಟುಂಬವು ನೆಲೆಸಿದೆ. ಈ ಕುಟುಂಬದಲ್ಲಿನ ಹಿರಿಯ ತಲೆಮಾರುಗಳು ಆಂಧ್ರದ ಗುತ್ತಿಯಿಂದ ಬಳ್ಳಾರಿಗೆ ಬಂದು ನೆಲೆಸಿದ್ದಾರೆ. ಈ ಕುಟುಂಬದವರು ಸ್ವಂತ ಮನೆ, ಜಮೀನುಗಳನ್ನು ಹೊಂದಿದ್ದು, ಗಂಡ - ಹೆಂಡತಿ ಇಬ್ಬರೂ ಸರ್ಕಾರ ಉದ್ಯೋಗದಲ್ಲಿದ್ದಾರೆ. ಇವರು ಹೈಸ್ಕೂಲ್‌ವರೆಗಿನ ಶಿಕ್ಷಣವನ್ನು ತೆಲುಗು ಮಾಧ್ಯಮದಲ್ಲೆ ಪಡೆದಿದ್ದು, ಕಾಲೇಜು ಹಂತದಲ್ಲಿ ಕನ್ನಡ - ಇಂಗ್ಲಿಶ್ ಮಾಧ್ಯಮಗಳಲ್ಲಿ ಶಿಕ್ಷಣವನ್ನು ಪಡೆದಿರುವುದಾಗಿ ಹೋಳಿಕೊಂಡಿದ್ದಾರೆ. ಇವರ ಮಕ್ಕಳು ಇಂಗ್ಲಿಶ್ ಮಾಧ್ಯಮಗಳಲ್ಲಿ ಶಿಕ್ಷಣವನ್ನು ಪಡೆಯುತ್ತಿದ್ದಾರೆ. ಇವರೂ ಸಹ ಕನ್ನಡದ ಸಾಮಾಜಿಕ ಸಂದರ್ಭಗಳಲ್ಲಿಯೇ ದಿನನಿತ್ಯದ ವ್ಯವಹಾರಗಳಿಗೆ ಒಳಗಾಗುವುದರಿಂದ ತೆಲುಗು ಭಾಷೆಯನ್ನು ಕೆಲವೇ ಕೆಲವು ಆವರಣಗಳಲ್ಲಿ ಉಳಿಸಿಕೊಂಡು ಕನ್ನಡವನ್ನು ಹೆಚ್ಚಿನ ಸಂದರ್ಭಗಳಲ್ಲಿ ಬಳಸುತ್ತಾರೆ. ಇವರಿಬ್ಬರೂ ಉದ್ಯೋಗ ಮಾಡುವ ಕಡೆಗಳಲ್ಲಿ ಎಲ್ಲಾ ಭಾಷೆಯ ಜನರು ದಿನನಿತ್ಯದ ವ್ಯವಹಾರಗಳಿಗೆ ಬಂದು ಹೋಗುವುದರಿಂದ ಇವರಲ್ಲಿ ನುಡಿ ಜಗಿತದ ಭಾಷಾ ಪ್ರಕ್ರಿಯೆಗಳಿರುವುದನ್ನು ಹೆಚ್ಚಾಗಿ ಕಾಣಲಾಗಿದೆ. ವೃತ್ತಿಯಿಂದಷ್ಟೆ ಅಲ್ಲ, ಹತ್ತಿರದಲ್ಲೆ ಸಂಬಂಧಿಕರನ್ನು, ತೆಲುಗು ಭಾಷಿಕ ಸ್ನೇಹಿತರನ್ನು ಹೊಂದಿರುವುದರಿಂದಲೂ, ಸಹೋದ್ಯೋಗಿಗಳು ಅನೇಕರು ತೆಲುಗು ಭಾಷಿಕರಾಗಿರುವುದರಿಂದಲೂ ಹೊರ ಆವರಣಗಳಲ್ಲಿಯೂ ಕನ್ನಡದಷ್ಟೇ ತೆಲುಗು ಭಾಷೆಯನ್ನು ಬಳಸುವುದನ್ನು ಕಾಣಲಾಗಿದೆ. ಜೊತೆಗೆ ತೆಲುಗು ಸಿನಿಮಾ, ಧಾರವಾಹಿಗಳನ್ನು ಹೆಚ್ಚಾಗಿ ನೋಡುವುದಲ್ಲದೆ, ವಾರಪತ್ರಿಕೆ, ಮಾಸಪತ್ರಿಕೆಗಳನ್ನು ತೆಲುಗು ಭಾಷೆಯಲ್ಲೆ ಓದುತ್ತಾರೆ.

ಮನೆಯಲ್ಲಿ ಗಂಡ - ಹೆಂಡತಿ ತೆಲುಗಿನಲ್ಲೆ ಮಾತನಾಡಿಕೊಂಡರೆ ಮಕ್ಕಳೊಡನೆ ಕನ್ನಡವನ್ನು ಮಾತನಾಡುತ್ತಾರೆ. ಇವರು ಹೇಳುವ ಪ್ರಕಾರ ತಮ್ಮ ಮಕ್ಕಳು ಶಾಲೆಗೆ ಹೋಗಲು ಪ್ರಾರಂಭಿಸಿದಾಗಿನಿಂದ ಕನ್ನಡವನ್ನು ಹೆಚ್ಚಾಗಿ ಬಳಸುವ ಅನಿವಾರ್ಯ ಒದಗಿತು. ಈಗ ತೆಲುಗಿಗಿಂತ ಕನ್ನಡವನ್ನು ಬಳಸುವ ಅವಶ್ಯಕತೆಗಳು ಹೆಚ್ಚಾಗುತ್ತಿವೆ. ನೆರೆಹೊರೆ, ಸ್ನೇಹಿತರು, ಔಪಚಾರಿಕ ಸಂದರ್ಭಗಳಲ್ಲಿ ಹೆಚ್ಚಾಗಿ ಕನ್ನಡವನ್ನು ಬಳಸುವ ಅವಶ್ಯಕತೆಗಳಿವೆ. ಇವರಿಗೆ ಭಾಷಾ ಮಿಶ್ರಣ ಮಾಡುವ ಸಂದರ್ಭಗಳು ಬಂದರೆ ಇಂಗ್ಲಿಶ್ - ಕನ್ನಡ ಮಿಶ್ರ ಭಾಷೆಯಾಗಿ ಬಳಸುತ್ತಾರೆ. ತೆಲುಗನ್ನು ಮಿಶ್ರಮಾಡುವುದಿಲ್ಲ. ಔಪಚಾರಿಕ ಸಂದರ್ಭಗಳಲ್ಲಿ ಇವರು ಇತರರೊಂದಿಗೆ ಮಾತನಾಡುವಾಗ ಮೊದಲ ಆಯ್ಕೆ ಕನ್ನಡ, ಎರಡನೆಯ ಆಯ್ಕೆ ತೆಲುಗು, ಇವರ ಮಕ್ಕಳಲ್ಲಿ ಹಿರಿಯ ಮಗ ತಂದೆ - ತಾಯಿಗಳೊಂದಿಗೆ ಕನ್ನಡ ತೆಲುಗು ಎರಡೂ ಭಾಷೆಗಳಲ್ಲಿ ಮಾತನಾಡಿದರೆ, ಕಿರಿಯ ಮಗ ಕೇವಲ ಕನ್ನಡದಲ್ಲಿ ಮಾತನಾಡುತ್ತಾನೆ. ಹಿರಿಯ ತಲೆಮಾರಿನ ಸಂಬಂಧಿಕರೊಂದಿಗೆ ಮಾತ್ರ ತೆಲುಗು ಭಾಷೆಯನ್ನು ಮಾತನಾಡುವ ಸಂದರ್ಭಗಳು ಈ ಮಕ್ಕಳಿಗಿವೆ. ಅದನ್ನು ಬಿಟ್ಟರೆ ಶಾಲೆ, ಸ್ನೇಹಿತರು, ನೆರೆಹೊರೆ, ಇತರೆ ಆವರಣಗಳೆಲ್ಲವೂ ಕನ್ನಡದ ಸಂದರ್ಭಗಳಲ್ಲಿಯೇ ಇರುವುದರಿಂದ ತೆಲುಗು ಬಳಸುವ ಅವಶ್ಯಕತೆಗಳು ಈ ಮಕ್ಕಳಿಗೆ ಇಲ್ಲ. ಈ ಮಕ್ಕಳು ಕನ್ನಡ - ತೆಲುಗು ದ್ವಿಭಾಷಿಕರಾಗುವುದಕ್ಕಿಂತ ಕನ್ನಡ - ಇಂಗ್ಲಿಶ್ ಹಿಂದಿ ದ್ವಿ -ಬಹುಭಾಷಿಕರಾಗುವ ಅವಶ್ಯಕತೆಯನ್ನು ವ್ಯಕ್ತಪಡಿಸಿದ್ದಾರೆ. ತೆಲುಗು ಭಾಷೆಯಲ್ಲಿ ಸಿನಿಮಾಗಳನ್ನು ಮಾತ್ರ ನೋಡುತ್ತಿದ್ದು, ಕೇವಲ ಗೃಹಿಕೆಯ ನೆಲೆಗಳಲ್ಲಿ ಮಾತ್ರ ತೆಲುಗು ಭಾಷೆಯನ್ನು ಉಳಿಸಿಕೊಂಡಿದ್ದಾರೆ. (ಬಳ್ಳಾರಿಯಲ್ಲಿ ಹೆಚ್ಚಿನ ಸಂದರ್ಭಗಳಲ್ಲಿ ಕನ್ನಡಿಗರು ತೆಲುಗನ್ನು ಗೃಹಿಕೆಯ ನೆಲೆಗಳಲ್ಲಿ ಪಡೆದಿರುವ ಸನ್ನಿವೇಶಗಳು ಕಾಣಬಹುದಾಗಿದೆ) ಮುಂದಿನ ದಿನಗಳಲ್ಲಿ ಈ ಕುಟುಂಬದಲ್ಲಿನ ಮಕ್ಕಳು ತೆಲುಗು ಭಾಷೆಯಿಂದ ಪೂರ್ಣ ಪಲ್ಲಟವನ್ನು ಹೊಂದುವ ಸಾಧ್ಯತೆಗಳು ಹೆಚ್ಚಾಗಿವೆಯೆಂದು ಕಾಣುತ್ತದೆ. ವೈವಾಹಿಕ ಸಂಬಂಧಗಳಲ್ಲಿ ಇವರ ಆಯ್ಕೆ ಕನ್ನಡ ಭಾಷೆಗೆ ಪ್ರಾಧಾನ್ಯತೆಯನ್ನು ವ್ಯಕ್ತಪಡಿಸಿದ್ದಾರಲ್ಲದೆ, ತೆಲುಗು ಭಾಷೆಯನ್ನು ಇಷ್ಟಪಟ್ಟರೂ, ಕನ್ನಡವನ್ನು ಹೆಚ್ಚಾಗಿ ಬಳಸಲು ಇಷ್ಟಪಡುತ್ತಾರೆ.

## ತೆಲುಗು - ಕನ್ನಡ ದ್ವಿಭಾಷಿಕ ಕುಟುಂಬ - 3

ಜಾತಿ - ಸಾಕಲು, ವರ್ಗ - ಕೆಳವರ್ಗ, ಕುಟುಂಬ - ಅವಿಭಕ್ತ

| ಸಮಾಜೋಭಾಷಿಕ ಅಂಶಗಳು | | | | ಭಾಷಾ ಬಳಕೆ ಆವರಣಗಳು | | | | | | | | | | ಭಾಷಾ ಕೌಶಲಗಳು | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|
| | | | | | | | | | | | | | | ಮಾತು | | ಅರ್ಥ | | ಓದು | | ಬರ | |
| ಲಿಂಗ | ವಯಸ್ಸು | ಶಿಕ್ಷಣ | ವೃತ್ತಿ | 1 | 2 | 3 | 4 | 5 | 6 | 7 | 8 | 9 | 10 | ಕ | ತೆ | ಕ | ತೆ | ಕ | ತೆ | ಕ | ತೆ |
| ಆದೆಮ್ಮ | 50 | ಅವಿದ್ಯಾವಂತ | ಇಲ್ಲ | ತೆ | ತೆ | ತೆ | ತೆ | - | ತೆ | ತೆ | ತೆ | ಕ | ತೆ | x | ✓ | ✓ | ✓ | x | x | x | x |
| ಗಂಗಮ್ಮ | 70 | ಅವಿದ್ಯಾವಂತ | ಇಲ್ಲ | ತೆ | ತೆ | ತೆ | ತೆ | - | ತೆ | ತೆ | ತೆ | ತೆ | ತೆ | x | ✓ | ✓ | ✓ | x | x | x | x |
| ರಮಣಮ್ಮ | 26 | ಅವಿದ್ಯಾಂತ | ಬಟ್ಟೆಹೊಗೆಯುವುದು | ತೆ | ತೆ | ತೆ | ತೆ | - | ತೆ | ತೆ | ತೆ | ತೆ | ತೆ | x | ✓ | ✓ | ✓ | x | x | x | x |
| ರಾಮಪ್ಪ | 35 | 7ನೇ ತರಗತಿ | ಇಸ್ತ್ರಿ ಮಾಡುವುದು | ತೆ | ತೆ | ತೆ | ತೆ | ತೆ | ತೆ/ಕ | ತೆ/ಕ | ತೆ | ಕ | ತೆ | ✓ | ✓ | ✓ | ✓ | x | ✓ | x | ✓ |
| ಆಂಜನೇಯಲು | 17 | 8ನೇ ತರಗತಿ | ಇಸ್ತ್ರಿ ಮಾಡುವುದು | ತೆ | ತೆ | ತೆ | ತೆ | ತೆ | ತೆ/ಕ | ಕ | ತೆ | ಕ | ತೆ | ✓ | ✓ | ✓ | ✓ | x | ✓ | x | ✓ |
| ಹರಿಕೃಷ್ಣ | 9 | 4ನೇ ತರಗತಿ | ವಿದ್ಯಾರ್ಥಿ | ತೆ | ತೆ | ತೆ | ತೆ/ಕ | ಕ | ಕ | ಕ | ತೆ | ಕ | ತೆ | ✓ | ✓ | ✓ | ✓ | ✓ | x | ✓ | x |
| ರವಿಕೃಷ್ಣ | 7 | 3ನೇ ತರಗತಿ | ವಿದ್ಯಾರ್ಥಿ | ತೆ | ತೆ | ತೆ | ತೆ/ಕ | ಕ | ಕ | ಕ | ತೆ | ಕ | ತೆ | ✓ | ✓ | ✓ | ✓ | ✓ | x | ✓ | x |

1. ಮನೆ, 2. ಅಕ್ಕ - ಪಕ್ಕದ ಮನೆ, 3. ಸಂಬಂಧಿಕರು, 4. ಸ್ನೇಹಿತರು, 5. ಶಾಲೆಯಲ್ಲಿ, 6. ಕೆಲಸ ಮಾಡುವ ಕಡೆ, 7. ಮಾರುಕಟ್ಟೆ, 8. ಪ್ರಾರ್ಥನೆ - ಹಾಡು, 9. ಅಪರಿಚಿತರನ್ನು ಕಂಡಾಗ, 10. ಟಿ.ವಿ.ನೋಡುವಾಗ

ತೆಲುಗು ಭಾಷಾದ್ವೀಪವೆಂದು ಗುರುತಿಸಲಾಗಿರುವ ಹೊಸಪೇಟೆಯ ಇಂದಿರಾನಗರದಲ್ಲಿ ಈ ದ್ವಿಭಾಷಿಕ ಕುಟುಂಬ ನೆಲೆಸಿದೆ. ಆಂಧ್ರಪ್ರದೇಶದ ಹಲವೆಡೆಗಳಿಂದ ಕೂಲಿಗಾಗಿ ಮತ್ತು ಇತರೆ ಉದ್ಯೋಗಗಳಿಗಾಗಿ ವಲಸೆ ಬಂದು ನೆಲೆಸಿರುವ ಅನೇಕ ತೆಲುಗು ಭಾಷಿಕ ಕುಟುಂಬಗಳು ಈ ಕುಟುಂಬದ ನೆರೆ ಹೊರೆಯಾಗಿವೆ. ಈ ಕುಟುಂಬವು ಹತ್ತು ವರ್ಷಗಳ ಹಿಂದೆ ಆಂಧ್ರಪ್ರದೇಶದ ಕದಿರಿಯಿಂದ ಕೂಲಿಗಾಗಿ ಇಲ್ಲಿ ಬಂದು ನೆಲೆಸಿದ್ದಾರೆ. ಇವರಿಗೆ ಸ್ವಂತ ಮನೆ, ಆಸ್ತಿಪಾಸ್ತಿಗಳೇನೂ ಇಲ್ಲ. ಪುಟ್ಟದಾದ ಬಾಡಿಗೆ ಮನೆಯೊಂದರಲ್ಲಿ ಒಟ್ಟಿಗೆ ನೆಲೆಸಿದ್ದಾರೆ. ಇಸ್ತ್ರಿ ಮಾಡುವುದಕ್ಕಾಗಿ ಅಂಗಡಿಯನ್ನು ಬಾಡಿಗೆಗೆ ಪಡೆದಿದ್ದಾರೆ. ಬಟ್ಟೆ ಹೊಗೆಯುವುದು, ಇಸ್ತ್ರಿ ಮಾಡುವುದು, ಮನೆಕೆಲಸ ಮಾಡುವುದು ಇವರ ದಿನನಿತ್ಯದ ಬದುಕು. ಇವರುಗಳು ಹೆಚ್ಚಿನ ತೆಲುಗು ಭಾಷೆಯ ಸಾಮಾಜಿಕ ಸಂದರ್ಭಗಳಿಗೆ ಒಳಗಾಗಿರುವುದರಿಂದ ಕನ್ನಡಕ್ಕೆ ಕೇವಲ ಆಂಶಿಕ ಪಲ್ಲಟವನ್ನು ಹೊಂದುತ್ತಾರೆ. ಈ ಕುಟುಂಬದ ಹಿರಿಯರು ಅವಿದ್ಯಾವಂತರಾಗಿದ್ದು, ಕಲಿಯುವ ಸಾಮರ್ಥ್ಯ ಮಾಸಿದ ವೃದ್ಧರಾಗಿದ್ದು, ಕನ್ನಡವನ್ನು ಕಲಿತು ಬಳಸುವ ಹೆಚ್ಚಿನ ಅವಶ್ಯಕತೆಗಳು ಇವರಿಗೆ ಇಲ್ಲದ ಸಂದರ್ಭಗಳಿರುವುದರಿಂದಲೂ ತೆಲುಗು ಏಕಭಾಷಿಕರಾಗಿ ಉಳಿದಿದ್ದಾರೆ. ಎರಡನೆಯ ತಲೆಮಾರಿನಲ್ಲಿನ ಮಹಿಳೆಯು ಅವಿದ್ಯಾವಂತೆಯಾಗಿದ್ದು,

ಕನ್ನಡವನ್ನು ಕೇವಲ ಗ್ರಹಿಕೆಯ ನೆಲೆಯಲ್ಲಿ ಮಾತ್ರ ಪಡೆದಿದ್ದಾಳೆ. ಮಾತನಾಡಲು ಬರುವುದಿಲ್ಲ. ಕನ್ನಡದಲ್ಲಿ ಮಾತನಾಡುವ ಸಂದರ್ಭ ಒದಗಿದರೆ ತೆಲುಗು ಮಿಶ್ರಿತ ಅಲ್ಪ ಸ್ವಲ್ಪ ಕನ್ನಡದಲ್ಲಿ ಮಾತನಾಡುವುದನ್ನು ಕಾಣಲಾಗಿದೆ. ಅದೇ ಪುರುಷರು ಕನ್ನಡ ಭಾಷೆಗೆ ಆಂಶಿಕ ಪಲ್ಲಟ ಮಾಡುವುದನ್ನು ಗಮನಿಸಲಾಗಿದೆ. ಕಾರಣ ವೃತ್ತಿಯ ಸಂದರ್ಭದಲ್ಲಿ ಕನ್ನಡಿಗರೊಂದಿಗೆ ವ್ಯವಹರಿಸಲು, ಔಪಚಾರಿಕ ಆವರಣಗಳಲ್ಲಿ ಕನ್ನಡವನ್ನು ಬಳಸಲು ಕನ್ನಡಕ್ಕೆ ಆಂಶಿಕ ಪಲ್ಲಟವನ್ನು ಮಾಡುತ್ತಿರುತ್ತಾರೆ. ಇನ್ನು ಈಗಿನ ತಲೆಮಾರಿನ ಅವರ ಮಕ್ಕಳು ಸಾಕ್ಷರತೆಯನ್ನು ಪಡೆಯುತ್ತಿರುವುದು ಕನ್ನಡ ಮಾಧ್ಯಮದಲ್ಲೆ. ಆದ್ದರಿಂದ ಮನೆ ಆವರಣ, ನೆರೆಹೊರೆ, ಸ್ನೇಹಿತರೊಂದಿಗೆ ತೆಲುಗು ಭಾಷೆಯನ್ನು ಬಳಸಿದರು. ಆ ಮಕ್ಕಳು ಇತರೆ ಆವರಣಗಳಲ್ಲಿ ಕನ್ನಡವನ್ನು ಬಳಸಲು ಆರಂಭಿಸಿದ್ದಾರೆ. ಮುಂಬರುವ ದಿನಗಳಲ್ಲಿ ಹೆಚ್ಚಾಗಿ ಕನ್ನಡವನ್ನು ಬಳಸುವ ಅವಶ್ಯಕತೆಗಳು ಇವರಿಗೆ ಒದಗಬಹುದು. ವೈವಾಹಿಕ ಸಂಬಂಧದಲ್ಲಿ ಇವರ ಆಯ್ಕೆ ಭಾಷೆಗೆ ಪ್ರಾಧ್ಯಾನ್ಯತೆ, ಕನ್ನಡ ಭಾಷೆಯ ಬಗೆಗೆ ಆರೋಗ್ಯಕರ ಮನೋಭಾವವನ್ನು ಹೊಂದಿರುವ ಇವರು ಇತರರೊಂದಿಗೆ ಮಾತನಾಡುವಾಗ ಮೊದಲ ಆಯ್ಕೆ ತೆಲುಗು, ತೆಲುಗು ಬರುವುದಿಲ್ಲವೆಂದರೆ ಕನ್ನಡ - ಮಿಶ್ರಿತ ತೆಲುಗಿನಲ್ಲಿ ಮಾತನಾಡುತ್ತಾರೆ. ತೆಲುಗು ಭಾಷಿಕರೆಲ್ಲಾ ಒಟ್ಟಾಗಿ ನೆಲೆಸಿರುವುದರಿಂದಲೂ, ಒಳಗುಂಪುಗಳಲ್ಲಿ ತೆಲುಗು ಭಾಷೆಯನ್ನು ಹೆಚ್ಚಾಗಿ ಬಳಸುತ್ತಿರುವುದರಿಂದಲೂ, ಕುಲಕಸುಬನ್ನು ಮಾಡುತ್ತಿರುವುದರಿಂದಲೂ, ಅವಿಭಕ್ತ ಕುಟುಂಬದಲ್ಲಿ ನೆಲೆಸಿರುವುದರಿಂದಲೂ, ತಾಯ್ನಾಡಿನೊಂದಿಗೆ ಸಂಪರ್ಕವಿಟ್ಟುಕೊಂಡಿರುವುದರಿಂದಲೂ, ಸ್ವಭಾಷೆಯನ್ನು ಹೆಚ್ಚಿನ ಸಂದರ್ಭಗಳಲ್ಲಿ ಉಳಿಸಿಕೊಂಡು ಕನ್ನಡಕ್ಕೆ ಆಂಶಿಕ ಪಲ್ಲಟವಾಗಿದ್ದಾರೆ. ಇವರ ಮಕ್ಕಳು ಕನ್ನಡದ ಸಾಕ್ಷರತೆಯ ಕೌಶಲಗಳಿಗೆ ಈಗ ಒಳಗಾಗಿರುವುದರಿಂದ ಕನ್ನಡ ಭಾಷೆಯ ಕೌಶಲಗಳು ಗಟ್ಟಿಗೊಂಡಂತೆ ಭಾಷಾ ಪಲ್ಲಟಗಳು ಉಂಟಾಗುವ ಸಾಧ್ಯತೆಗಳು ಈಗಿನ ತಲೆಮಾರುಗಳಲ್ಲಿ ಇವೆ.

## ತೆಲುಗು - ಕನ್ನಡ ದ್ವಿಭಾಷಿಕ ಕುಟುಂಬ - 4

ಜಾತಿ - ಕಮ್ಮ, ವರ್ಗ - ಮೇಲ್‌ಮಧ್ಯಮ, ಕುಟುಂಬ - ಅಣು

| ಸಮಾಜೋಭಾಷಿಕ ಅಂಶಗಳು | | | | ಭಾಷಾ ಬಳಕೆ ಆವರಣಗಳು | | | | | | | | | | ಭಾಷಾ ಕೌಶಲಗಳು | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|
| | | | | | | | | | | | | | | ಮಾತು | | ಅರ್ಥ | | ಓದು | | ಬರ | |
| ಲಿಂಗ | ವಯಸ್ಸು | ಶಿಕ್ಷಣ | ವೃತ್ತಿ | 1 | 2 | 3 | 4 | 5 | 6 | 7 | 8 | 9 | 10 | ಕ | ತೆ | ಕ | ತೆ | ಕ | ತೆ | ಕ | ತೆ |
| ವಾಣಿ | 32 | ಪದವಿ | ಮನೆಹೆಂಡತಿ | ತೆ | ಕ | ತೆ | ತೆ/ಕ | ತೆ | - | ಕ | ತೆ | ಕ | ತೆ | ✓ | ✓ | ✓ | ✓ | ✓ | ✓ | x | ✓ |
| ತಿಮ್ಮಪ್ಪ | 37 | ಎ.ಎ | ಖಾಸಗಿ ಸಂಸ್ಥೆ | ತೆ | ಕ | ತೆ | ತೆ/ಕ | ಕ | ಕ | ಕ | ತೆ | ಕ | ತೆ | ✓ | ✓ | ✓ | ✓ | ✓ | x | ✓ | x |
| ವರುಣ್ | 12 | 7ನೇ ತರಗತಿ | ವಿದ್ಯಾರ್ಥಿ | ತೆ | ಕ | ತೆ | ಕ | ಕ | - | ಕ | ತೆ | ಕ | ತೆ/ಹಿಂ | ✓ | ✓ | ✓ | ✓ | ✓ | x | ✓ | x |

1. ಮನೆ, 2. ಅಕ್ಕ - ಪಕ್ಕದ ಮನೆ, 3. ಸಂಬಂಧಿಕರು, 4. ಸ್ನೇಹಿತರು, 5. ಶಾಲೆಯಲ್ಲಿ, 6. ಕೆಲಸ ಮಾಡುವ ಕಡೆ, 7. ಮಾರುಕಟ್ಟೆ, 8. ಪ್ರಾರ್ಥನೆ - ಹಾಡು, 9. ಅಪರಿಚಿತರನ್ನು ಕಂಡಾಗ, 10. ಟಿ.ವಿ.ನೋಡುವಾಗ

ಹೊಸಪೇಟೆಯ ಎಂ.ಪಿ.ಪ್ರಕಾಶ್‌ನಗರದಲ್ಲಿ ಈ ದ್ವಿಭಾಷಿಕ ಕುಟುಂಬವು ನೆಲೆಸಿದೆ. ಕನ್ನಡದ ಸಾಮಾಜಿಕ ಸಂದರ್ಭಗಳಿಗೆ ಹೆಚ್ಚು ಒಳಗಾಗಿರುವುದರಿಂದ ಈ ದ್ವಿಭಾಷಿಕ ಕುಟುಂಬವು ಮನೆ ಆವರಣದಲ್ಲೆ ಹೆಚ್ಚಾಗಿ ಸ್ವಭಾಷೆಯೊಂದನ್ನು ಬಳಸುತ್ತಿದೆ. ಈ ಕುಟುಂಬದ ಯಜಮಾನನ ಸ್ವಂತ ಸ್ಥಳ ಬಳ್ಳಾರಿ ಜಿಲ್ಲೆಯ ಕುಡಿತಿನಿ. ಯಜಮಾನಿಯದು ಅನಂತಪುರ ಜಿಲ್ಲೆಯ ಸೋಲ್ಲಾಪುರಂ. ಈಕೆ ವೈವಾಹಿಕ ಸಂಬಂಧದಿಂದಾಗಿ ಇಲ್ಲಿ ಬಂದು ನೆಲೆಸಿರುವುದರಿಂದ ಈಕೆಯು ದ್ವಿಭಾಷಿಕಳಾಗುವ ಅವಶ್ಯಕತೆ ಉಂಟಾಗಿದೆ. ಈ ಕುಟುಂಬದವರು ಸ್ವಂತ ಮನೆ ಜಮೀನುಗಳನ್ನು ಕುಡಿತಿನಿಯಲ್ಲಿ ಹೊಂದಿದ್ದು, ಇಲ್ಲಿ ಬಾಡಿಗೆ ಮನೆಯೊಂದರಲ್ಲಿ ನೆಲೆಸಿದ್ದಾರೆ. ಮನೆ ಆವರಣದಲ್ಲಿ ಗಂಡ - ಹೆಂಡತಿ, ಮಗ ತೆಲುಗಿನಲ್ಲಿ ಮಾತನಾಡಿಕೊಂಡರು. ಮಿಕ್ಕಂತೆ ಇಲ್ಲಿನ ಸಂದರ್ಭದಲ್ಲಿ ಕನ್ನಡವನ್ನು ಬಳಸುವ ಅವಶ್ಯಕತೆಯು ಹೆಚ್ಚಿದೆ. ಜೊತೆಗೆ ಮಗನ ವಿದ್ಯಾಭ್ಯಾಸ ಇಂಗ್ಲಿಶ್ ಮಾಧ್ಯಮದಲ್ಲಾದರೂ, ಮಕ್ಕಳ ಆಟದ ಗುಂಪಿನೊಂದಿಗೆ, ನೆರೆಹೊರೆ, ಶಾಲೆಯಲ್ಲಿ, ಇತರೆ ಎಲ್ಲಾ ಆವರಣಗಳಲ್ಲೂ ಕನ್ನಡವನ್ನು ಬಳಸುತ್ತಾನೆ. ಹತ್ತಿರದ ಊರುಗಳಲ್ಲಿ ಸಂಬಂಧಿಕರಿರುವುದರಿಂದ, ತೆಲುಗು ಭಾಷಿಕ ಸ್ನೇಹಿತರು ಆಗಾಗ ಬಂದು ಹೋಗುವುದರಿಂದ, ತೆಲುಗು ಸಿನಿಮಾ, ಧಾರವಾಹಿ ಮುಂತಾದವುಗಳನ್ನು ಹೆಚ್ಚಾಗಿ ನೋಡುವುದರಿಂದಲೂ, ತೆಲುಗು ವಾರಪತ್ರಿಕೆ, ಮಾಸಪತ್ರಿಕೆ ಮುಂತಾದವುಗಳನ್ನು ಓದುವುದರಿಂದಲೂ ತೆಲುಗು ಭಾಷೆಯನ್ನು ಮನೆಯ ಒಡತಿ ಹೆಚ್ಚಿನ ಸಂದರ್ಭದಲ್ಲಿ ಉಳಿಸಿಕೊಂಡಿದ್ದರೆ, ಕುಟುಂಬದ ಯಜಮಾನ ಉದ್ಯೋಗದ ಸಂದರ್ಭಗಳಲ್ಲಿ ಒಳಗಾಗುವುದು ಕನ್ನಡ ಸಂದರ್ಭದಲ್ಲೆ. ಜೊತೆಗೆ ಶಿಕ್ಷಣವನ್ನು ಪಡೆದಿರುವುದು ಕನ್ನಡದ ಸಂದರ್ಭದಲ್ಲೆ ಆದ್ದರಿಂದ ಕನ್ನಡ ಭಾಷೆಯ ಬಳಕೆಯಲ್ಲಿ ಯಾವುದೇ

